ಈ ಪುಸ್ತಕದ ಮುದ್ರಣಕ್ಕೆ ಪುನರ್‌ಸಂಸ್ಕರಿಸಿದ ಪರಿಸರ ಸ್ನೇಹಪರ ಕಾಗದವನ್ನು ಬಳಸಲಾಗಿದೆ.

ISBN 81-237-1842-x

ಮೊದಲ ಮುದ್ರಣ: 1981 (ಶಕ 1902)
ತೃತೀಯ ಮುದ್ರಣ: 1996 (ಶಕ 1918)

ರೂ. **26.00**
RANI CHENNAMMA (Kannada Original)
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ–5, ಗ್ರೀನ್ ಪಾರ್ಕ್, ಹೊಸ ದೆಹಲಿ - 110 016
ಇವರಿಂದ ಪ್ರಕಟಿತ

# ಅರಿಕೆ

ನಾನು ತೀರ ಚಿಕ್ಕಂದಿನಲ್ಲಿಯೇ ಬ್ರಿಟಿಷರೊಂದಿಗೆ ಕೆಚ್ಚಿನಿಂದ ಕಾದಿದ ರಾಣಿ ಚೆನ್ನಮ್ಮನ ಶೌರ್ಯದ ಕಥೆಯನ್ನು ಕೇಳುತ್ತಿದ್ದೆ. ಆಮೇಲೆ ಅನೇಕ ವರ್ಷಗಳವರೆಗೆ ಬೇರೆ ಬೇರೆ ಮೂಲಗಳಿಂದ ಕಿತ್ತೂರಿನ ಇತಿಹಾಸವನ್ನು ಓದುತ್ತ ಬಂದೆ. ನಾನು ಒಂದಿಲ್ಲ ಒಂದು ದಿನ ಚೆನ್ನಮ್ಮನ ಜೀವನವನ್ನು ಚಿತ್ರಿಸುವ ಒಂದು ಸಮಗ್ರವಾದ ಐತಿಹಾಸಿಕ ಕಾದಂಬರಿಯನ್ನಾಗಲಿ, ನಾಟಕವನ್ನಾಗಲಿ ಬರೆಯಬೇಕೆಂಬ ವಿಚಾರ ಮನದಲ್ಲಿ ಹಲವಾರು ಸಲ ಸುಳಿದಾಡುತ್ತಿತ್ತು. ಸುದೈವದಿಂದ – ಅನಿರೀಕ್ಷಿತವಾಗಿ– ಕಾಕತಾಳಿಯ ನ್ಯಾಯದಂತೆ ರಾಣಿ ಚೆನ್ನಮ್ಮನ ಜೀವನ ಚರಿತ್ರೆಯನ್ನು ಬರೆಯಬೇಕೆಂದು ನನಗೆ ನ್ಯಾಷನಲ್ ಬುಕ್ ಟ್ರಸ್ಟಿನಿಂದ ಒಂದು ವಿನಂತಿಪತ್ರ ಬಂದಿತು. ತತ್‌ಕ್ಷಣ ಆ ವಿನಂತಿಯನ್ನು ನಾನು ಒಪ್ಪಿಕೊಂಡೆ, ಕಿತ್ತೂರಿನ ಹಾಗೂ ರಾಣೀ ಚೆನ್ನಮ್ಮನಿಗೆ ಸಂಬಂಧಿಸಿದ ಐತಿಹಾಸಿಕ ಸಂಗತಿಗಳನ್ನು ಕಲೆಹಾಕತೊಡಗಿದೆ. ನನಗೆ ಬಹಳಷ್ಟು ವಿಷಯಗಳು ದೊರಕಿದವು, ಅವುಗಳಲ್ಲಿ ಬಹುಪಾಲು ಈವರೆಗೆ ಅಪ್ರಕಟಿತವಾಗಿಯೇ ಇತ್ತು. ಈ ಅಪ್ರಕಟಿತ ವಿಷಯಗಳಲ್ಲಿ ಬೇರೆ ಬೇರೆ ಘಟ್ಟಗಳಲ್ಲಿ ಸೈನಿಕ ಅಧಿಕಾರಿಗಳು ಬ್ರಿಟಿಷ್ ಸರಕಾರದೊಂದಿಗೆ ಮಾಡಿದ ಪತ್ರವ್ಯವಹಾರವೂ ಒಂದಾಗಿತ್ತು. ರಾಣಿ ಚೆನ್ನಮ್ಮನೊಂದಿಗೆ ಹಾಗೂ ಇತರ ಮಹತ್ವದ ವ್ಯಕ್ತಿಗಳೊಂದಿಗೆ ಬ್ರಿಟಿಷರು ಮಾಡಿದ ಪತ್ರವ್ಯವಹಾರದ ದಾಖಲೆಗಳಲ್ಲಿ ಬಹಳಷ್ಟು ಇಂದು ಲಂಡನ್ನಿನಲ್ಲಿಯ ಭಾರತ ಕಚೇರಿಯ ಪತ್ರಾಗಾರ (ಇಂಡಿಯಾ ಆಫೀಸ್, ಲಂಡನ್)ದಲ್ಲಿ ಸುರಕ್ಷಿತವಾಗಿ ಕಾದಿಡಲ್ಪಟ್ಟಿವೆ. ಉಳಿದ ವಿಷಯಗಳು ಭಾರತದಲ್ಲಿ ಅನೇಕ ವಸ್ತು ಸಂಗ್ರಹಾಲಯಗಳಲ್ಲಿ ಮತ್ತು ಬೇರೆ ಬೇರೆ ಕಚೇರಿಗಳಲ್ಲಿ ದೊರೆಯುತ್ತವೆ. ನಾನು ಈ ವಿಷಯವಾಗಿ ಈವರೆಗೆ ಪ್ರಕಟವಾದ ಪ್ರತಿಯೊಂದು ಗ್ರಂಥ ಹಾಗೂ ಪುಸ್ತಿಕೆಯನ್ನು ತಿರುವಿಹಾಕಿದೆ. ಕೆಲವು ಅಪ್ರಕಟಿತ ಕವಿತೆಗಳನ್ನು, ಜನಪದ ಹಾಡುಗಳನ್ನು ಹಾಗೂ ಇಂಥವೇ ಆದ ಇತರ ಕೃತಿಗಳನ್ನು ಪ್ರಯತ್ನಪಟ್ಟು ಹುಡುಕಿಕೊಂಡೆ. ನಾನು ಸಂಗ್ರಹಿಸಿದ ಕಿತ್ತೂರಿನ ಇತಿಹಾಸದ ಮೇಲೆ ಬೆಳಕು ಬೀರುವಂಥ ಮೂಲ ಸಾಮಗ್ರಿಗಳ ಬಗ್ಗೆ ಖಚಿತಪಡಿಸಿಕೊಳ್ಳಲು, ಸಾಕ್ಷಾತ್ತಾಗಿ ಚರಿತ್ರೆಯ ಜ್ಞಾನ ಪಡೆಯಲು ಕಿತ್ತೂರನ್ನು ಅನೇಕ ಬಾರಿ ಸಂದರ್ಶಿಸಿದೆ; ಅದಕ್ಕೆ ಸಂಬಂಧಿಸಿದ ಇತರ ಸ್ಥಳಗಳಿಗೂ ಹೋಗಿಬಂದೆ. ಕಿತ್ತೂರಿನ ಅರಸು ಮನೆತನದ

ಹಲವಾರು ವಂಶಸ್ಥರನ್ನು ನಾನು ಕಂಡು, ಅವರಿಂದ ಗೊತ್ತಿರುವ ವಿಷಯವನ್ನೂ ಕಲೆ ಹಾಕಿದೆ. ಇದು ಅತ್ಯಂತ ಪ್ರಯಾಸದ ಕೆಲಸ, ನಿಜ. ಆದರೆ ಅದು ನನ್ನ ಮಟ್ಟಿಗೆ ಅತ್ಯಂತ ಪ್ರೀತಿಯ ಕೆಲಸವೂ ಆಗಿತ್ತು.

ನಾನು ಸಂಗ್ರಹಿಸಿದ ಎಲ್ಲ ದಾಖಲೆಗಳನ್ನು ಓದಿದ ಮೇಲೆ ಚೆನ್ನಮ್ಮನ ಆಳಿಕೆಯಲ್ಲಾಗಲಿ, ಅನಂತರದಲ್ಲಾಗಲಿ ಕಿತ್ತೂರಿನ ಹಾಗೂ ಚೆನ್ನಮ್ಮನ ಬಗ್ಗೆ ಬರೆದ ಐತಿಹಾಸಿಕ ಸಂಗತಿಗಳು ಭಾರತದ ದಾಖಲೆಗಳಲ್ಲಿ ಇರುವುದು ತೀರ ಕಡಿಮೆಯೆಂದೇ ಅನಿಸಿತು. ಉಳಿದ ಹೆಚ್ಚಿನದೆಲ್ಲ ದೊರೆಯುವುದು ಸ್ಥಳೀಯ ಲಾವಣಿ, ಜನಪದ ಹಾಡು, ಕವಿತೆ, ನಾಟಕ ಮತ್ತು ಇತರ ಸಾಹಿತ್ಯಿಕ ಬರೆವಣಿಗೆಯಲ್ಲಿ. ಈ ಎಲ್ಲ ಸಾಹಿತ್ಯ ಕೃತಿಗಳಲ್ಲಿ ಸ್ವಾಭಾವಿಕವಾಗಿಯೇ ಅದರ ಕರ್ತೃಗಳು ಒಂದಿಷ್ಟು ಸ್ವಾತಂತ್ರ್ಯ ವಹಿಸಿ ಐತಿಹಾಸಿಕ ಸಂಗತಿಗಳನ್ನು ವಿವರಿಸಿದ್ದುಂಟು. ಇದರಿಂದಾಗಿ ಅಲ್ಲಿ ಕೆಲವು ವಿರೋಧಾಭಾಸಗಳೂ ಕಂಡು ಬರುತ್ತಿವೆ. ಭಾರತದ ಕಚೇರಿಯಲ್ಲಿಯ (ಇಂಡಿಯಾ ಆಫೀಸ್) ದಾಖಲೆಗಳು – ವಿಶೇಷವಾಗಿ ಬೇರೆ ಬೇರೆ ಸರಕಾರೀ ಹಾಗೂ ಸೈನಿಕ ಅಧಿಕಾರಿಗಳ ಮಧ್ಯ ನಡೆದ ಪತ್ರವ್ಯವಹಾರಗಳು – ಅತ್ಯಂತ ಕಾಳಜಿಯಿಂದ ಸಂರಕ್ಷಿಸಲ್ಪಟ್ಟಿವೆ. ಇವು ಕಿತ್ತೂರಿನ ಇತಿಹಾಸ ಹಾಗೂ 1824 ರ ಮಹತ್ವದ ಯುದ್ಧದ ಬಗ್ಗೆ ಉಪಲಬ್ಧವಿರುವ ದಾಖಲೆಗಳಿಗೆ ರಕ್ಷಾಕವಚವಾಗಿವೆ. ಪ್ರಸ್ತುತ ಜೀವನ ಚರಿತ್ರೆಯಲ್ಲಿ ವಿವರಿಸಲಾದ ಘಟನೆಗಳ ಸತ್ಯತೆಯ ಬಗ್ಗೆ ಸಂದೇಹಪಡಬೇಕಾದ ಪ್ರಮೇಯವೇ ಇಲ್ಲ. ಯಾಕೆಂದರೆ ಯುರೋಪಿಯನ್ ಅಧಿಕಾರಿಗಳೇ ಬರೆದ ಕಾಗದಗಳು ಅವುಗಳನ್ನು ರುಜುವಾತು ಪಡಿಸುತ್ತವೆ. ಅಲ್ಲಲ್ಲಿ ದಾಖಲೆಯುಳ್ಳ ಘಟನೆಯನ್ನು ವರ್ಣಿಸಲು ಪ್ರಯತ್ನಿಸಿ, ಇತಿಹಾಸದ ಗಟ್ಟಿಮುಟ್ಟಾದ ಅಸ್ಥಿಪಂಜರಕ್ಕೆ – ಸೂಕ್ತವಾದ ಕಡೆಗಳಲ್ಲಿ ಅಗತ್ಯವಾದ ರಕ್ತ – ಮಾಂಸಗಳನ್ನು ತುಂಬುವ ಕೆಲಸ ಮಾತ್ರ ನಾನು ಮಾಡಿದ್ದೇನೆ. ನಾನು ಕರ್ನಾಟಕ ಸರಕಾರವು ಪ್ರಕಟಿಸಿದ ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ ಸಂಪುಟ (ಸಂ : ಡಾ. ಎಂ.ವಿ.ಕೃಷ್ಣರಾವ್ ಮತ್ತು ಪ್ರೊ.ಜಿ.ಎಸ್.ಹಾಲಪ್ಪ) ಈ ಗ್ರಂಥದಲ್ಲಿಯ ಮಹತ್ವದ ಸಂಗತಿಗಳನ್ನು ಧಾರಾಳವಾಗಿ ಉಪಯೋಗಿಸಿಕೊಂಡಿದ್ದೇನೆ.

ಈ ಸಂದರ್ಭದಲ್ಲಿ ಸತ್ವಪೂರ್ಣವಾದ ಸಂಶೋಧನ ಕಾರ್ಯವನ್ನು ಮಾಡಿದ ದಿವಂಗತ ದೊಡ್ಡಭಾವೆಪ್ಪ ಮೂಗಿಯವರನ್ನು ನಾನು ಹೃತ್ಪೂರ್ವಕವಾಗಿ ಸ್ಮರಿಸಲೇಬೇಕು. ಅವರು ಚದುರಿಹೋದ, ನಾಶವಾಗುತ್ತಿದ್ದ ಕಿತ್ತೂರಿನ ಇತಿಹಾಸಕ್ಕೆ ಸಂಬಂಧಿಸಿದ ಸಂಗತಿಗಳನ್ನು ಕಲೆಹಾಕಲು ಹಳ್ಳಿ – ಹಳ್ಳಿಗೆ ಹೋಗಿ, ಟಿಪ್ಪಣಿಗಳನ್ನು ಮಾಡಿಕೊಂಡು, ಸಾಧ್ಯವಿರುವ ಎಲ್ಲ ಮೂಲಗಳಿಂದ ಜನಪದ ಹಾಡು, ಕವಿತೆಗಳನ್ನು ಸಂಗ್ರಹಿಸಿದವರು. ಈ ಕಾರ್ಯಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟವರು. ಈ ಜೀವನ ಚರಿತ್ರೆಯಲ್ಲಿ ಅವರು ಸಂಗ್ರಹಿಸಿದ ಸಾಮಗ್ರಿಯಿಂದ ನಾನು ಬಹಳಷ್ಟು ಪ್ರಯೋಜನ ಪಡೆದಿದ್ದೇನೆ. ಈ ಸಾಮಗ್ರಿಯು ಲಂಡನ್ನಿನಲ್ಲಿಯ ಭಾರತ ಕಚೇರಿಯಿಂದ ನಾನು ಪಡೆದ ದಾಖಲೆಗಳಿಗೆ ದ್ವಿತೀಯ ಮಹತ್ವದ ದಾಖಲೆಯಾಗಿ ನಿಲ್ಲುತ್ತದೆ.

ಈ ಚರಿತ್ರೆಯನ್ನು ಬರೆಯುವಾಗ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಭಾರತ ಇತಿಹಾಸ ಮತ್ತು ಸಂಸ್ಕೃತಿ ವಿಭಾಗದ ಪ್ರಾಧ್ಯಾಪಕರಾದ ಡಾ. ಅ. ಸುಂದರ ಅವರಿಂದ ಹಲವಾರು ಮಹತ್ವದ ಸಲಹೆ – ಸೂಚನೆಗಳನ್ನು ನಾನು ಪಡೆದಿದ್ದೇನೆ. ಅವರು ನನ್ನ ಹಸ್ತಪ್ರತಿಯನ್ನು ಅವಲೋಕಿಸಿ ಕೆಲವು ಮೌಲಿಕ ಸೂಚನೆಗಳನ್ನು ನೀಡಿದ್ದಾರೆ; ಅವುಗಳಲ್ಲಿ ಹಲವನ್ನು ನಾನು ಸ್ವೀಕರಿಸಿದ್ದೇನೆ. ಅವರ ಈ ಸಹಾಯ ಹಾಗೂ ಸಲಹೆಗಳಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸಿ, ಇಲ್ಲಿ ವ್ಯಕ್ತಿ ಹಾಗೂ ವಿಷಯಗಳಿಗೆ ಸಂಬಂಧಿಸಿದ ಅಭಿಪ್ರಾಯಗಳ ಹಾಗೂ ಕುಂದು – ಕೊರತೆಗಳ ಹೊಣೆಗಾರಿಕೆ ನನ್ನದೆಂದು ತಿಳಿಯಪಡಿಸುತ್ತೇನೆ. ಭಾಷೆಯ (ಮೂಲ ಇಂಗ್ಲಿಷ್) ದೃಷ್ಟಿಯಿಂದ ನನ್ನ ಹಸ್ತಪ್ರತಿಯನ್ನು ಓದಿ, ಮಹತ್ವದ ಸಲಹೆಗಳನ್ನಿತ್ತು, ನೆರವು ನೀಡಿದ ಇಂಗ್ಲಿಷ್ ವಿಭಾಗದ ಡಾ. ಸಿ. ಆರ್. ಯರವಿನತೆಲಿಮಠ ಅವರಿಗೆ ನಾನು ಕೃತಜ್ಞನಾಗಿದ್ದೇನೆ. ಮುದ್ರಣ ಪ್ರತಿಯನ್ನು ಸಿದ್ಧಪಡಿಸಿಕೊಟ್ಟ ಬೆರಳಚ್ಚುಗಾರ ಶ್ರೀ ಜಿ. ಎಂ. ಗುಡ್ಡದಮಠ ನನ್ನ ಆಪ್ತ ಕಾರ್ಯದರ್ಶಿ ಶ್ರೀ ಎಸ್. ಅಯ್. ವಡವಡಗಿ, ಇನ್ನೊಬ್ಬ ಬೆರಳಚ್ಚುಗಾರ ಶ್ರೀ ಎಸ್. ಎಸ್.  ನವಾತಿ ಇವರೆಲ್ಲರಿಗೆ ನನ್ನ ನೆನಕೆಗಳು. ಈ ಚರಿತ್ರೆಯನ್ನು ಬರೆಯುವಲ್ಲಿ ತಮ್ಮ ಅಧೀನದಲ್ಲಿರುವ ಸೂಕ್ತ ಸಾಹಿತ್ಯ ಸಾಮಗ್ರಿಯನ್ನು ನನಗೆ ಒದಗಿಸಿಕೊಟ್ಟ ಗ್ರಂಥ ಪಾಲಕ ಶ್ರೀ ಕೆ. ಎಸ್. ದೇಶಪಾಂಡೆ, ಉಪಗ್ರಂಥಪಾಲಕ ಶ್ರೀ ಎಸ್ ಆರ್. ಗುಂಜಾಳ ಮತ್ತು ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕ ಡಾ. ಟಿ. ಎಸ್. ಕುಲಕರ್ಣಿ ಇವರಿಗೂ ನನ್ನ ಕೃತಜ್ಞತೆಗಳು.

ನನಗೆ ಪ್ರಿಯವಾದ ಈ ಕೃತಿರಚನೆ ನನಗೆ ಅತ್ಯಂತ ಹರ್ಷದಾಯಕವಾದ ಅನುಭವವನ್ನು ನೀಡಿದೆ. ಈ ಒಂದು ಸದವಕಾಶವನ್ನು ಒದಗಿಸಿಕೊಟ್ಟ ನ್ಯಾಷನಲ್ ಬುಕ್ ಟ್ರಸ್ಟ್‌ನವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು

**ಸದಾಶಿವ ಒಡೆಯರ**

# ಪರಿವಿಡಿ

# 1. ಐತಿಹಾಸಿಕ ಹಿನ್ನೆಲೆ

ಇಂದು ಪುಣೆ–ಬೆಂಗಳೂರು ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿ, ಕರ್ನಾಟಕದ ಬೆಳಗಾಂವ ಮತ್ತು ಧಾರವಾಡ ನಗರಗಳ ಮಧ್ಯದಲ್ಲಿ ಎರಡು ಸಣ್ಣ ಗುಡ್ಡಗಳ ಹಿಂದೆ, ಹಸಿರು ಗಿಡಗಳ ಜೊಂಪಿನಲ್ಲಿ ನೆಲೆಸಿರುವ ಒಂದು ಸಣ್ಣ ಪಟ್ಟಣ ಕಿತ್ತೂರು. ಎರಡು ನೂರು ವರ್ಷಗಳಿಗೂ ಮಿಗಿಲಾದ ಇತಿಹಾಸವುಳ್ಳ, ಕನ್ನಡ ಅರಸುಮನೆತನಕ್ಕೆ ಸಂಬಂಧಿಸಿದ, 164 ವರ್ಷಗಳವರೆಗೆ ವೈಭವ ಪೂರ್ಣವಾಗಿ ಮೆರೆದು ಸಣ್ಣ ಸಂಸ್ಥಾನವೊಂದರ ರಾಜಧಾನಿಯಾಗಿದ್ದ ಈ ಚಿಕ್ಕ ನಗರವು ನಿರ್ವಹಿಸಿದ ಮಹೋನ್ನತವಾದ ಪಾತ್ರವನ್ನು ಕರ್ನಾಟಕದ ಹೊರಗಿನ ಅನೇಕ ಜನ ಅರಿಯರು.

ಈ ಊರಿನ ರಾಣಿ ಚೆನ್ನಮ್ಮ, ಅಂದಿನ ಕಾಲದ ಜಗತ್ತಿನಲ್ಲಿಯೇ ಅತ್ಯಂತ ಬಲಶಾಲಿಯಾದ ಬ್ರಿಟಿಷ್ ಚಕ್ರಾಧಿಪತ್ಯದ ವಿರುದ್ಧ ಇಡೀ ಭರತ ಖಂಡದಲ್ಲಿ ಬಂಡೆದ್ದು ಹೋರಾಡಿದ ರಾಜ್ಯಾಧಿಪತಿಗಳಲ್ಲಿ ಮೊದಲಿಗಳು. ಅವಳು ಬ್ರಿಟಿಷರ ವಿರುದ್ಧ ಜಯ ಸಂಪಾದಿಸಿ ಹಲವು ಕಾಲ ತನ್ನ ರಾಜ್ಯವನ್ನು ಸಂರಕ್ಷಿಸಿಕೊಂಡಳು. ರಾಣಿ ಚೆನ್ನಮ್ಮ ಒಂದು ಸಣ್ಣ ಸಂಸ್ಥಾನದ ರಾಣಿಯಾದರೂ ಅತ್ಯಂತ ದೇಶಾಭಿಮಾನಿಯೂ, ಅದಮ್ಯವಾದ ಧೈರ್ಯಶಾಲಿನಿಯೂ ಆದ ಮಹಿಳೆ. ತನ್ನ ನಾಡು ಹಾಗೂ ಜನತೆಯಲ್ಲಿ ಆಕೆಗೆ ಅನುಪಮವಾದ ಪ್ರೀತಿ – ಅಭಿಮಾನ. ನಾಡಿಗಾಗಿ ಆ ಜನತೆಯ ಸ್ವಾತಂತ್ರ್ಯಕ್ಕಾಗಿ ಅವಳು ಯಾವ ತ್ಯಾಗಕ್ಕಾದರೂ ಸಿದ್ಧಳು. ಎಂಥ ವಿಪತ್ತನ್ನೂ– ಅದು ರಾಜಕೀಯ ವಿಪತ್ತೇ ಆಗಿರಲಿ, ಯುದ್ಧ ವ್ಯೂಹವೇ ಆಗಿರಲಿ – ಎದುರಿಸುವ ಚಾಕಚಕ್ಯತೆ ಅವಳಲ್ಲಿತ್ತು. ಪ್ರಬಲರಾದ ಬ್ರಿಟಿಷರ ವಿರುದ್ಧ ಆಕೆ ಹೋರಾಡಿದಳು. ಭಯಾನಕವಾದ ರಕ್ತಪಾತವಾಯಿತು. ಅದೊಮ್ಮೆಯೇ ಆಗಲಿ ಬ್ರಿಟಿಷರು ಭಯವಿಹ್ವಲವಾದರು. ರಾಣಿ ಚೆನ್ನಮ್ಮನ ದಾಳಿಯ ಪ್ರಖರತೆಯನ್ನು ಎದುರಿಸಲಾರದೆ ಅವರು ಅತ್ಯಂತ ಹೀನಾಯಮಾನವಾಗಿ ಮುಖಭಂಗ ಹೊಂದಿ ಹಿಂದೆಗೆದರು. ಇದು ಪ್ರಬಲವಾದ ಬ್ರಿಟಿಷರು ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಅನುಭವಿಸಿದ ಏಕಮಾತ್ರ ಸೋಲು. ಇದು ವಿಶ್ವದಲ್ಲಿ ಸ್ವಾತಂತ್ರ್ಯಪ್ರಿಯರಿಗೆ ಎಲ್ಲ ಕಾಲದಲ್ಲಿಯೂ ಸ್ಫೂರ್ತಿಯನ್ನು ನೀಡುವಂಥ ಚೇತೋಹಾರಿಯಾದ ಕಥೆ. ಐತಿಹಾಸಿಕ ದಾಖಲೆಗಳಿಂದ ಹಾಗೂ ಸಮಕಾಲೀನ ಹಾಗೂ ತದನಂತರ ರಚಿತವಾದ ಸಾಹಿತ್ಯದ ಆಧಾರಗಳಿಂದ ನಿಃಸಂದೇಹವಾಗಿ ಹೊರಹೊಮ್ಮುವ ಈ ಶೂರ ರಾಣಿಯ ಧೀರೋದಾತ್ತ ಚರಿತ್ರೆಯನ್ನು ಯಾವ ಉತ್ಪ್ರೇಕ್ಷೆಯಿಲ್ಲದೆ ಚಿತ್ರಿಸುವುದೇ ನನ್ನ ಈ ಗ್ರಂಥದ ಮೂಲ ಉದ್ದೇಶ. ಇದನ್ನು ಓದಿದಮೇಲಾದರೂ ಮುಂದಿನ ಜನಾಂಗಗಳು, ಕರ್ನಾಟಕದ ಈ ಕೆಚ್ಚೆದೆಯ

ರಾಣಿಗೆ ಇತಿಹಾಸದಲ್ಲಿ ಸಿಗಬೇಕಾದ ಸ್ಥಾನ ಹಾಗೂ ಗೌರವಗಳನ್ನು ಕೊಟ್ಟಾರು ಎಂಬ ಆಶೆಯಿಂದ ಈ ಸಾಹಸಕ್ಕೆ ಕೈ ಹಾಕಿದ್ದೇನೆ.

## ಕಿತ್ತೂರಿನ ಅರಸು ಮನೆತನ

ಕಿತ್ತೂರ ಅರಸು ಮನೆತನದ ಇತಿಹಾಸ ಕ್ರಿ. ಶ. 1585 ರಿಂದ ಆರಂಭವಾಗುತ್ತದೆ. ಇದರ ಸ್ಥಾಪಕರಾದ ಹಿರೇಮಲ್ಲಶೆಟ್ಟಿ ಮತ್ತು ಚಿಕ್ಕಮಲ್ಲಶೆಟ್ಟಿ ಎಂಬ ಶೂರ ಸೇನಾನಿಗಳು ಮೊದಲಿಗೆ ಮೈಸೂರು ಸಂಸ್ಥಾನದ ಸಾಗರಕ್ಕೆ ಸೇರಿದವರು. ಅವರು ವಿಜಾಪುರದ ಆದಿಲ್‌ಶಾಹಿ ರಾಜರಿಂದ ಈ ನಾಡನ್ನು ಬಳುವಳಿಯಾಗಿ ಪಡೆದರು. ಅವರ ರಾಜ್ಯಕ್ಕೆ ಅವರು ಅನೇಕ ವರ್ಷಗಳ ಕಾಲ ಒಳ್ಳೇ ನಂಬಿಗಸ್ಥರಾಗಿ ಸೇವೆ ಸಲ್ಲಿಸಿದ್ದರು. ಅವರೀರ್ವರೂ ಒಳ್ಳೇ ಧೀರ ಸೇನಾನಿಗಳು. ಹಿರೇಮಲ್ಲಶೆಟ್ಟಿ 'ಶಮಶೇರ ಜಂಗ ಬಹದ್ದೂರ' ಎಂಬ ಪ್ರಶಸ್ತಿಯನ್ನು ಆದಿಲ್‌ಶಾಹಿ ರಾಜರಿಂದ ಪಡೆದುಕೊಂಡಿದ್ದ. ಅವರ ಶೌರ್ಯ, ಸಾಹಸ ಹಾಗೂ ಸೇವಗೆ ಪ್ರತಿಫಲವಾಗಿ ಅವರಿಗೆ 1585 ರಲ್ಲಿ ವಿಜಾಪುರ ಆದಿಲ್‌ಶಾಹಿ ರಾಜರಿಂದ'ಹುಬ್ಬಳ್ಳಿ ಪರಗಣಾ' ಎಂದು ಕರೆಯಲ್ಪಡುತ್ತಿರುವ (ಇಂದಿನ ಧಾರವಾಡ ಜಿಲ್ಲಾದಲ್ಲಿಯ) ಹುಬ್ಬಳ್ಳಿ ಪ್ರಾಂತದ ಸಂದೇಶಮುಖಿ ದಾನವಾಗಿ ದೊರೆಯಿತು. ಆಗ ಅವರು ವಿಜಾಪುರದಿಂದ ಬಂದು ಸಂಪಗಾವ (ಬೆಳಗಾಂವ ಜಿಲ್ಲೆ) ಎಂಬ ಊರಲ್ಲಿ ನೆಲೆನಿಂತು, ಕಿತ್ತೂರ ರಾಜ್ಯವೆಂದು ಕರೆಯಲ್ಪಟ್ಟ ನಾಡಿನ ಅಧಿಪತಿಗಳಾಗಿ ರಾಜ್ಯವಾಳತೊಡಗಿದರು. ಅಂದಿನಿಂದ ಅವ್ಯಾಹತ ವಾಗಿ 1585ರಿಂದ 1824 ರವರೆಗೆ 239 ವರ್ಷಗಳ ಕಾಲ ಅವರು ರಾಜ್ಯವಾಳಿದರು.

## ಹಿಂದಿನ ಅರಸರು

ಕಿತ್ತೂರಿನ ದೀರ್ಘಕಾಲದ ಇತಿಹಾಸದಲ್ಲಿ 12 ಜನ ಅರಸರು ಆಗಿ ಹೋದರು. ಅವರಲ್ಲಿಯ ಆರಂಭದ ರಾಜರಲ್ಲಿ 1660 ರಿಂದ 1691 ರವರೆಗೆ ಆಳಿದ ಅಲ್ಲಪ್ಪಗೌಡ ಸರದೇಸಾಯಿಯು ವಿಖ್ಯಾತನು. ಅವನು ಕಿತ್ತೂರ ಅರಸುಮನೆತನದ 5ನೆಯ ಅಧಿಪತಿ. ಅವನ ಕಾಲಕ್ಕೆ ಕಿತ್ತೂರು ರಾಜ್ಯದ ರಾಜಧಾನಿಯಾಯಿತು. ಆತನು 1682ರಲ್ಲಿ ಇಲ್ಲಿಗೆ ಬಂದು ನೆಲಸಿದನು. ಅಲ್ಲಿಯವರೆಗೆ ಆ ಹಳ್ಳಿಗೆ 'ಗೀಜಗನಹಳ್ಳಿ'ಯೆಂದು ಕರೆಯುತ್ತಿದ್ದರು. ಅವನ ಕಾಲದಲ್ಲಿ ರಾಜ್ಯ ವಿಸ್ತರಣೆಯಾಗಿ, ಸಂಪಗಾವ ಮತ್ತು ಬೀಡಿ ಪರಗಣೆಗಳು ರಾಜ್ಯದಲ್ಲಿ ಸೇರಿಸಲ್ಪಟ್ಟವು. ಅವನು ಧೀರನೂ, ಧೈರ್ಯಶಾಲಿಯೂ ಆಗಿದ್ದನು. ಅವನು ವಿಜಾಪುರದ ಆದಿಲ್‌ಶಾಹಿಯೊಂದಿಗೆ ಯುದ್ಧಮಾಡುವ ಪ್ರಸಂಗಗಳು ಬಂದು ಅವನು ತನ್ನ ದೇಸಗತಿಯನ್ನು ಉಳಿಸಿಕೊಳ್ಳುವುದಕ್ಕಾಗಿ ಅವರೊಡನೆ ಹೋರಾಡಿ ಯಶಸ್ವಿಯಾದನು. ಇಂದಿಗೂ ಕಿತ್ತೂರಿನಲ್ಲಿ ಕಾಣಬಹುದಾದ ಅಳಿದುಳಿದ ಕೋಟೆಯನ್ನು ಅವನ ಕಾಲದಲ್ಲಿಯೇ ಕಟ್ಟಲಾಯಿತು.

ಕಿತ್ತೂರಿನ ಅರಮನೆಯ ಅವಶೇಷಗಳು ಈಗಲೂ ಅಂದಿನ ವೈಭವದ ಕಲ್ಪನೆಯನ್ನು ನಮಗೆ ತಂದುಕೊಡುತ್ತವೆ. ಹಾಳಾಗದ ಮುನ್ನ ಅರಮನೆಯ ಮುಂದಿನ ಭಾವಣಿ 30 ಅಡಿ

ಅಗಲ ಹಾಗೂ 100 ಅಡಿ ಉದ್ದವಾಗಿತ್ತು. ಅದರ ಮಾಳಿಗೆಯನ್ನು ಎತ್ತಿಹಿಡಿಯಲು ಬಹುದೊಡ್ಡ ಸಾಗವಾನಿ ಕಂಬಗಳ ಸಾಲು ಅತ್ಯಂತ ಗಾಂಭೀರ್ಯವನ್ನು ಒದಗಿಸಿತ್ತು. ಮಾಳಿಗೆ ಅತ್ಯಂತ ಭವ್ಯವಾಗಿದ್ದು ಸಾಗವಾನಿ ಕಟ್ಟಿಗೆಯಿಂದ ನಿರ್ಮಾಣವಾಗಿತ್ತು. ಅರಮನೆಗೆ ಮೂರು ಅಂತಸ್ತುಗಳಿದ್ದವು. ಅದರಲ್ಲಿ ಅನೇಕ ಊಟದ ಮನೆಗಳು, ಅಡಿಗೆಯ ಮನೆಗಳು, ಸ್ನಾನಗೃಹಗಳು ಇದ್ದವು. ಊಟದ ಮನೆ ಒಮ್ಮೆಲೇ 1,000 ಜನ ಊಟ ಮಾಡಲು ಅನುಕೂಲವಾಗುವಷ್ಟು ವಿಶಾಲವಾಗಿತ್ತು. ಅರಮನೆಯ ಪ್ರಾಂಗಣದಲ್ಲಿ ಆನೆ, ಒಂಟೆ, ಕುದುರೆಗಳ ವಾಸಸ್ಥಾನಗಳಿದ್ದವು. ಅರಮನೆಯ ಮುಂಭಾಗದಲ್ಲಿ 'ಸದರಕಟ್ಟೆ'ಯೆಂಬ ವಿಶಾಲವಾದ ಕಟ್ಟೆಯಿದ್ದಿತು. ಅದು ಅನ್ಯಾಯ ಇಲ್ಲವೆ ತೊಂದರೆಗಾದ ಪ್ರಜೆ ರಾಜನ ಭೆಟ್ಟಿಗೆ ಬಂದಾಗ ಕಾಯುತ್ತ ಕುಳಿತುಕೊಳ್ಳುವ ಸ್ಥಾನವಾಗಿತ್ತು. ಅಲ್ಲಪ್ಪಗೌಡನ ತರುವಾಯ 6ನೆಯ ಅಧಿಪತಿಯಾದ ಮುದಿಮಲ್ಲಪ್ಪಗೌಡ ಸರದಾರನು ಅಧಿಕಾರಕ್ಕೆ ಬಂದನು. ಅವನು 1691 ರಿಂದ 1699 ರವರೆಗೆ ಕಿತ್ತೂರು ರಾಜ್ಯವನ್ನಾಳಿದನು. ಅವನೂ ಅತ್ಯಂತ ಶೂರನಾಗಿದ್ದನು. ಅವನು ಯುದ್ಧದಲ್ಲಿ ತೋರಿದ ಶೌರ್ಯಕ್ಕೆ ಮೆಚ್ಚಿ ಆದಿಲ್‌ಶಾಹಿ ರಾಜರು ಅವನಿಗೆ 'ಶಮಶೇರ ಜಂಗ ಬಹದ್ದೂರ' ಮತ್ತು 'ದಿಲಾವರಖಾನ್ ಬಹಾದ್ದೂರ ದಿಲಾವರ ಜಂಗ' ಎಂಬ ಬಿರುದುಗಳನ್ನು ಕೊಟ್ಟಿದ್ದರು.

ಈ ಕಾಲದಲ್ಲಿ ಮೊಘಲ ಅರಸು ಔರಂಗಜೇಬನು ಆದಿಲ್‌ಶಾಹಿಯ ರಾಜರನ್ನು ಸೋಲಿಸಿ ವಿಜಾಪುರ ರಾಜ್ಯವನ್ನು ವಶಪಡಿಸಿಕೊಂಡನು. ಆತನು ಕಿತ್ತೂರನ್ನೊಳಗೊಂಡ ಸವಣೂರ ವಿಭಾಗಕ್ಕೆ ರೌಫ್‌ಖಾನ್ ಎಂಬವನನ್ನು ನವಾಬನನ್ನಾಗಿ ನೇಮಿಸಿದನು. ಅವನ ಜೊತೆಗೆ ಮುದಿಮಲ್ಲಪ್ಪ ಸರದೇಸಾಯಿ ಅವರು ಕಿತ್ತೂರ ಸಂಸ್ಥಾನ ಮುಂದುವರಿಕೆಯ ಬಗ್ಗೆ ತಿಳುವಳಿಕೆಯ ಒಪ್ಪಂದ ಮಾಡಿಕೊಂಡರು.

ಆತನ ನಂತರ ಬಂದ ಪ್ರಮುಖ ಅಧಿಪತಿಗಳಲ್ಲಿ ಮಹತ್ವದ ವ್ಯಕ್ತಿಯೆಂದರೆ ಶಿವನಗೌಡ ಸರದೇಸಾಯಿ. ಅವನು 1717 ರಿಂದ 1734 ರವರೆಗೆ ಆಳಿದನು. ಔರಂಗಜೇಬನಿಂದ ಆತನು ಅನೇಕ ಬಿರುದುಗಳನ್ನು, ಸನದುಗಳನ್ನು ಪಡೆದುಕೊಂಡನು. ಅವನ ತರುವಾಯ ಮಾಳವ ರುದ್ರಗೌಡ ಅಲಿಯಾಸ್ ಫಕೀರ್ ರುದ್ರಸರ್ಜ ಪಟ್ಟಕ್ಕೆ ಬಂದನು. ಆತನು 1734 ರಿಂದ 1749ರವರೆಗೆ ರಾಜ್ಯವಾಳಿದನು. ಆತನ ಹೆಂಡತಿ ರಾಣಿ ಮಲ್ಲಮ್ಮ ಬಹಳ ಪ್ರಬಲ ಹಾಗೂ ಧೈರ್ಯಶಾಲಿಯಾದ ಮಹಿಳೆ. ಆಕೆ ರಾಜ್ಯದ ಎಲ್ಲ ವಿಷಯಗಳಲ್ಲಿ ಮಹತ್ವದ ಪಾತ್ರ ವಹಿಸುತ್ತಿದ್ದಳು. ರಾಣಿ ಮಲ್ಲಮ್ಮ ಎಲ್ಲ ರೀತಿಯಿಂದ ಯೋಗ್ಯ ಸಹಧರ್ಮಿಣಿಯಾಗಿದ್ದಳು. ರುದ್ರಗೌಡನು ನಿರಂಜನಿಯೆಂಬ ಓರ್ವ ಮುಸಲ್ಮಾನ ಹೆಣ್ಣಿನಲ್ಲಿ ಅನುರಕ್ತನಾಗಿ, ಅವಳನ್ನು ತನ್ನ ವೀರಶೈವ ಧರ್ಮಕ್ಕೆ ಮತಾಂತರ ಮಾಡಿಸಿಕೊಂಡು ಅವಳನ್ನು ಲಗ್ನವಾದನು. ಅವರ ಪ್ರೇಮದ ಕಥೆ ಅನೇಕ ಕವಿಗಳ ಕಾವ್ಯವಸ್ತುವಾಯಿತು. ಜನ ಅದರ ಬಗ್ಗೆ ಹಾಡುಗಳನ್ನು ಕಟ್ಟಿ ಹಾಡಿದರು. ರುದ್ರಗೌಡ ನಿರಂಜನೆಯನ್ನು ಮದುವೆಯಾಗುವುದನ್ನು ಅವನ ತಮ್ಮ ಮಲ್ಲಪ್ಪ ಬಹಳ ವಿರೋಧಿಸಿದ. ಆದರೆ ಆ ವಿರೋಧ ನಿರರ್ಥಕವಾಯಿತು. ನಿರಂಜನಿಯ ಮಾದಕ

ಸೌಂದರ್ಯಕ್ಕೆ ಮನಸೋತ ರುದ್ರಗೌಡ ಕಿತ್ತೂರಿನ ಉತ್ತರ ಭಾಗದಲ್ಲಿರುವ ದೇಸನೂರಲ್ಲಿ – ಅವಳ ವಾಸಕ್ಕಾಗಿ ಒಂದು ಸುಂದರವಾದ ಮಹಲನ್ನು ಕಟ್ಟಿಸಿದನು. ಅದು 'ನಿರಂಜನ ಮಹಲ್' ಎಂದು ಹೆಸರಾಗಿದೆ. ರುದ್ರಗೌಡ ತನ್ನ ಬಹಳ ಸಮಯವನ್ನು ಅವಳೊಂದಿಗೆ ಅಲ್ಲಿಯೇ ಕಳೆಯತೊಡಗಿದನು. ಆದ್ದರಿಂದ ಎಲ್ಲ ರಾಜ್ಯ ಭಾರದ ಹೊಣೆಯನ್ನು ರಾಣಿ ಮಲ್ಲಮ್ಮನೇ ಹೊರಬೇಕಾಯಿತು. ಅವಳು ಅದಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿದ್ದಳು. ಅವಳು ರಾಜ್ಯಭಾರವನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿದಳು. ರುದ್ರಗೌಡ ದೇಸನೂರಿನಲ್ಲಿ ಭದ್ರವಾದ ಕೋಟೆಯನ್ನೂ ಕಟ್ಟಿಸಿದನು. ಅದು ಅವನ ನೆನಪಿಗಾಗಿ 'ರುದ್ರಗಡ' ಎಂದು ಕರೆಯಲ್ಪಟ್ಟಿತು.

ಅವನ ಆಳಿಕೆಯ ಕಾಲದಲ್ಲಿ, 1746ನೆಯ ಇಸವಿಯಲ್ಲಿ, ಸವಣೂರ ನವಾಬನು ಉಳಿದ ಭಾಗಗಳೊಂದಿಗೆ ಈ ರಾಜ್ಯವನ್ನೂ ಮರಾಠರಿಗೆ ಬಿಟ್ಟುಕೊಡಬೇಕಾಯಿತು. ಆದಕಾರಣ ಅಂದಿನಿಂದ ಕಿತ್ತೂರಿನ ರಾಜರು ವಿಜಾಪುರದ ರಾಜ್ಯದಿಂದ ಮುಕ್ತರಾಗಿ ಪುಣೆಯ ಪೇಶ್ವೆಯರ ಅಧೀನಕ್ಕೆ ಬಂದು, ಅವರೊಂದಿಗೆ ರಾಜಕೀಯ ಸಂಬಂಧ ಬೆಳೆಸಿಕೊಳ್ಳಬೇಕಾಯಿತು. ರುದ್ರಗೌಡನಿಗೆ ಗಂಡು ಸಂತಾನವಿರಲಿಲ್ಲ. ಆದರೆ ದಿವಂಗತನಾದ ಅವನ ತಮ್ಮ ಮಲ್ಲಪ್ಪನಿಗೆ ವೀರಪ್ಪಗೌಡನೆಂಬ ಒಬ್ಬ ಮಗನಿದ್ದ. ರುದ್ರಗೌಡ ಮುಪ್ಪಾದೊಡನೆ ತನ್ನ ಪಶ್ಚಾತ್ ಯಾರು ಪಟ್ಟಕ್ಕೆ ಬರಬೇಕೆಂಬುದರ ಬಗೆಗೆ ಚಿಂತಿಸತೊಡಗಿದನು. ಅವನು ತನ್ನ ತಮ್ಮನ ಮಗನಾದ ವೀರಪ್ಪಗೌಡನನ್ನು ಪಟ್ಟಕ್ಕೆ ತರಬೇಕೆಂದು ನಿರ್ಧರಿಸಿದನು. ಮಲ್ಲಪ್ಪನ ಹೆಂಡತಿ ತನ್ನ ಗಂಡನನ್ನು ರುದ್ರಗೌಡನೇ ಕೊಲ್ಲಿಸಿದ್ದರಿಂದ ಆತ ತನ್ನ ಮಗನನ್ನು ದತ್ತಕ ತೆಗೆದುಕೊಳ್ಳುವ ಅಭಿಲಾಷೆಯುಳ್ಳವನಾಗಿದ್ದನೆಂಬ ಸಂಗತಿಯನ್ನು ನಂಬಲಿಲ್ಲ. ತನ್ನ ಮಗನನ್ನು ಆತ ಮೋಸಮಾಡಿ ಕೊಲ್ಲಿಸುವ ಹೊಂಚಿನಲ್ಲಿರಬಹುದೆಂದು ಶಂಕಿಸಿ, ಇವಳು ತನ್ನ ಮಗನೊಂದಿಗೆ ತಲೆ ತಪ್ಪಿಸಿಕೊಂಡು ಊರೂರು ಅಲೆದಳು. ಉಪ್ಪಿನ – ಬೆಟಗೇರಿಯಲ್ಲಿ ಓರ್ವ ವ್ಯವಹಾರಸ್ಥನ ಮನೆಯಲ್ಲಿ ಕೆಲವು ಕಾಲ ಹಾಗೂ ಕಿತ್ತೂರಿನ ಕಲ್ಲುಮಠದಲ್ಲಿ ಕೆಲವು ದಿನ ಅವಳಿದ್ದಳೆಂದು ತಿಳಿದುಬರುತ್ತದೆ. ಕಲ್ಲುಮಠದ ಸ್ವಾಮಿಗಳು ಕಿತ್ತೂರಿನ ರಾಜಗುರುಗಳು. ವೀರಪ್ಪಗೌಡ ಹಾಗು ಅವನ ತಾಯಿಯನ್ನು ಪತ್ತೆಹಚ್ಚಿ ಅವರಿರುವ ಕಡೆಗೆ ಸ್ವತಃ ರುದ್ರಗೌಡನೇ ಹೋಗಿ ತನ್ನ ತಮ್ಮನ ಹೆಂಡತಿಯ ಮನವೊಲಿಸಿ ಅವಳನ್ನು ಅವಳ ಮಗನೊಂದಿಗೆ ಕಿತ್ತೂರಿಗೆ ಕರೆತಂದು ಆತನನ್ನು ತನ್ನ ಉತ್ತರಾಧಿಕಾರಿಯೆಂದು ಕಿತ್ತೂರಿನ ಸಿಂಹಾಸನದ ಮೇಲೆ ಕೂಡಿಸಿದನು. ಆಮೇಲೆ ರುದ್ರಗೌಡ ನಿಶ್ಚಿಂತೆಯಿಂದ ಪ್ರಾಣಬಿಟ್ಟನು. ಅವನ ಎರಡನೆಯ ಹೆಂಡತಿ ನಿರಂಜನಿಯೂ ಸ್ವಲ್ಪ ಕಾಲದ ನಂತರ ಮರಣ ಹೊಂದಿದಳು. ಅವರಿಬ್ಬರ ಸಮಾಧಿಗಳು ಕಿತ್ತೂರಿನ ಕಲ್ಲುಪುರದಲ್ಲಿವೆ. ಅವನ್ನು ಇನ್ನೂ ಸುಸ್ಥಿತಿಯಲ್ಲಿಡಲಾಗಿದೆ.

ಅದಾದ ನಂತರ ವೀರಪ್ಪಗೌಡ 1749 ರಿಂದ 1782ರವರೆಗೆ ರಾಜ್ಯವಾಳಿದನು. ಅದು ದೀರ್ಘವಾದ ಹಾಗೂ ಅನೇಕ ಮಹತ್ವದ ಘಟನೆಗಳುಳ್ಳ ಆಳಿಕೆಯಾಗಿತ್ತು. ಹೈದರಅಲಿ ಪೇಶ್ವೆಯವರನ್ನು ಸೋಲಿಸಿ ಈ ಭಾಗದ ಒಡೆಯನಾದನು. 1778ರಲ್ಲಿ ಅವನು ಬೆಳಗಾಂವ ಜಿಲ್ಲೆಯಿಂದ ಮಲಪ್ರಭ ನದಿಯ ದಕ್ಷಿಣ ಹಾಗೂ ವಿಜಾಪುರ ಜಿಲ್ಲೆಯಲ್ಲಿಯ ಕೃಷ್ಣಾನದಿಯ

ದಕ್ಷಿಣಕ್ಕಿರುವ ಎಲ್ಲ ಪ್ರದೇಶವನ್ನು ಪೇಶ್ವೆಯವರಿಂದ ವಶಪಡಿಸಿಕೊಂಡು ಈ ಭಾಗದ ಅಧಿಪತಿಯಾಗಿದ್ದನು. ವೀರಪ್ಪಗೌಡ ಹೈದರಾಲಿಯ ಜೊತೆ ಸಂಧಾನ ನಡೆಸಿ, ಈ ಹಿಂದಿನಂತೆ ನಝರಾನಾ ಕೊಟ್ಟು, ಕಿತ್ತೂರ ದೇಸಗತಿಯನ್ನು ಸ್ವತಂತ್ರವಾಗಿ ಇಟ್ಟುಕೊಂಡನು. ಆತನೂ ಮಹಾಶೂರನಾಗಿದ್ದನು. 1756 ರಿಂದ ಕಿತ್ತೂರಿನ ಅಧೀನದಲ್ಲಿ ಪರಸಗಡ, ಸಂಪಗಾಂವ ಮತ್ತು ಬೀಡಿ ಪರಗಣಗಳು ಸೇರಿದ್ದವು. 1778 ರಲ್ಲಿ ಆತ ತಾಸಗಾಂವದ ಪಟವರ್ಧನನನ್ನು ಸೋಲಿಸಿ, ಗೋಕಾಕ ಹಾಗೂ ಸವದತ್ತಿಗಳನ್ನು ತನ್ನ ರಾಜ್ಯದಲ್ಲಿ ಸೇರಿಸಿಕೊಂಡನು. ಈ ಕಾಲದಲ್ಲಿ ಒಂದೆಡೆ ಪೇಶ್ವೆ ಹಾಗು ಇನ್ನೊಂದೆಡೆ ಹೈದರಅಲಿ ಇವರ ನಡುವೆ ಅವ್ಯಾಹತವಾಗಿ ಯುದ್ಧಗಳು ನಡದೇ ಇದ್ದವು. ಕಿತ್ತೂರಿನಂಥ ಸಣ್ಣ ಸಂಸ್ಥಾನಗಳು ಈ ದೊಡ್ಡ ರಾಜರುಗಳ ಆಗುಹೋಗುಗಳನ್ನು ಅವಲಂಬಿಸಿ ಅವರೊಡನೆ ವರ್ತಿಸಬೇಕಾಗುವ ಕಠಿಣ ಪ್ರಸಂಗಗಳು ಬರುತ್ತಿದ್ದವು. 1779 ರಲ್ಲಿ ಪರಶುರಾಮ ಭಾವು ಗೋಕಾಕದ ಮೇಲೆ ದಾಳಿಮಾಡಿ ಯುದ್ಧದಲ್ಲಿ ವೀರಪ್ಪಗೌಡ ಸರದೇಸಾಯಿಯನ್ನು ಬಂದಿಯನ್ನಾಗಿ ತೆಗೆದುಕೊಂಡು ಹೋದನು. ವೀರಪ್ಪಗೌಡ ಎಂಥ ಶೂರ ಸೇನಾನಿಯೆಂಬುದನ್ನರಿತ ಪರಶುರಾಮ ಭಾವು, ಆತನು ಒಂದಿಲ್ಲೊಂದು ದಿನ ತನಗೆ ಮುಳುವಾಗಬಹುದೆಂಬ ಹೆದರಿಕೆಯಿಂದ ಆತನನ್ನು ಮಿರಜದಲ್ಲಿ ಬಂಧನದಲ್ಲಿ ಇರಿಸಿದನು. ವೀರಪ್ಪಗೌಡ ಅಲ್ಲಿಯೇ 1782 ರಲ್ಲಿ ಮರಣಹೊಂದಿದನು. ಅವನ ಮೃತ ದೇಹವನ್ನು ಮಿರಜದಿಂದ ಕಿತ್ತೂರಿಗೆ ತಂದು ಕಲ್ಲುಮಠದಲ್ಲಿ ಸಮಾಧಿ ಮಾಡಲಾಯಿತು. ಅವನ ಸಮಾಧಿಯನ್ನು ಸುಸ್ಥಿತಿಯಲ್ಲಿ ಇಂದಿಗೂ ಅಲ್ಲಿ ಕಾಣಬಹುದು.

ಅವನು ಸತ್ತ ಸ್ವಲ್ಪ ದಿನಗಳಲ್ಲಿ, ಅವನ ಮನೆತನದವರು ಮಲ್ಲಸರ್ಜನನ್ನು ದತ್ತಕ ತೆಗೆದುಕೊಂಡರು. 1782 ರಲ್ಲಿ ಮಲ್ಲಸರ್ಜ ಕಿತ್ತೂರಿನ ಪಟ್ಟಕ್ಕೆ ಬಂದನು. ಕಿತ್ತೂರನ್ನು ಆಳಿದ 12 ಜನ ಅರಸರಲ್ಲಿ ನಿಃಸಂದೇಹವಾಗಿ ಇತನೇ ಅತ್ಯಂತ ಪ್ರಭಾವಶಾಲಿಯಾದ ದೊರೆ. ಈ ಚರಿತ್ರೆಯ ನಾಯಕಿಯಾದ ರಾಣಿ ಚೆನ್ನಮ್ಮ ಈತನ ಎರಡನೆಯ ಹೆಂಡತಿ. ಬ್ರಿಟಿಷರ ವಿರುದ್ಧದ ಹೋರಾಟದಲ್ಲಿ ಚೆನ್ನಮ್ಮ ನಿರ್ವಹಿಸಿದ ಪಾತ್ರದ ಮಹತ್ವವನ್ನು ಅರ್ಥಮಾಡಿ ಕೊಳ್ಳಬೇಕಾದರೆ, ಮಲ್ಲಸರ್ಜನು ಮರಣ ಹೊಂದುವವರೆಗಿನ ಆತನ ಆಳಿಕೆ, ಅವನ ಪ್ರಭಾವ, ಶೌರ್ಯ ಇವುಗಳ ಸಮಗ್ರ ಇತಿಹಾಸದ ಕಲ್ಪನೆಯಿರಬೇಕಾಗುತ್ತದೆ. ಮುಂದೆ 1816 ರಲ್ಲಿ ಆತನು ತೀರಿಕೊಂಡ ನಂತರ ರಾಣಿ ಚೆನ್ನಮ್ಮ ಕಿತ್ತೂರಿನ ಆಡಳಿತದ ಪೂರ್ಣ ಜವಾಬ್ದಾರಿಯನ್ನು ಹೊತ್ತುಕೊಂಡಳು.

## ಮಲ್ಲಸರ್ಜ

ಮಲ್ಲಸರ್ಜನು ಕಿತ್ತೂರು ರಾಜ್ಯವನ್ನು 1782 ರಿಂದ 1816 ರವರೆಗೆ ಆಳಿದನು. ಆತನ ಬಗ್ಗೆ ದೊರಕಿರುವ ಐತಿಹಾಸಿಕ ಆಧಾರಗಳಿಂದ, ಹಾಡು, ಕಾವ್ಯ, ಕಥೆ, ನಾಟಕ ಹಾಗೂ ಇತರ ಜಾನಪದ ಸಾಹಿತ್ಯದಲ್ಲಿ ಒಡಮೂಡಿದ ಆತನ ವ್ಯಕ್ತಿತ್ವ ಚಿತ್ರಣಗಳಿಂದ ತಿಳಿದುಬರುವಂತೆ ಆತನ ಆಳಿಕೆ ಕಿತ್ತೂರಿನ ಇತಿಹಾಸದಲ್ಲಿ ಅತ್ಯಂತ ವೈಭವಪೂರ್ಣವಾದ ಆಳಿಕೆಯಾಗಿ ಇತ್ತೆಂಬುದರಲ್ಲಿ ಸಂದೇಹವಿಲ್ಲ. ಬ್ರಿಟಿಷರು, ಫ್ರೆಂಚರು, ಪೋರ್ಚುಗೀಸರು ಪೈಪೋಟಿಯಿಂದ

ಭಾರತ ದೇಶದ ಯಾವ ತುಂಡೂ ದೊರೆತರೂ ಅದನ್ನು ಕಬಳಿಸಲು ಕಾದಾಡುತ್ತಿದ್ದ ಕಾಲವದು. ಭಾರತೀಯ ಸಣ್ಣಪುಟ್ಟ ಸಂಸ್ಥಾನಿಕರು ತಮ್ಮ ತಮ್ಮಲ್ಲಿಯೇ ಕಾದಾಡುತ್ತ ಪರದೇಶದವರ ಬಾಲಬಡೆಯುತ್ತ, ಒಬ್ಬರ ಮೇಲೊಬ್ಬರು ಸೇಡುತೀರಿಸಿಕೊಳ್ಳಲು ಹಾತೊರೆಯುತ್ತಿದ್ದದೂ ಅದೇ ಕಾಲದಲ್ಲಿ. ದಕ್ಷಿಣ ಭಾರತದಲ್ಲಿ ರಾಜಕೀಯ ಪೈಪೋಟಿಯಲ್ಲಿ ತೊಡಗಿದ ಅಧಿಕಾರದಾಹಿಗಳೆನ್ನುವವರಲ್ಲಿ ಮೈಸೂರಿನ ಹೈದರಲಿ, ತದನಂತರ ಟಿಪ್ಪು ಸುಲ್ತಾನ, ಮಹಾರಾಷ್ಟ್ರದ ಪೇಶ್ವೆಯರು, ವಿಜಾಪುರ ಆದಿಲ್‌ಶಾಹಿಗಳು, ಹೈದರಾಬಾದದ ನೈಝಾಮರು ಪ್ರಮುಖರು. ಇಂಥ ಸೆಣಸಾಟಗಳಲ್ಲಿ ತೊಡಗಿದ ಸಣ್ಣ ಸಣ್ಣ ರಾಜ್ಯಗಳು ಅಸಂಖ್ಯಾತ. ಇವರೆಲ್ಲರೂ ತಮ್ಮ ತಮ್ಮ ಸ್ವಂತದ ಅಲ್ಪ ಲಾಭಕ್ಕಾಗಿ ಆಸೆಪಟ್ಟು ಒಬ್ಬರನ್ನೊಬ್ಬರು ದ್ರೋಹಮಾಡುವುದರಲ್ಲಿ ತೊಡಗಿದ್ದರೇ ವಿನಃ ಅದರಿಂದ ಇಡೀ ದೇಶಕ್ಕೆ ಒದಗುವ ಮಹಾ ವಿಪತ್ತಿನ ಬಗೆಗೆ ಅವರಿಗೆ ಯಾವ ಯೋಚನೆಯೂ ಇರಲಿಲ್ಲ. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಮಲ್ಲಸರ್ಜ ಕಿತ್ತೂರಿನ ಸಿಂಹಾಸನವನ್ನೇರಿದನು.

1785ರಲ್ಲಿ ಟಿಪ್ಪು ಸುಲ್ತಾನನು ಧಾರವಾಡದಲ್ಲಿನ ನರಗುಂದ, ರಾಮದುರ್ಗ ಹಾಗೂ ಕಿತ್ತೂರಿನ ಮೇಲೆ ದಾಳಿಮಾಡಿ, ಅವುಗಳನ್ನು ಆಕ್ರಮಿಸಿಕೊಂಡನು. ಕಿತ್ತೂರಿನಲ್ಲಿ ಮೈಸೂರು ಸೈನ್ಯದ ಒಂದು ಪ್ರಬಲ ದಳವನ್ನು ಇಟ್ಟನು. ಮರಾಠರು ಹೈದರಾಬಾದಿನ ನೈಝಾಮನೊಂದಿಗೆ ಕೂಡಿಕೊಂಡು ಬ್ರಿಟಿಷರ ವಿರುದ್ಧ ಒಂದು ದೊಡ್ಡ ದಾಳಿಯನ್ನೇ ಆರಂಭಿಸಿದರು. ಈ ಸೈನ್ಯದ ಮುಖ್ಯ ವಿಭಾಗಗಳು ವಿಜಾಪುರದ ಬಾದಾಮಿ ಹಾಗೂ ಧಾರವಾಡದ ಕಡೆಗೆ ಮುಂದಿವರಿದವು. ತುಕೋಜಿ ಹೋಳಕರ ಹಾಗೂ ಗಣೇಶ ಪ್ರತಾಪ ಬೆಹರೆ ಅವರು 2,500 ಅಶ್ವಸೇನೆಯೊಡನೆ ಕಿತ್ತೂರಿನಲ್ಲಿ ಬೀಡುಬಿಟ್ಟ ಬುರಾಣುದ್ದೀನನ ಮುಖಂಡತ್ವದಲ್ಲಿದ್ದ ಟಿಪ್ಪುವಿನ ಸೈನ್ಯವನ್ನು ಎದುರಿಸಲು ಬಂದರು. ಹೋಳಕರ ಅವ್ಯಾಹತವಾಗಿ ಒಂದು ತಿಂಗಳಕಾಲ ಈ ಸೈನ್ಯವನ್ನು ಹೊರಗಟ್ಟಲು ಯತ್ನಿಸಿದನು. ಉಳಿದ ಎಲ್ಲಕಡೆಗಳ ಸೈನ್ಯವನ್ನು ಆತ ಹೊರಗಟ್ಟಲು ಸಾಧ್ಯವಾಯಿತು. ಆದರೆ ಕಿತ್ತೂರಿನ ಕೋಟೆಯಲ್ಲಿದ್ದ ಸೈನ್ಯವನ್ನು ಹೊರಗಟ್ಟಲು ಅವನಿಗೆ ಸಾಧ್ಯವಾಗಲಿಲ್ಲ. ಈ ಯುದ್ಧದಲ್ಲಿ ಟಿಪ್ಪುವಿನ ಯಶಸ್ಸು ಸಿಗುವ ಸಂಭವ ಹೆಚ್ಚಾಗಿದ್ದರೂ, ಇಂಗ್ಲಿಷರ ದಾಳಿಯ ಹೆದರಿಕೆಯಿಂದಾಗಿ 1787 ರ ಏಪ್ರಿಲ್‌ನಲ್ಲಿ ಕಿತ್ತೂರನ್ನು ಮತ್ತೆ ಮರಾಠರಿಗೆ ಬಿಟ್ಟುಕೊಡಲು ನಿರ್ಧರಿಸಿದನು.

ಅಷ್ಟರಲ್ಲಿ ಆಗಲೇ ಕಿತ್ತೂರು ಮೂರು ವರುಷಗಳ ಕಾಲ ಟಿಪ್ಪುವಿನ ಅಧೀನದಲ್ಲಿತ್ತು. ಆತನ ಸೇನಾಧಿಕಾರಿ ಬದ್ರುಲ್ ಜಮಾಲ್‌ಖಾನ ಕಿತ್ತೂರಿನ ಆಸ್ತಿಯ ವಹಿವಾಟವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಕಿತ್ತೂರ ದೇಸಾಯರ ಅಧಿಕಾರಗಳನ್ನು ಮೊಟಕುಗೊಳಿಸಿದನು. ಅವರಿಗೆ ವರ್ಷಾಶನವನ್ನು ನಿಗದಿ ಮಾಡಿದ. ನಂತರ, 1792ರ ಫೆಬ್ರವರಿಯಲ್ಲಿ, ಶ್ರೀರಂಗಪಟ್ಟಣದ ಸಂಧಾನದ ಪ್ರಕಾರ ಮರಾಠರ ರಾಜ್ಯದ ವ್ಯಾಪ್ತಿ ತುಂಗಭದ್ರ ತೀರದವರೆಗೆ ಹಾಗೂ ಪರಸಗಡದವರೆಗೆ ವಿಸ್ತಾರಗೊಂಡ ಕಾರಣ ಟಿಪ್ಪುವಿನ ಅಧೀನವಾಗಿದ್ದ ಕಿತ್ತೂರಿನ ಭೂಮಿ ಮತ್ತೆ ಮರಳಿ ಮರಾಠಾ ರಾಜ್ಯದ ಭಾಗವಾಯಿತು. ಕಿತ್ತೂರಿನ ಭಾಗವನ್ನು ಪೇಶ್ವೆ,

ಪರುಶರಾಮಭಾವುಗೆ ಒಪ್ಪಿಸಿದನು. ಪರುಶರಾಮಭಾವು ಪೇಶ್ವೆಯರಿಗೆ ಹೆಚ್ಚಿನ ಸೈನ್ಯವನ್ನಿಟ್ಟುಕೊಂಡು ಸಹಾಯ ಮಾಡಿದ್ದನು. ಅದರ ಪ್ರತಿಫಲವಾಗಿ ಈ ನಾಡನ್ನು ಅವನ ಅಧೀನಕ್ಕೆ ಕೊಡಲಾಯಿತು. ಅವನು ಕಿತ್ತೂರಿನಲ್ಲಿ ಒಬ್ಬ ಮಾಮಲೇದಾರನನ್ನು ನೇಮಿಸಿ, ಅದನ್ನು ಧಾರವಾಡದ ಅಧೀನ ಪ್ರಾಂತವನ್ನಾಗಿ ಮಾಡಿದನು. ಕಿತ್ತೂರ ದೇಸಾಯಿಗೆ ವರ್ಷಾಶನವನ್ನು ನಿಗದಿಮಾಡಿಲಾಯಿತು.

1800 ರ ಜೂನ್ ಕೊನೆಯಲ್ಲಿ, ಮಹಾರಾಷ್ಟ್ರದ ಪ್ರಖ್ಯಾತ ದರೋಡೆಕೋರ ಧೊಂಡು ವಾಘ ಕಿತ್ತೂರ ನಾಡಿಗೆ ಬಂದನು. 1800 ರ ಜೂನ್ 30ರಂದು ಕಿತ್ತೂರ ಬಳಿ ಆತನು ಮರಾಠ ಜನರಲ್ ಧೋಂಡೋಪಂಥ ಗೋಖಲೆಯ ಸೈನ್ಯದ ಹಿಂಭಾಗದ ಮೇಲೆ ಹಠಾತ್ತನೇ ದಾಳಿಮಾಡಿ, ಅವನ ಇಡೀ ಸೈನ್ಯವನ್ನು ಓಡಿಸಿದನು. ಈ ದಾಳಿಯಲ್ಲಿ ಗೋಖಲೆ ಕೊಲ್ಲಲ್ಪಟ್ಟನು. 1791ರಲ್ಲಿ ಗೋಖಲೆ ವಾಘನನ್ನು ಸೋಲಿಸಿದಾಗ ವಾಘ ಒಂದು ದಿನ ಗೋಖಲೆಯನ್ನು ಕೊಂದು ಅವನ ಎದೆಯ ರಕ್ತದಿಂದ ತನ್ನ ಮಿಸೆ ಹುರಿಮಾಡಿಕೊಳ್ಳುವು ದಾಗಿ ಪಣತೊಟ್ಟಿದ್ದನು. ಆ ಪಣದ ಪೂರ್ತಿಯಾಗಿ ಅಂದು ವಾಘ ಗೋಖಲೇನ ಎದೆಯ ರಕ್ತದಲ್ಲಿ ತನ್ನ ಮಿಸೆಯನ್ನು ಅದ್ದಿ ಹುರಿಮಾಡಿಕೊಂಡನು. ಕಿತ್ತೂರಿನ ರಾಜ್ಯದಲ್ಲಿ ಧೊಂಡು ಕೆಲವು ದಿವಸ ವಿಹರಿಸುತ್ತಿದ್ದನು. ಆಗ ಜನರಲ್ ವೆಲ್ಲಸ್ಲಿ ಧಾರವಾಡಕ್ಕೆ ಬಂದನು. ಆತನು ಧೊಂಡುನನ್ನು ಬೆನ್ನಟ್ಟಿ 1800ರ ಜುಲೈ 30ರಂದು ಕಿತ್ತೂರಿನಿಂದ 25 ಮೈಲು ಉತ್ತರಕ್ಕೆ ಮುನೋಳಿಯ ಬಳಿ ಧೊಂಡುನ ಸೈನ್ಯದ ಭಾಗವನ್ನು ನಾಶಪಡಿಸಿದನು. ಆಗ ಧೊಂಡು ಕಿತ್ತೂರಿನ ಕಡೆಗೆ ಧಾವಿಸಿದನು. ಅಲ್ಲಿಂದ ಮಲಪ್ರಭಾನದಿಯ ದಂಡೆಗುಂಟ ಓಡಿ ಪಶ್ಚಿಮಭಾಗದ ಅಡವಿಯನ್ನು ಹೊಕ್ಕು ಫಾರಾದನು. ಜನರಲ್ ವೆಲ್ಲಸ್ಲಿ ಆತನನ್ನು ಬೆನ್ನಟ್ಟಿ ಆಗಸ್ಟ್ 5 ರಂದು ಕಿತ್ತೂರಿಗೆ ಬಂದನು. ಆಗ ಮಲಪ್ರಭಾ ತುಂಬಿ ಹರಿಯುತ್ತಿದ್ದ ಕಾರಣ ಅದನ್ನು ದಾಟಲು ಸಾಧ್ಯವಾಗದೆ ಆರು ದಿವಸ ಕಿತ್ತೂರಿನ ಬಳಿ ಬೋಟುಗಳನ್ನು ಸಿದ್ಧಪಡಿಸಿಕೊಳ್ಳಲು ಕಳೆಯಬೇಕಾಯಿತು.

ಪೇಶ್ವೆಯರು 1792ರಲ್ಲಿ ಬ್ರಿಟಿಷರೊಡನೆ ಶ್ರೀರಂಗಪಟ್ಟಣದ ಸಂಧಾನ ಪತ್ರಕ್ಕೆ ಸಹಿ ಹಾಕಿದ ನಂತರ ಸುಮಾರು 25 ವರ್ಷಗಳ ಕಾಲ ಬ್ರಿಟಿಷರ ಹಾಗೂ ಪೇಶ್ವೆಯರ ಸಂಬಂಧಗಳು ಸ್ನೇಹಪರವಾಗಿದ್ದವು. ಪೇಶ್ವೆಯರು ಬ್ರಿಟಿಶನ ಅಧೀನತ್ವವನ್ನು ಒಪ್ಪಿಕೊಂಡು, ಅವರ ಆಜ್ಞಾಧಾರಕ ಕೈಗೊಂಬೆಗಳಂತೆ ವರ್ತಿಸಲು ತೊಡಗಿದರು. ಪೇಶ್ವೆಯರ ಅಧೀನ ರಾಜ್ಯವಾದ ಕಿತ್ತೂರು ಕೂಡ, ಇದರಿಂದಾಗಿ ಬ್ರಿಟಿಷರ ಅಧೀನತ್ವಹೊಂದಿ ಅವರಿಗೆ ಗೌರವಕೊಟ್ಟು ವರ್ತಿಸಬೇಕಾಯಿತು. 1802 ರಲ್ಲಿ ಜನರಲ್ ವೆಲ್ಲಸ್ಲಿ ಬಾಜೀರಾವ ಪೇಶ್ವೆಯನ್ನು ತಿರುಗಿ ಪಟ್ಟಕ್ಕೆ ಕೂಡಿಸಲು ಶ್ರೀರಂಗಪಟ್ಟಣದಿಂದ ಪುಣೆಗೆ ಹೊರಟಿದ್ದನು. ಆಗ ಬ್ರಿಟಿಷರಿಗೆ ಅನೇಕ ಮಾಂಡಲಿಕರು ಸೈನ್ಯ ಹಾಗೂ ಹಣದ ಸಹಾಯ ಮಾಡಬೇಕಾಯಿತು. ಆಗ ಉಳಿದವರಂತೆ ಕಿತ್ತೂರ ದೇಸಾಯಿಯವರು 100 ಕುದುರೆ ಹಾಗೂ 100 ಸೈನಿಕರನ್ನು ಬ್ರಿಟಿಷರ ಪರವಾಗಿ ಹೋರಾಡಲು ಕೊಟ್ಟರು. ಮಲ್ಲಸರ್ಜನು ಸಂಗೊಳ್ಳಿಯಲ್ಲಿ ಬ್ರಿಟಿಷರಿಗೆ ಸೈನ್ಯವನ್ನಿಡಲು

ಒಂದು ಕೋಟೆಯನ್ನೂ ಕೊಟ್ಟನು. ಅದರಿಂದ ಅವರಿಗೆ ಒಂದು ಆಯಕಟ್ಟಿನ ಸ್ಥಳ, ದವಾಖಾನೆ ಹಾಗೂ ತಮ್ಮ ಸಣ್ಣ ನಾವೆಗಳನ್ನು ಇಟ್ಟುಕೊಳ್ಳಲು ಅವಕಾಶ ದೊರೆಯಿತು. ಆದರೆ ಇದರಿಂದ ಬ್ರಿಟಿಷರಿಗೆ ವಿಶೇಷ ಉಪಯೋಗವೇನೂ ಆಗಲಿಲ್ಲ. ಅವರಿಗೆ ದೂರದಿಂದ ಹಣ ಸಹಾಯ ಹಾಗೂ ಆಹಾರ ಬರಬೇಕಾಗಿತ್ತು. ಆದರೆ ಅವರು ಮಾಡಿದ ಈ ಸಹಾಯ ಹಾಗೂ ಸದ್ವರ್ತನೆಯ ಪ್ರತಿಫಲವಾಗಿ ಕಿತ್ತೂರ ದೇಸಗತಿಯನ್ನು ಮುಂದುವರಿಸಲಾಯಿತು. ಆಗ ಮಲ್ಲಸರ್ಜನನ ರಾಜ್ಯದ ವಾರ್ಷಿಕ ಉತ್ಪನ್ನ ಸುಮಾರು 5 ಲಕ್ಷ ರೂಪಾಯಿಗಳಾಗಿತ್ತು. ಅವನು 1,000 ಕುದುರೆ, 4,000 ಕಾಲಾಳುಗಳ ಸೈನ್ಯವನ್ನು ಇಟ್ಟುಕೊಂಡಿದ್ದನು. ಅವನು ಪೇಶ್ವೆಯರಿಗೆ ವರ್ಷಕ್ಕೆ 70,000 ರೂಪಾಯಿಗಳ ನಝುರಾನಾ ಕೊಡುತ್ತಿದ್ದನು. ಎಲ್ಲವೂ ಸುರಳೀತವಾಗಿ ಸಾಗಿತ್ತು. ಕಿತ್ತೂರು ಆಂತರಿಕ ವ್ಯವಹಾರದಲ್ಲಿ ಹಾಗೂ ಆಡಳಿತ ವಿಷಯಗಳಲ್ಲಿ ಪೂರ್ಣ ಸ್ವತಂತ್ರವಾಗಿತ್ತು.

1804 ರಲ್ಲಿ ಪೇಶ್ವೆಯರು ಕಿತ್ತೂರಿನ ಉತ್ಕರ್ಷ ಹಾಗೂ ಬೆಳೆಯುತ್ತಿರುವ ಪ್ರಾಬಲ್ಯವನ್ನು ಅನುಲಕ್ಷಿಸಿ, ಭಯಗ್ರಸ್ಥರಾಗಿ, ವೆಲ್ಲಸ್ಲಿಗೆ ಆ ರಾಜನನ್ನು ಸಿಂಹಾಸನದಿಂದ ತಳ್ಳಿ, ಅವನ ರಾಜ್ಯವನ್ನು ಕಸಿದುಕೊಳ್ಳಲು ಸಲಹೆ ನೀಡಿದರು. ಆ ಸಲಹೆಯನ್ನು ವೆಲ್ಲಸ್ಲಿ ಒಪ್ಪಲಿಲ್ಲ. ಈ ನಿರಾಕರಣೆಯ ಕಾರಣವನ್ನು ವೆಲ್ಲಸ್ಲಿ 1804 ರ ಮೇ 6ನೆಯ ದಿನಾಂಕ ಬರೆದ ಪತ್ರದಲ್ಲಿ ಕಾಣಿಸಿರುವನು. ಈ ಪತ್ರ ಕಿತ್ತೂರಿನ ಜನತೆಯ ಗುಣ ಹಾಗೂ ಸ್ವಭಾವಗಳ ಬಗ್ಗೆ ಬಹಳ ಬೆಳಕನ್ನು ಚೆಲ್ಲಬಲ್ಲದು. ಈ ವಿಚಾರವನ್ನು ವೆಲ್ಲಸ್ಲಿಯವರ ಮಾತಿನಲ್ಲಿಯೇ ಕೇಳುವುದು ಒಳಿತು:

"ನಾನು ಕಿತ್ತೂರ ರಾಜರೊಡನೆ ಕದನಕ್ಕಿಳಿಯಲು ಹಿಂಜರಿಯುತ್ತೇನೆ. ಅದು ಅನಿವಾರ್ಯವಾದ ಪ್ರಸಂಗದಲ್ಲಿ ಅಥವಾ ನಮ್ಮ ಎಲ್ಲ ಸೈನ್ಯವನ್ನೂ ಅಂಥ ಯುದ್ಧದಲ್ಲಿ ಉಪಯೋಗಿಸಲು ಸಾಧ್ಯವಿದ್ದರೆ ಮಾತ್ರ ನಾನು ಕಿತ್ತೂರಿನೊಡನೆ ಯುದ್ಧಮಾಡಲು ಸಿದ್ಧ. ವೈನಾಡ, ಕೂರ್ಗ, ಬಲ್ಲಮ ಬೈಂದೂರು, ಸೊಂಡಗಳಂತೆ ಕಿತ್ತೂರು ಪಶ್ಚಿಮಘಟ್ಟಗಳ ಸಾಲಿನ ಪೂರ್ವಭಾಗಕ್ಕೆ ಅತಿ ಸಮೀಪದಲ್ಲಿದೆ. ಅವುಗಳಂತೆ ಇಲ್ಲಿಯದೂ ಸೈನ್ಯಕ್ಕೆ ಬಹಳ ಕಷ್ಟದ ಸ್ಥಳ. ಅಲ್ಲಿಯವರಂತೆ ಇಲ್ಲಿಯ ಜನರೂ ಶೂರರು. ಇವರೊಂದಿಗೆ ಮಾಡುವ ಯಾವುದೇ ಯುದ್ಧದಲ್ಲಿ ನಮಗೆ ಸಾವು ನೋವುಗಳು ಅಧಿಕ ಸಂಖ್ಯೆಯಲ್ಲಿ ಆಗುವುದು ಖಂಡಿತ. ಈ ಭಾಗವು ಕಂಪೆನಿಯ ರಕ್ಷಣಾರಹಿತ ಗಡಿಯಲ್ಲಿರುವುದು. ಹುಲಿಹಳ್ಳಿಯಲ್ಲಿ ನನಗೆ ಸಾಕಷ್ಟು ಸೈನ್ಯವಿಲ್ಲ. ಯಾಕೆಂದರೆ ಅಲ್ಲಿಯ ಸೈನ್ಯದ ವಿಭಾಗವನ್ನು ಗೋವಾದ ಸೈನ್ಯವನ್ನು ಬಲಪಡಿಸಲು ತಿರುಗಿ ತಕ್ಕೊಳ್ಳಬೇಕಾಯಿತು. ಹುಲಿಹಳ್ಳಿಯ ಕೋಟೆ ಕಿತ್ತೂರಿನ ವಶವಾದರೆ ಕಿತ್ತೂರ ರಾಜನಿಗೆ ಒಂದು ಭದ್ರ ರಕ್ಷಣೆಯ ಕೋಟೆ ಮಾತ್ರವಲ್ಲ, ಅದರ ಮುಖಾಂತರವಾಗಿ ಕಾರವಾರ ಹಾಗೂ ಬಿದನೂರಗಳಿಗೆ ಒಂದು ಉತ್ತಮ ಪ್ರವೇಶದ್ವಾರ ದೊರಕಿದಂತಾಗುತ್ತದೆ. ಅವು ಎರಡೂ ಜಿಲ್ಲೆಗಳು ರಕ್ಷಣಾರಹಿತವಾಗಿ ನಮ್ಮ ಕೈಬಿಡುವ ಸಂಭವವಿದೆ. ಕಾರವಾರದ ಮುಖಾಂತರವಾಗಿ ನಮ್ಮ ಮುಂಬಯಿ ಪುಣೆಯಲ್ಲಿಯ ಸೈನ್ಯಗಳು ತಮ್ಮ ಆಹಾರ ಹಾಗು

ಇತರ ಜೀವನಾವಶ್ಯಕತೆ ಅನುಕೂಲತೆಗಳನ್ನು ಪಡೆಯುವವು. ಕಿತ್ತೂರಿನ ಬಗೆಗೆ ಬಂದ ವರದಿಗಳು ನಿಮಗೆ ಆಧಾರಯುಕ್ತವಾಗಿ ಕಂಡರೂ ಪೂರ್ತಿ ನಂಬಲು ಅರ್ಹವಾದ ಸಂಗತಿಗಳಲ್ಲ. ಆದರೆ ಎಲ್ಲ ವಿಷಯಗಳನ್ನು ಸಮಗ್ರವಾಗಿ ಯೋಚಿಸಿದಾಗ, ಈ ಪ್ರಸಂಗದಲ್ಲಿ ಕಿತ್ತೂರ ರಾಜನನ್ನು ಪದಚ್ಯುತಗೊಳಿಸುವ ಯತ್ನವನ್ನು ಕೈಬಿಡುವ ಆವಶ್ಯಕತೆಯನ್ನು ಸಾರಿ ಹೇಳುತ್ತೇನೆ. ಕಿತ್ತೂರ ರಾಜನ ಕೈಯಲ್ಲಿ ನಮ್ಮನ್ನು ಅಸಹಾಯಕರನ್ನಾಗಿ ಮಾಡುವ ಬಲ ಶಕ್ತಿ ಹಾಗೂ ಅನುಕೂಲತೆಗಳಿವೆ. ಅವುಗಳನ್ನು ಎದುರಿಸುವ ಶಕ್ತಿ ಮತ್ತು ಸಾಧ್ಯತೆಯನ್ನು ನಾವು ಪಡೆದುಕೊಳ್ಳುವವರೆಗೆ ಈ ವಿಚಾರವನ್ನು ಬಿಡುವುದೇ ಲೇಸು."

1809 ರಲ್ಲಿ ಮಲ್ಲಸರ್ಜನು ಪೇಶ್ವೆಯವರೊಂದಿಗೆ 1,75,000 ರೂಪಾಯಿಗಳ ವರ್ಷಾಶನ ಕೊಡಲು ಒಪ್ಪಿ ಒಪ್ಪಂದ ಮಾಡಿಕೊಂಡನು. ಈ ಒಪ್ಪಂದದ ಪ್ರಕಾರ ದೇಸಾಯಿ ತನ್ನ ದೇಸಗತಿಯನ್ನು ಇಟ್ಟುಕೊಳ್ಳ ಬಹುದಲ್ಲದೇ ಸೈನ್ಯವನ್ನು ಇಟ್ಟುಕೊಳ್ಳುವುದಕ್ಕಾಗಿ ಕೆಲವು ಹಣದ ಸಹಾಯವನ್ನೂ ಪಡೆಯಬಹುದಾಗಿತ್ತು. ಅವನಿಗೆ 'ಪ್ರತಾಪರಾವ' ಎಂಬ ಬಿರುದನ್ನೂ ಕೊಡಲಾಯಿತು. ಈ ಬಿರುದಿನ ಸಂಪಾದನೆಯ ನೆನಹಿಗಾಗಿ ನಂದಗಡದ ಹತ್ತರ ಒಂದು ದೊಡ್ಡ ಕೋಟೆಯನ್ನು ಕಟ್ಟಿಸಲಾಯಿತು. ಆ ಕೋಟೆಗೆ 'ಪ್ರತಾಪಗಡ' ಎಂದು ಹೆಸರಿಡಲಾಯಿತು.

ಕಿತ್ತೂರ ಅರಸರು ಪೇಶ್ವೆಯರಿಗೆ ತೋರಿದ ರಾಜನಿಷ್ಠೆ ಹಾಗೂ ಸಹಾಯಗಳ ಬಗ್ಗೆ ಪೇಶ್ವೆಯರಿಗೆ ಕಿತ್ತೂರ ಬಗ್ಗೆ ಪ್ರೀತಿ ವಿಶ್ವಾಸಗಳಿರಲಿಲ್ಲ. ಮಲ್ಲಸರ್ಜನಂಥ ದೊರೆಯನ್ನು ಕೂಡ ಅವರು ಸರಿಯಾಗಿ ನಡೆಸಿಕೊಳ್ಳಲಿಲ್ಲ. ಅವನನ್ನು ಮೋಸದಿಂದ ಹಿಡಿದೊಯ್ದು ಪುಣೆಯಲ್ಲಿ ಜಡ್ಡಿಗೆ ಬಿದ್ದನು; ಅವನ ಪ್ರಕೃತಿ ಅತಿಯಾಗಿ ಕ್ಷೀಣಿಸಿತು. ಅಲ್ಲಿಂದ ಮರಳಿದ ಸ್ವಲ್ಪ ದಿನಗಳಲ್ಲಿಯೇ ಅವನು ತೀರಿಕೊಂಡನು. ಆತನ ಇಚ್ಛೆಯಮೇರೆಗೆ ಅಷ್ಟರಲ್ಲಿಯೇ ಶಿವಲಿಂಗ ರುದ್ರಸರ್ಜ ದತ್ತಕ ತೆಗೆದುಕೊಳ್ಳಲ್ಪಟ್ಟಿದ್ದನು. ಈತನು 1816ರಲ್ಲಿ ಪಟ್ಟಕ್ಕೆ ಬಂದನು. ಹೀಗೆ ಕಿತ್ತೂರಿನ ಅತ್ಯಂತ ವೈಭವಯುತವಾದ ಆಳಿಕೆ ಕೊನೆಗೊಂಡಿತು. ಮುಂದಿನ ಅಧ್ಯಾಯದಲ್ಲಿ ಮಲ್ಲಸರ್ಜನ ಮಹತ್‌ಸಾಧನೆಗಳನ್ನು ಸ್ವಲ್ಪದರಲ್ಲಿಯೇ ವಿವರಿಸಲಾಗುವುದು.

# 2. ಮಲ್ಲಸರ್ಜನ ಆಳ್ವಿಕೆ

ಕಿತ್ತೂರಿನ ರಾಜರಲ್ಲಿ ಮಲ್ಲಸರ್ಜನ ಆಳ್ವಿಕೆಯು ಅತ್ಯಂತ ವೈಭವಪೂರ್ಣ ಹಾಗೂ ಅನೇಕ ಮಹತ್ವದ ಘಟನೆಗಳಿಂದ ಒಡಗೂಡಿದ ಆಳ್ವಿಕೆ. ಅದು ಕಿತ್ತೂರಿನ ಇತಿಹಾಸದಲ್ಲಿ ಅತ್ಯಂತ ಕಷ್ಟದ ಕಾಲವೂ ಹೌದು. ಕಿತ್ತೂರ ರಾಜ್ಯವನ್ನು ಆತನು 34 ವರುಷಗಳವರೆಗೆ ಆಳಿದನು. ಆತನು ಕಿತ್ತೂರಿನ ರಾಜರಲ್ಲಿ ಅತ್ಯಂತ ಪ್ರಖ್ಯಾತ ಹಾಗೂ ಗೌರವಾನ್ವಿತ ದೊರೆ.

ಅಂದಿನ ಕಿತ್ತೂರು, ಇಂದಿನ ಬೆಳಗಾಂವ, ಕಾರವಾರ ಹಾಗೂ ಧಾರವಾಡ ಜಿಲ್ಲೆಗಳಲ್ಲಿರುವ ಸಂಪಗಾಂವ, ಬೀಡಿ, ಕಿತ್ತೂರ, ಖಾನಾಪೂರ, ಕಲಘಟಗಿ, ಮನೋಳಿ ಮತ್ತು ನರಗುಂದ ಈ ಊರುಗಳನ್ನು ಒಳಗೊಂಡಿತ್ತು. ಆಗ ಅದರ ಕಕ್ಕೆಯಲ್ಲಿ 286 ದೊಡ್ಡ ಊರುಗಳು 72 ಸಣ್ಣ ಹಳ್ಳಿಗಳು ಇದ್ದವು. ಈ ಹಳ್ಳಿಗಳು 'ಕರ್ಯಾತು'ಗಳೆಂಬ ಆಡಳಿತ ವಿಭಾಗಗಳಲ್ಲಿ ಹಂಚಲ್ಪಟ್ಟಿದ್ದವು. ಕಿತ್ತೂರ ಸಂಸ್ಥಾನದಲ್ಲಿ ಅಂದ್ಕು ಇಂಥ 14 ಕರ್ಯಾತುಗಳು ಇದ್ದವು ಮತ್ತು ಸಂಸ್ಥಾನದ ಆಡಳಿತ ಸರಿಯಾಗಿ ಸಾಗಿತ್ತು. ಕಿತ್ತೂರಿನ ಪಶ್ಚಿಮಭಾಗ ಕಾಡಿನಿಂದ ಆಚ್ಛಾದಿತವಾದ ಗುಡ್ಡಗಾಡು ಪ್ರದೇಶವಾಗಿತ್ತು. ಅದರಲ್ಲಿ ಖಾನಾಪುರದ ಉತ್ತರಭಾಗದಲ್ಲಿ ಇರುವ ಗುಡ್ಡಗಳು ಬಹಳ ಎತ್ತರವೂ, ಕಲ್ಲು ಬಂಡೆಗಳಿಂದ ಆಚ್ಛಾದಿತವೂ ಆಗಿದ್ದವು. ಕಿತ್ತೂರಿನ ಉತ್ತರದ ಮೇಲೆ ಬೆಳಗಾವಿಯಿಂದ ದಕ್ಷಣಕ್ಕೆ ಸುಮಾರು 20 ಕಿಲೋಮಿಟರಿನ ಹತ್ತಿರವಿದ್ದರೆ, ದಕ್ಷಿಣದ ಮೇಲೆ ಧಾರವಾಡದಿಂದ ಉತ್ತರಕ್ಕೆ ಸುಮಾರು 25 ಕಿಲೋಮಿಟರಿನ ಹತ್ತಿರವಿತ್ತು. ಅದರ ಪಶ್ಚಿಮದ ಮೇರೆ ತಾವರೆಗಟ್ಟಿಯವರೆಗೆ ಇದ್ದು ಮಲೆನಾಡಿನಲ್ಲಿನ ದೇಸನೂರು, ಸುಪಾ, ದಾಂಡೇಲಿ ಮತ್ತು ಉಳವಿ ಪಟ್ಟಣಗಳನ್ನು ಒಳಗೊಂಡಿತ್ತು. ಅದರ ಪೂರ್ವದ ಗಡಿ ಯಕ್ಕುಂಡಿಯವರೆಗೆ ಇದ್ದು, ಬೈಲಸೀಮೆಯಲ್ಲಿಯ ಬೈಲಹೊಂಗಲ, ಮುರಗೋಡ, ದೊಡವಾಡ, ತಡಕೋಡ ಮತ್ತು ಗರಗ ಪಟ್ಟಣಗಳನ್ನೊಳಗೊಂಡಿತ್ತು. ಈ ಎಲ್ಲ ಭಾಗಗಳಲ್ಲಿಯೂ ಮಳೆಗಾಲದಲ್ಲಿ ವಿಶೇಷ ಮಳೆಯಾಗುತ್ತಿತ್ತು. ಮತ್ತು ಬೇಸಿಗೆ ಕಾಲ ಅಷ್ಟೊಂದು ಪ್ರಖರವಾಗಿರಲಿಲ್ಲ.

ಆಗಿನ ಕಾಲದಲ್ಲಿ ಪ್ರವಾಸಕ್ಕೆ ಅನುಕೂಲತೆಗಳಿರಲಿಲ್ಲ. ಮಳೆಗಾಲದಲ್ಲಿ ಹೊಳೆ-ಹಳ್ಳಗಳು ತುಂಬಿ ಹರಿಯಹತ್ತಿದವೆಂದರೆ ಊರಿಂದ ಊರಿಗೆ ಸಂಪರ್ಕ ತಪ್ಪಿಹೋಗುತ್ತಿತ್ತು. ಮಳೆಗಾಲದಲ್ಲಿ ಮಲಪ್ರಭಾ ನದಿಗೆ ಅನೇಕ ಸಲ ಮಹಾಪೂರ ಬರುತ್ತಿತ್ತು. ಆಗ ಆ ನದಿಯನ್ನು ದಾಟುವುದು ದುಸ್ತರವಾಗುತ್ತಿತ್ತು. ಕಿತ್ತೂರಿನ ರಾಜ್ಯದಲ್ಲಿ ಐದು ಮುಖ್ಯವಾದ ರಸ್ತೆಗಳು ಹಾಯುತ್ತಿದ್ದವು. ಉತ್ತರಕ್ಕೆ ಪುಣೆಯ ಕಡೆಗೆ ಹೋಗಲು ಎರಡು ದೊಡ್ಡ ರಸ್ತೆಗಳಿದ್ದವು.

ಕಲಾದಗಿ ಸೋಲಾಪುರಗಳಿಗೆ ಹೋಗಲು ಈಶಾನ್ಯ ದಿಕ್ಕಿಗೆ ಒಂದು ರಸ್ತೆಯಿದ್ದಿತು. ಇನ್ನೊಂದು ರಸ್ತೆ ಆಗ್ನೇಯಕ್ಕೆ ಧಾರವಾಡಕ್ಕೆ ಹೋಗುತ್ತಿತ್ತು. ಮತ್ತೊಂದು ರಸ್ತೆ ಪಶ್ಚಿಮಕ್ಕೆ ಗೋವೆಗೆ ಹೋಗುತ್ತಿತ್ತು. ಸಂಪರ್ಕಗಳ ವ್ಯವಸ್ಥೆ ಅಷ್ಟು ಸಮರ್ಪಕವಾಗಿರದಿದ್ದರೂ ಕಿತ್ತೂರಿನಲ್ಲಿ ವ್ಯಾಪಾರ, ಉದ್ಯಮೆಗಳು ಉತ್ಕರ್ಷೆಯ ಸ್ಥಿತಿಯಲ್ಲಿದ್ದವು. ಕಿತ್ತೂರಿನ ಫಲವತ್ತಾದ ಭೂಮಿಯಲ್ಲಿ ಬೆಳೆದ ದವಸಧಾನ್ಯಗಳು ಹಾಗೂ ಪಶ್ಚಿಮ ಘಟ್ಟದ ಕೆಳಗಿನ ಪ್ರದೇಶಗಳೊಂದಿಗೆ ಬೆಳೆದ ವ್ಯಾಪಾರೀ ಸಂಬಂಧಗಳಿಂದಾಗಿ ಕಿತ್ತೂರು ಸಮೃದ್ಧಿಯನ್ನು ಪಡೆದಿತ್ತು. ಆರ್ಥಿಕ ಸಮೃದ್ಧಿಯಿಂದ ಸಂಸ್ಥಾನದಲ್ಲಿ ಸುಖ ಶಾಂತಿಗಳು ನೆಲೆಸಿದ್ದವು.

ಮಲ್ಲಸರ್ಜನ ಆಳ್ವಿಕೆಯಲ್ಲಿ ವ್ಯಾಪಾರ ಹಾಗೂ ಉದ್ದಿಮೆಗಳು ಭರಾಟೆಯಲ್ಲಿದ್ದವು; ಜನರು ಸುಖಿಗಳಾಗಿದ್ದರು. ಕುಶಲ ಕಲೆ ಹಾಗೂ ಸಣ್ಣ ಕೈಗಾರಿಕೆಗಳಿಗೂ ವಿಶೇಷ ಸವಲತ್ತುಗಳನ್ನು ಕೊಡಲಾಗಿತ್ತು. ಸೀರೆ, ಧೋತರ ಮುಂತಾದ ಬಟ್ಟೆಗಳು, ಬಳೆಗಳು ಸಂಸ್ಥಾನದ ಹಲವಾರು ಕಡೆಗಳಲ್ಲಿ ತಯಾರಾಗುತ್ತಿದ್ದವು. ಒಕ್ಕಲುತನಕ್ಕೆ ಬೇಕಾಗುವ ಉಪಕರಣಗಳನ್ನು ಅನೇಕ ಕಡೆಗಳಲ್ಲಿ ತಯಾರಿಸಲಾಗುತ್ತಿತ್ತು. ನಂದಗಡ, ಖಾನಾಪುರ, ಬೈಲಹೊಂಗಲ, ಕಿತ್ತೂರ, ಸಂಪಗಾಂವ ಮತ್ತು ದೇಸನೂರ ಊರುಗಳು ಸಂಸ್ಥಾನದಲ್ಲಿಯ ಪ್ರಮುಖ ವ್ಯಾಪಾರೀ ಕೇಂದ್ರಗಳಾಗಿದ್ದವು. ಸಹ್ಯಾದ್ರಿ ಗುಡ್ಡಗಳಿಂದ ಪೂರ್ವಕ್ಕೆ ಸುಮಾರು 65 ಕಿಲೋಮಿಟರ ದೂರದಲ್ಲಿದ್ದ ಕಿತ್ತೂರು ಸಂಸ್ಥಾನ ಘಟ್ಟದ ಕೆಳಗಿನ ಜನರೊಡನೆ ವ್ಯಾಪಾರ ಸಂಪರ್ಕಹೊಂದಲು ಒಳ್ಳೇ ಆಯಕಟ್ಟಿನ ಸ್ಥಳವಾಗಿತ್ತು. ಕೊಂಕಣ ಪ್ರದೇಶದಲ್ಲಿ ತಯಾರಾದ ಅಥವಾ ಆ ಭಾಗದಿಂದ ಬಂದ ಎಲ್ಲ ವಸ್ತುಗಳೂ ಬೈಲುಸೀಮೆಗೆ ಹೋಗುವಾಗ ನಂದಗಡದಲ್ಲಿ ಹಾಯ್ದು ಹೋಗಲೇಬೇಕಾಗುತ್ತಿತ್ತು. ಬೈಲಹೊಂಗಲವು ಒಂದು ಒಳ್ಳೆಯ ಹತ್ತಿ ಹಾಗೂ ಬಟ್ಟೆಗಳ ವ್ಯಾಪಾರೀ ಕೇಂದ್ರವಾಗಿದ್ದಿತು. ಸಂಪಗಾಂವ ಪಟ್ಟಣವು ಬಟ್ಟೆ ತಯಾರಿಸುವ ಗಿರಣಿಗಳ ಒಂದು ದೊಡ್ಡ ಊರು ಮತ್ತು ಹತ್ತಿ ಹಾಗು ಬಟ್ಟೆಗಳ ದೊಡ್ಡ ವ್ಯಾಪಾರೀ ಕೇಂದ್ರವೂ ಆಗಿತ್ತು ಅದರಂತೆ ದೇಸನೂರ ಬಟ್ಟೆ ಹಾಗೂ ನಾರಿನ ಕೇಂದ್ರವಾಗಿತ್ತಲ್ಲದೆ ಕೊಂಕಣ ನಾಡಿನೊಡನೆ ನಿಕಟ ವ್ಯಾಪಾರ ಸಂಬಂಧ ಹೊಂದಿದ್ದಿತು. ಒಟ್ಟಾರೆ ಕಿತ್ತೂರು ಒಕ್ಕಲುತನ ಹಾಗು ಉದ್ದಿಮೆಗಳಲ್ಲಿ ಅತಿ ಉತ್ಕರ್ಷೆಯನ್ನು ಹೊಂದಿನ ನಾಡಾಗಿತ್ತು. ಕಿತ್ತೂರ ನಾಡಿನ ಅಂದಿನ ವಾರ್ಷಿಕ ಉತ್ಪನ್ನ ಸುಮಾರು 4,50,000 ರೂಪಾಯಿಗಳಾಗಿದ್ದು, ಕಿತ್ತೂರು ಒಂದು ನಾಣ್ಯ ತಯಾರಿಸುವ ಕಮ್ಮಟವನ್ನೂ ಹೊಂದಿತ್ತು.

ಮಲ್ಲಸರ್ಜನು ಸಾಹಿತ್ಯ, ನಾಟಕ, ನೃತ್ಯ, ಹಾಡು, ಬೈಲಾಟ ಮುಂತಾದ ಕಲೆಗಳಲ್ಲಿ ಬಹಳ ಆಸಕ್ತಿಯುಳ್ಳವನಾಗಿದ್ದನು. ಆತನು ಸಾಹಿತಿಗಳಿಗೆ ಕವಿಗಳಿಗೆ ವಿಶೇಷ ಪ್ರೋತ್ಸಾಹವನ್ನೀಯುತ್ತಿದ್ದನು. ಆತನ ಆಸ್ಥಾನದಲ್ಲಿ ಅನೇಕ ಕವಿಗಳು, ನಾಟಕಕಾರರು, ಸಾಹಿತಿಗಳು ಆಶ್ರಯ ಹೊಂದಿದ್ದರು. ಅವರಿಗೆ ಅಲ್ಲಿ ವಿಶೇಷ ಮನ್ನಣೆ ದೊರೆಯುತ್ತಿತ್ತು. ಆದ್ದರಿಂದ ಕಾವ್ಯ ಹಾಗು ಸಾಹಿತ್ಯ ಹುಲುಸಾಗಿ ಬೆಳೆದವು. ಅನೇಕ ಸಲ ಮಲ್ಲಸರ್ಜನ ದರ್ಬಾರದಲ್ಲಿ ಕಾವ್ಯವಾಚನ, ನೃತ್ಯ ಹಾಗೂ ನಾಟಕಗಳ ಪ್ರದರ್ಶನ ನಡೆಯುತ್ತಿದ್ದವು. ಮಲ್ಲಸರ್ಜನ ಆಸ್ಥಾನದಲ್ಲಿ ಆಶ್ರಯ ಪಡೆದ ಅನೇಕ ಕವಿಗಳ ನಾಟಕಕಾರರ ಹಾಗೂ ಪಂಡಿತರ ಹೆಸರುಗಳ ಉಲ್ಲೇಖಗಳು

ಹಲವಾರು ಕಡೆಗಳಲ್ಲಿ ದೊರೆತಿವೆ. ಇಂಥವರಲ್ಲಿ ಕೊಳಸಿ ರಂಗಾಚಾರ್ಯರೆಂಬ ನಯ್ಯಾಯಿಕ ತತ್ವಜ್ಞಾನದಲ್ಲಿ ಪಾರಂಗತರಾದ ಪಂಡಿತರು, ವೆಂಗಿ ಚೆನ್ನಬಸಪ್ಪ, ಮುಳಗುಂದ ಜವಳಿ ಶೆಟ್ಟರ ಚೆನ್ನಬಸಪ್ಪ, ಕಾಶಿರಾಜ, ವರರುದ್ರಕವಿ, ಮಣಿಪುರದ ನೀಲಕಂಠಾರ್ಯ, ಮಾಗುಂಡಿ ಬಸವ, ಶಿವಲಿಂಗಶಾಸ್ತ್ರಿ, ದೇವರಶೀಗೀಹಳ್ಳಿ ರುದ್ರಗೌಡ, ಬೆಟಗೇರಿ ಶಿವಲಿಂಗಶಾಸ್ತ್ರಿ ಮುಂತಾದ ಕವಿಗಳು, 'ಮಲ್ಲೀಂದ್ರ ಮನೋಲ್ಲಾಸ' ಅಥವಾ 'ಮಲ್ಲತರಂಗಿಣಿ' ಎಂಬ ಮಲ್ಲಸರ್ಜನ ಬಗ್ಗೆ ಬರೆದ ಪ್ರಶಸ್ತಿ ಖಂಡ ಕಾವ್ಯವನ್ನು ರಚಿಸಿದ ಅಮೃತೇಶ್ವರ ಇವರು ಪ್ರಮುಖರು. ಹಲವು ಕವಿಗಳು ಕಾವ್ಯರಚನೆಯಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದ್ದರು. ಇದೇ ಕಾಲದಲ್ಲಿ 'ದುಂದುಮಿ' ಎಂಬ ಹೊಸರೀತಿಯ ಜಾನಪದ ಕಾವ್ಯ ಹುಟ್ಟಿಕೊಂಡು ಪ್ರಚಾರದಲ್ಲಿ ಬಂದಿತು. ಇಂಥ ದುಂದುಮಿಗಳು ಇಂದಿಗೂ ಪ್ರಚಲಿತವಿವೆ. ಇವುಗಳೆಲ್ಲ ಹೆಚ್ಚಾಗಿ ಮಲ್ಲಸರ್ಜನ ಕಾಲದ ಕವಿಗಳಿಂದ ರಚಿತವಾದವು. ಕನ್ನಡ ಸಾಹಿತ್ಯಕ್ಕೆ ದುಂದುಮಿ ಕಿತ್ತೂರಿನ ಕೊಡುಗೆಯೆಂದು ಹೇಳಬಹುದು.

ಮಲ್ಲಸರ್ಜ ಬಹಳ ರಸಿಕ. ಒಳ್ಳೇ ಜೀವನವೆಂದರೇನು ಎಂಬುದನ್ನು ಆತನು ಅರಿತಿದ್ದನು. ಸುಂದರವಾದ ಉಡುಪುಗಳಲ್ಲಿ ಆತನಿಗೆ ಆಸಕ್ತಿ. ದೇಶದ ದೂರ ದೂರದ ಭಾಗಗಳಲ್ಲಿಯ ಅಲ್ಲಲ್ಲಿಯ ವಿಶಿಷ್ಟ ರೀತಿಯ ವಿನ್ಯಾಸದ ಬಟ್ಟೆಗಳ ಸಂಗ್ರಹ ಆತನಲ್ಲಿತ್ತು. ಆಯಾ ಪ್ರಸಂಗಗಳಲ್ಲಿ ಬೇರೆ ಬೇರೆ ತರಹದ ಸುಂದರ ಬಟ್ಟೆಗಳನ್ನು ಆತನು ತೊಡುತ್ತಿದ್ದನು. ಊಟದಲ್ಲಿಯೂ ಆತನು ರಸಿಕ. ಜನರಿಗೆ ಅತಿಥಿಗಳಿಗೆ ಕಿತ್ತೂರಿನವೇ ಆದ ಹಲವಾರು ಸಿಹಿಯಾದ ಖಾದ್ಯಗಳಿಂದ ತಣಿಸುವುದರಲ್ಲಿ ಆತನಿಗೆ ತುಂಬ ಆಸಕ್ತಿ. ಆತನಿಗೆ ಹೂವು ಹಣ್ಣುಗಳಲ್ಲಿಯೂ ಎಲ್ಲಿಲ್ಲದ ಪ್ರೀತಿ. ಬೇರೆ ಬೇರೆ ತರಹದ ಗಿಡ–ಬಳ್ಳಿಗಳನ್ನು ಬೆಳೆಸುವುದರಲ್ಲಿ ಆತನಿಗೆ ವಿಶೇಷ ಆಸಕ್ತಿ. ಆತನು ದೇವರ ಶೀಗೀಹಳ್ಳಿಯಲ್ಲಿ ಒಂದು ಸುಂದರವಾದ ಉದ್ಯಾನವನ್ನು ಬೆಳೆಸಿದ್ದನೆಂದು ತಿಳಿದುಬರುತ್ತದೆ. ಮಲ್ಲಸರ್ಜನ ಬಗ್ಗೆ ಬರೆಯಲ್ಪಟ್ಟ ಗ್ರಂಥ, ಕಾವ್ಯ ಹಾಗೂ ಹಾಡು ಮುಂತಾದವುಗಳಲ್ಲಿರುವ ಉಲ್ಲೇಖಗಳಿಂದ, ಮಲ್ಲಸರ್ಜ ಸಾಹಿತ್ಯ, ಕಲೆ, ಕುಶಲ ಕೈಗಾರಿಕೆ, ತತ್ವಜ್ಞಾನ ಹಾಗೂ ಒಳ್ಳೇ ಜೀವನಕ್ಕೆ ಅವಶ್ಯವಾದ ಸುಖಸಾಧನೆಗಳಿಗೆ ಔದಾರ್ಯದಿಂದ ಆಶ್ರಯ ಕೊಡುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ. ಅವನ ಆಳ್ವಿಕೆಯಲ್ಲಿ ಜನರು ಉತ್ಸಾಹದಿಂದ ನಾಟಕ, ಬೈಲಾಟ, ನೃತ್ಯ, ಸಾಮೂಹಿಕ ಕುಣಿತ ಇತ್ಯಾದಿ ಸಾಂಸ್ಕೃತಿಕ ಕಲಾತ್ಮಕವಾದ ಜೀವನವನ್ನು ಬದುಕಿ ಜನರು ಸುಖಿಗಳಾಗಿದ್ದರು.

ಮಲ್ಲಸರ್ಜನು ಬಹಳ ಧಾರ್ಮಿಕ ಪ್ರವೃತ್ತಿಯವನೂ, ನೀತಿವಂತನೂ ಆಗಿದ್ದನು. ಆತನು ಎಲ್ಲ ಧಾರ್ಮಿಕ ಸಂಸ್ಥೆಗಳಿಗೆ, ಮಠ, ಮಂದಿರ, ಮಸೀದಿಗಳಿಗೆ ಉದಾರವಾಗಿ ಸಹಾಯ ಮಾಡುತ್ತಿದ್ದನು. ಅವನ ಕಾಲದಲ್ಲಿ ಕಿತ್ತೂರ ಸಂಸ್ಥಾನದಲ್ಲಿ 1,000 ಮಠಗಳಿದ್ದವೆಂದು ತಿಳಿದುಬರುತ್ತದೆ. ವೀರಶೈವ ಮಠಗಳಿಗೆ ಕಿತ್ತೂರಿನ ಕಲ್ಲುಮಠವು ಕೇಂದ್ರಸ್ಥಳವಾಗಿತ್ತು. ಅದು "ಸಾವಿರ ಸಂಸ್ಥಾನಮಠ"ವೆಂದು ಪ್ರಸಿದ್ಧವಾಗಿತ್ತು. ಅನೇಕ ತಲೆಮಾರುಗಳಿಂದ ಕಲ್ಲುಮಠ ಸ್ವಾಮಿಗಳು, ಕಿತ್ತೂರಿನ ರಾಜಮನೆತನಕ್ಕೆ ಗುರುಗಳಾಗಿದ್ದರು.

ಕಲ್ಲುಮಠದ ಸ್ವಾಮಿಗಳು ದೊಡ್ಡ ವಿದ್ವಾಂಸರಾಗಿದ್ದರು. ಅವರ ಆಳವಾದ ಅಧ್ಯಯನ, ವಿದ್ವತ್ತು, ಮಹೋನ್ನತವಾದ ನೈತಿಕ ಜೀವನ ಹಾಗೂ ಇವೆಲ್ಲಕ್ಕೂ ಮಿಗಿಲಾಗಿ ರಾಜ್ಯದ

ಜನತೆಯ ಸಮಸ್ಯೆಗಳನ್ನು ಬಿಡಿಸುವಲ್ಲಿ ಅವರು ತಳೆಯುತ್ತಿದ್ದ ಉದಾತ್ತವಾದ ತಾತ್ವಿಕ ನಿಲುಮೆ ಮತ್ತು ವೈಚಾರಿಕ ಧೋರಣೆ ಇವುಗಳಿಂದಾಗಿ ಅವರಿಗೆ ಮಲ್ಲಸರ್ಜನ ದರ್ಬಾರಿನಲ್ಲಿ ಅತ್ಯಂತ ಗೌರವದ ಸ್ಥಾನವಿತ್ತು. ಅವರ ಮಾತಿಗೆ ಅಲ್ಲಿ ಅಪಾರವಾದ ಮನ್ನಣೆಯಿತ್ತು. ಕಲ್ಲುಮಠದ ಸ್ವಾಮಿಗಳು ಯಾವಾಗಲೂ ಕಿತ್ತೂರಿನ ಅರಸರಿಗೆ ಬಹಳ ನಂಬಿಕೆಯ ಹಾಗೂ ಗೌರವವನ್ನು ಹೊಂದಿದ ರಾಜಗುರುಗಳಾಗಿದ್ದರು. ಅನೇಕ ಸಲ ರಾಜಕೀಯ ಸಂದಿಗ್ಧ ಸಮಸ್ಯೆಗಳನ್ನು ಚರ್ಚಿಸುವಾಗ, ಶ್ರೀ ಸ್ವಾಮಿಗಳೇ ಅಧ್ಯಕ್ಷತೆ ವಹಿಸುತ್ತಿದ್ದರು. ಸಂಸ್ಥಾನವು ದುಸ್ತರವಾದ ಪರಿಸ್ಥಿತಿಯನ್ನು ಎದುರಿಸುತ್ತಿರುವಾಗಲೆಲ್ಲ, ಕಿತ್ತೂರಿನ ದೊರೆಗಳು ಸಲಹೆಗಾಗಿ ಕಲ್ಲುಮಠದ ಸ್ವಾಮಿಗಳೆಡೆಗೆ ಧಾವಿಸುತ್ತಿದ್ದರು. ಯುದ್ಧಕಾಲವೇ ಆಗಿರಲಿ, ಶಾಂತಿ ಸಮಯವೇ ಆಗಿರಲಿ, ಕಲ್ಲುಮಠದ ಸ್ವಾಮಿಗಳು ಕಿತ್ತೂರಿನ ರಾಜ್ಯಭಾರದಲ್ಲಿ ಮಹತ್ತರವಾದ ಪಾತ್ರ ವಹಿಸುತ್ತಿದ್ದರು. ಅವರು ಸದಾ ಧಾರ್ಮಿಕ ಕಾರ್ಯಗಳಲ್ಲಿ, ತತ್ವಜಿಜ್ಞಾಸೆಯಲ್ಲಿ ಕಾಲಕಳೆಯುತ್ತಿದ್ದರೂ, ರಾಜ್ಯಶಾಸ್ತ್ರದಲ್ಲಿಯೂ ಪಾರಂಗತರಾಗಿರುತ್ತಿದ್ದರು. ರಾಜ್ಯಭಾರದ ಕ್ಲಿಷ್ಟ ಸಮಸ್ಯೆಗಳ ಪರಿಹಾರದಲ್ಲಿ ಕೂಡ ಅವರ ಸಲಹೆಗಳು ಅತ್ಯಂತ ಮಹತ್ವಪೂರ್ಣವಾಗಿರುತ್ತಿದ್ದವು. ಕಿತ್ತೂರ ಆಳರಸರು ಹಾಗೂ ಅವರ ಮನೆತನದವರು ಧರ್ಮಭೀರುಗಳೂ, ನೀತಿವಂತರೂ ಆಗಿ ಒಳ್ಳೇ ನೈತಿಕ ಜೀವನವನ್ನು ನಡೆಸುವಂತೆ ಅವರು ನೋಡಿಕೊಳ್ಳುತ್ತಿದ್ದರು. ಅರಸರು ಹಾಗೂ ಅರಸುಮನೆತನದವರು ದುಷ್ಟರೂಢಿಗಳಿಗೆ ತುತ್ತಾಗದಂತೆ ಅವರು ನೋಡಿಕೊಳ್ಳುತ್ತಿದ್ದರು. ಅರಸುಮನೆತನದವರಿಗೆಲ್ಲ ಸ್ವಾಮಿಗಳು ಅತ್ಯಂತ ಗೌರವಾನ್ವಿತರಾಗಿ ಇರುತ್ತಿದ್ದರು. ಸ್ವಾಮಿಗಳೂ ಅವರ ಬಗ್ಗೆ ಬಹಳ ವಾತ್ಸಲ್ಯ, ವಿಶ್ವಾಸಗಳನ್ನು ಹೊಂದಿರುತ್ತಿದ್ದರು. ಈ ಮಾತಿಗೆ ನಿದರ್ಶನವೆಂಬಂತೆ ಕಿತ್ತೂರಿನ ಅನೇಕ ದೊರೆಗಳ ಸಮಾಧಿಗಳು ಕಲ್ಲುಮಠದ ಪ್ರಾಂಗಣದಲ್ಲಿ ನಿರ್ಮಿತವಾಗಿದ್ದು, ಅವುಗಳನ್ನು ಬಹಳ ವ್ಯವಸ್ಥಿತವಾಗಿ ರಕ್ಷಿಸಿ ಇಡಲಾಗಿದೆ. ಕಿತ್ತೂರಿನ ಅರಸುಮನೆತನದ ಬಗ್ಗೆ ಗೌರವವಿದ್ದ ಹಾಗೂ ಕಿತ್ತೂರಿನ ಇತಿಹಾಸದ ಬಗ್ಗೆ ಆಸಕ್ತಿಯಿದ್ದ ಜನರಿಗೆ ಕಿತ್ತೂರಿನ ಕಲ್ಲು ಮಠವು ಇಂದಿಗೂ ಒಂದು ಪವಿತ್ರ ಯಾತ್ರಾಸ್ಥಳವಾಗಿದೆ. ಕಿತ್ತೂರಿನ ಕಲ್ಲುಮಠದ ಮಹತ್ವ ಹಾಗೂ ಪ್ರಭಾವ ಇಂದಿನವರೆಗೂ ಅವ್ಯಾಹತವಾಗಿ ಉಳಿದುಕೊಂಡು ಬಂದಿದೆ.

ಕಿತ್ತೂರಿನ ಹೊರಭಾಗದಲ್ಲಿ ಚೌಕೀಮಠವೆಂಬ ಮಠವಿದೆ. ಇದು ಕಿತ್ತೂರಿನ ಕಲ್ಲುಮಠದ ಶಾಖಾಮಠವಾಗಿದೆ. ಈ ಚೌಕೀಮಠದ ಒಳಭಾಗದಲ್ಲಿ ವಿಶಾಲವಾದ ದೊಡ್ಡ ಸಭಾಗೃಹಗಳಿವೆ. ಅವುಗಳ ಬಾಗಿಲುಗಳನ್ನು ಮುಚ್ಚಿ ಅಲ್ಲಿ ಗುಪ್ತ ಸಭೆಗಳನ್ನು ನಡೆಸಲು ಅನುಕೂಲತೆಗಳಿವೆ. ರಾಜ್ಯಕ್ಕೆ ಯಾವುದೇ ದುರ್ಧರ ಪ್ರಸಂಗ ಎದುರಾದಾಗ ಇಲ್ಲಿ ಅನೇಕಸಲ ಕಿತ್ತೂರಿನ ಅರಸರು ಕಲ್ಲುಮಠದ ಸ್ವಾಮಿಗಳೊಂದಿಗೆ ಗುಪ್ತಸಭೆಗಳನ್ನೂ ನಡೆಸುತ್ತಿದ್ದರು. ಯುದ್ಧ ಸಮಯದಲ್ಲಿ ಅನುಸರಿಸಬೇಕಾದ ಗುಪ್ತ ನಿರ್ಣಯಗಳನ್ನು ಇಲ್ಲಿಯೇ ತೆಗೆದುಕೊಳ್ಳಲಾಗುತ್ತಿತ್ತು. ರಾಜಕೀಯ ಕ್ಲಿಷ್ಟ ಸಮಸ್ಯೆಗಳ ಚರ್ಚೆಗಳು ಕೂಡ ಇಲ್ಲಿಯೇ ನಡೆಯುತ್ತಿದ್ದವು.

ಕಿತ್ತೂರ ಸಂಸ್ಥಾನದ ಪಟ್ಟಕ್ಕೇರಿದಾಗ ಮಲ್ಲಸರ್ಜ ಕೇವಲ 17 ವರ್ಷದ ಯುವಕ. ಏರುಜೌವನದ ಹುರುಪು ಹುಮ್ಮಸುಗಳಿಂದ ಆತ ಉತ್ಸಾಹಭರಿತನಾಗಿದ್ದ. ಸ್ಫುರದ್ರೂಪಿಯಾಗಿದ್ದ ಆತನ ವ್ಯಕ್ತಿತ್ವ ಅತ್ಯಂತ ಆಕರ್ಷಕವಾಗಿತ್ತು. ಆತ ಶೂರ ಯೋಧ. ಕುದುರೆ ಹತ್ತುವುದರಲ್ಲಿ, ಕತ್ತಿ ವರಸೆಯಲ್ಲಿ, ಬಾಣ ಪ್ರಯೋಗದಲ್ಲಿ, ಒಟ್ಟಾರೆ ಯುದ್ಧಕಲೆಗಳಲ್ಲಿ ಆತ ಚತುರ.

ಆತ ಕಿತ್ತೂರಿನ ಪಟ್ಟಕ್ಕೆ ಬಂದ ಕೆಲವೇ ದಿನಗಳಲ್ಲಿ ಎರಡು ಪ್ರಬಲ ಶಕ್ತಿಗಳ ವಿರುದ್ಧ ಹೋರಾಡುವ ಪ್ರಸಂಗ ಬಂದಿತು. ಆ ಪ್ರಬಲಶಕ್ತಿಗಳೆಂದರೆ ಮುಸಲ್ಮಾನ ರಾಜನಾದ ಮೈಸೂರಿನ ಟಿಪ್ಪು ಸುಲ್ತಾನ್ ಹಾಗೂ ಉತ್ತರದ ಪೇಶ್ವೆಯರು. ಇದೇ ಕಾಲಕ್ಕೆ ಬ್ರಿಟಿಷರು ಭಾರತದ ನೈಋತ್ಯ ಭಾಗದಲ್ಲಿ ತಮ್ಮ ಹಿಡಿತವನ್ನು ವಿಸ್ತರಿಸಲು ಯತ್ನಿಸುತ್ತಿದ್ದರು. ಟಿಪ್ಪು ಸುಲ್ತಾನ್ ಹಾಗೂ ಪೇಶ್ವೆಯರ ನಡುವೆ ಒಂದೇ ಸಮನೆ ಜಗ್ಗಾಟ ನಡದೇ ಇದ್ದಿತು. ಇದರಿಂದಾಗಿ ಮಲ್ಲಸರ್ಜ ಹಲವಾರು ಸಾರೆ ಪೇಶ್ವೆಯರ ಅಥವಾ ಅವರ ಮಾಂಡಲೀಕರೊಂದಿಗೆ, ಇಲ್ಲವೆ ಟಿಪ್ಪು ಅಥವಾ ಅವನ ಸರದಾರರೊಡನೆ ಯುದ್ಧ ಮಾಡುವ ಪ್ರಸಂಗಗಳು ಒದಗಿದವು. ಟಿಪ್ಪುಗಾಗಲಿ, ಪೇಶ್ವೆಯರಿಗಾಗಲಿ, ಕಿತ್ತೂರಿನ ಜನತೆಯ ಅಥವಾ ಅದರ ಯೋಗಕ್ಷೇಮದ ಬಗ್ಗೆ ಆಸಕ್ತಿ ಇರಲಿಲ್ಲ. ಒಳ್ಳೇ ಸಮೃದ್ಧವಾದ ಈ ಸಂಸ್ಥಾನದಿಂದ ಸಿಕ್ಕಿದ್ದನ್ನು ದೋಚಿಕೊಂಡು ಹೋಗುವುದರಲ್ಲಿ ಮಾತ್ರ ಅವರಿಗೆ ಆಸಕ್ತಿ. ಹೀಗಾಗಿ ಕಿತ್ತೂರಿನ ಆಳರಸರು ಹಲವುಸಲ ತಮ್ಮ ಸಂಸ್ಥಾನದ ಅಸ್ತಿತ್ವವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಬ್ರಿಟಿಷರ ಸಹಾಯ ಪಡೆಯಬೇಕಾದಂಥ ಸಂದರ್ಭಗಳು ಬಂದವು. ದೊಡ್ಡ ದೊಡ್ಡ ರಾಜ್ಯಗಳು ಕಿತ್ತೂರಿನ ಮೇಲೆ ಕಣ್ಣಿಟ್ಟಿದ್ದವು. ಅವರು ತಮಗೆ ಬೇಕಾದಾಗ ಕಿತ್ತೂರಿನ ಮೇಲೆ ದಾಳಿಮಾಡಿ, ಅಲ್ಲಿಯ ಸಂಪತ್ತನ್ನು ಸುಲಿದು ತಮ್ಮ ರಾಜ್ಯದ ಬೊಕ್ಕಸ ತುಂಬಿಕೊಳ್ಳಬಹುದೆಂದು ಭಾವಿಸಿದ್ದರು. ಈ ಸಂಸ್ಥಾನದ ಉತ್ಕರ್ಷ, ಸಮೃದ್ಧಿಗಳು ಅದಕ್ಕೆ ಮಾರಕವಾಗಿ ಪರಿಣಮಿಸಿದವು. ಇಂಥ ಸಂದಿಗ್ಧ ಪರಿಸ್ಥಿತಿಯ ಕಾಲದಲ್ಲಿ ಮಲ್ಲಸರ್ಜ ಕಿತ್ತೂರಿನ ಪಟ್ಟಕ್ಕೆ ಬಂದು ಅದರ ರಾಜ್ಯಭಾರವನ್ನು ವಹಿಸಿಕೊಂಡನು.

ಈತನು ಪಟ್ಟಕ್ಕೇರಿದ ಮೂರು ವರ್ಷಗಳ ಅವಧಿಯಲ್ಲಿಯೇ ಕಿತ್ತೂರ ಸಂಸ್ಥಾನದ ಉತ್ತರ ಭಾಗದಲ್ಲಿದ್ದ ದೇಸನೂರ ಕೋಟೆಯನ್ನು ಟಿಪ್ಪು ತನ್ನ ಸರದಾರ ಬದ್ರುಲ್ ಜಮಾನ್ ಖಾನನ ಮುಖಾಂತರ ವಶಪಡಿಸಿಕೊಳ್ಳಲು ಯತ್ನಿಸಿದನು. ಮಲ್ಲಸರ್ಜ ಹಾಗೂ ಅವನ ಸೈನಿಕರು ಆತನನ್ನು ಎದುರಿಸಿ ಹಿಂದೋಡಿಸಿದರು. ಮಲ್ಲಸರ್ಜನ ಮೊದಲನೆಯ ಹೆಂಡತಿ ರಾಣಿ ರುದ್ರಮ್ಮ ಈ ಯುದ್ಧದಲ್ಲಿ ಸ್ವತಃ ಭಾಗವಹಿಸಿದ್ದಳೆಂದು ಪ್ರತೀತಿಯಿದೆ. ಕೆಲವೇ ತಿಂಗಳ ನಂತರ ಟಿಪ್ಪು ಸುಲ್ತಾನ್ ಬದ್ರುಲ್ ಜಮಾನ್ ಖಾನನೊಡನೆ ಮತ್ತೊಮ್ಮೆ ದೇಸನೂರ ಮೇಲೆ ದಾಳಿ ಮಾಡಿದನು. ಟಿಪ್ಪುವಿನ ಬಹಳ ದೊಡ್ಡ ಹಾಗೂ ಚೆನ್ನಾಗಿ ತರಬೇತಿ ಹೊಂದಿದ ಸೈನ್ಯವನ್ನು ಎದುರಿಸುವುದು ಈ ಸಣ್ಣ ಸಂಸ್ಥಾನದ ಸೈನ್ಯಕ್ಕೆ ಸಾಧ್ಯವಾಗಲಿಲ್ಲ. ಮಲ್ಲಸರ್ಜನು ಈ ಯುದ್ಧದಲ್ಲಿ ಸೋತನು. ಅವನನ್ನು ಕೈದಿಯನ್ನಾಗಿ ಒಯ್ದು ಪೆರಿಯಾಪಟ್ಟಣದ ಹತ್ತಿರದ

ಕಪಾಳದುರ್ಗದ ಕೋಟೆಯಲ್ಲಿ ಮೂರು ವರ್ಷಗಳ ಕಾಲ ಇಡಲಾಯಿತು. ಆಗ ಅವನಿಗೆ ಇಪ್ಪತ್ತು ವರ್ಷ ವಯಸ್ಸು. ಕಪಾಳದುರ್ಗದ ದುರ್ಗಮ ಕೋಟೆಯಿಂದ ಮಲ್ಲಸರ್ಜ ಬಹಳ ಚಾಣಾಕ್ಷತನದಿಂದ ತಪ್ಪಿಸಿಕೊಂಡು ಕೊಯಿಮುತ್ತೂರಿನ ಹತ್ತರ ಬ್ರಿಟಿಷರ ಅಧೀನದಲ್ಲಿದ್ದ ನಾಡಿನಲ್ಲಿ ಹಾಯ್ದು, ಆಗ ಮೊಗಲರ ಅಧೀನದಲ್ಲಿದ್ದ ವಿಜಾಪುರ ಸೀಮೆಗೆ ಬಂದನು. ಅಲ್ಲಿಂದ ವೇಷಾಂತರಗೊಂಡು ಅನೇಕ ಕಷ್ಟಗಳನ್ನು ಅನುಭವಿಸುತ್ತ ಕಾಲ್ನಡಿಗೆಯಲ್ಲಿ ಬಬಲೇಶ್ವರವನ್ನು ತಲುಪಿದನು. ಅಲ್ಲಿ ಆತನ ಹೆಂಡತಿ ರುದ್ರಮ್ಮನ ಹತ್ತಿರದ ಬಂಧುಗಳಿದ್ದರು. ಅವರು ಆತನಿಗೆ ಆತಿಥ್ಯ ಒದಗಿಸಿದರು. ಅಲ್ಲಿ ಅವನು ತಾನು ಕಿತ್ತೂರು ಬಿಟ್ಟನಂತರ ಅಲ್ಲಿ ನಡೆದ ವಿದ್ಯಮಾನಗಳ ಬಗ್ಗೆ ತಿಳಿದುಕೊಂಡನು. ಆತನು ಬಬಲೇಶ್ವರಕ್ಕೆ ಬಂದ ವಿಷಯ ತಿಳಿದಕೂಡಲೇ ಕಿತ್ತೂರಿನ ಜನರು ಬಬಲೇಶ್ವರಕ್ಕೆ ಬಂದು, ಆತನನ್ನು ಕಿತ್ತೂರಿಗೆ ಕರೆದೊಯ್ದರು. ಆತನ ಮರಳುವಿಕೆಯ ದ್ಯೋತಕವಾಗಿ ಅವರು ದೊಡ್ಡ ಸಮಾರಂಭವನ್ನೇ ಏರ್ಪಡಿಸಿದರು. ಮೂರು ವರ್ಷಗಳ ನಂತರ ಮತ್ತೆ ಮಲ್ಲಸರ್ಜ ಕಿತ್ತೂರಿನ ರಾಜ್ಯಭಾರವನ್ನು ವಹಿಸಿಕೊಂಡನು.

1787 ರಲ್ಲಿ ಟಿಪ್ಪು ಸುಲ್ತಾನ್ ಕಿತ್ತೂರನ್ನು ಮರಾಠರಿಗೆ ಬಿಟ್ಟುಕೊಡುವ ಪ್ರಸಂಗ ಬಂದಿತು. ಬ್ರಿಟಿಷರು ಮಧ್ಯ ಕೈಹಾಕಿ ತನ್ನನ್ನು ಚೆನ್ನಾಗಿ ದಂಡಿಸಬಹುದೆಂಬ ಹೆದರಿಕೆ ಟಿಪ್ಪುವಿಗೆ ಇತ್ತು. ಬ್ರಿಟಿಷರು ಅಷ್ಟರಲ್ಲಿ ಬಹಳ ಬಲಶಾಲಿಗಳಾಗಿದ್ದರು. ಕಿತ್ತೂರು ಮತ್ತೆ ಪೇಶ್ವೆಯರ ಅಧೀನದಲ್ಲಿ ಬಂದಿತು. ಅವರು ಕಿತ್ತೂರನ್ನೊಳಗೊಂಡ ದಕ್ಷಿಣ ಭಾಗಕ್ಕೆ ಪರಶುರಾಮ ಭಾವುನನ್ನು ಅಧೀನ ದಂಡನಾಯಕನನ್ನಾಗಿ ನೇಮಿಸಿದರು. ಭಾವು ಕಿತ್ತೂರನ್ನು ಧಾರವಾಡ ಭಾಗದಲ್ಲಿ ಸೇರಿಸಿ, ಧಾರವಾಡದಲ್ಲಿ ಮಾಮಲೇದಾರನನ್ನು ನೇಮಿಸಿ, ಕಿತ್ತೂರು ಸಂಸ್ಥಾನದ ಆಡಳಿತವನ್ನು ಆತನಿಗೆ ಒಪ್ಪಿಸಿದನು. ಸ್ವಲ್ಪದಿನಗಳ ನಂತರ ಕೊಲ್ಲಾಪುರ ರಾಜನ ಕೂಡ ಮಾಡಿದ 1788ರ ಪಟ್ಟಣಕೋಡಿ ಯುದ್ಧದಲ್ಲಿ ಪರಶುರಾಮ ಭಾವು ತೀರಿಕೊಂಡನು. ಅದಾದ ನಂತರ ಕಿತ್ತೂರು ಆಡಳಿತದಲ್ಲಿ ಮತ್ತೆ ಪೂರ್ಣ ಸ್ವಾತಂತ್ರ್ಯವನ್ನು ಪಡೆಯಿತು. ಕಿತ್ತೂರಿನ ಮೇಲಿನ ಅಧಿಕಾರ ಪೇಶ್ವೆಯರಿಗೆ ಮಾತ್ರ ಸಲ್ಲುವಂತಾಯಿತು. ಕಿತ್ತೂರ ಆಳರಸರು ಪೇಶ್ವೆಯರಿಗೆ ವರ್ಷಕ್ಕೆ 70,000 ರೂಪಾಯಿಗಳ ವರ್ಷಾಶನ ಸಲ್ಲಿಸಿದರೆ ತೀರಿತು. ಆಗಿನ ಕಾಲದಲ್ಲಿ ಮಲ್ಲಸರ್ಜನ ಅಧೀನದಲ್ಲಿ 1,000 ಅಶ್ವದಳ, 4,000 ಪದಾತಿ ದಳವೂ ಇತ್ತು. ಸಂಸ್ಥಾನದ ವಾರ್ಷಿಕ ಆದಾಯ ಸುಮಾರು 5 ಲಕ್ಷವಾಗಿತ್ತು.

1792ರಲ್ಲಿ, ಶ್ರೀರಂಗಪಟ್ಟಣದ ಒಪ್ಪಂದದ ಪ್ರಕಾರ, ತುಂಗಭದ್ರಾ ನದಿಯ ಉತ್ತರಕ್ಕಿದ್ದ ಪ್ರದೇಶವನ್ನೆಲ್ಲಾ ಪೇಶ್ವೆಯರಿಗೆ ಬಿಟ್ಟುಕೊಡಲಾಯಿತು. ಕಿತ್ತೂರು ಪೇಶ್ವೆಯರ ಅಧೀನದಲ್ಲಿದ್ದರೂ ಸಹ, ದಕ್ಷಿಣಭಾಗದಲ್ಲಿ ಪ್ರಬಲರಾದ ಹಲವು ಮರಾಠಾ ದರೋಡೆಕೋರರಿದ್ದರು. ಅವರು ಪೇಶ್ವೆಯರನ್ನು ಕಡೆಗಣಿಸಿ ಅನೇಕ ಸಣ್ಣ ರಾಜ್ಯಗಳನ್ನು ಸುಲಿಯುತ್ತಿದ್ದರು. ದಕ್ಷಿಣ ಭಾಗದಲ್ಲಿ ಪ್ರಬಲರಾದ ಇಂಥ ದರೋಡೆಕೋರರಲ್ಲಿ ಧೊಂಡು ವಾಘ ಪ್ರಮುಖನು. ಈತ ಕಿತ್ತೂರಿನ ಸಂಪತ್ತನ್ನು ದೋಚಲು ಹವಣಿಸುತ್ತಿದ್ದ. ಆದಕಾರಣ ಮಲ್ಲಸರ್ಜ ಬ್ರಿಟಿಷರ

ಸಹಾಯ ಪಡೆಯಬೇಕಾಯಿತು. ಆತನು ಜನರಲ್ ವೆಲ್ಲಸ್ಲಿಯೊಂದಿಗೆ ಒಪ್ಪಂದ ಮಾಡಿಕೊಂಡು ಅವನ ಸಹಾಯದಿಂದ ಧೋಂಡು ವಾಘನನ್ನು ಓಡಿಸಿದನು. 1802 ರಲ್ಲಿ ಬಾಜಿರಾಯನನ್ನು ಪಟ್ಟಕ್ಕೆ ಕೂಡಿಸಲು ವೆಲ್ಲೆಸ್ಲಿಯು ಶ್ರೀರಂಗಪಟ್ಟಣದಿಂದ ಪುಣೆಗೆ ಹೊರಟಿದ್ದ. ಬ್ರಿಟಿಷರಿಗೆ ಸಹಾಯ ಮಾಡಲು ಮಲ್ಲಸರ್ಜ ಮತ್ತು ಉಳಿದ ದೇಸಾಯರು ಹಣ ಮತ್ತು ಸೈನ್ಯದ ನೆರವು ನೀಡಿದರು. ಮಲ್ಲಸರ್ಜ ನೀಡಿದ ನೆರವು ಮತ್ತು ತೋರಿಸಿದ ಸಹಾನುಭೂತಿಗೆ ಪ್ರತಿಫಲವಾಗಿ, ಮಲ್ಲಸರ್ಜನಿಗೆ ತನ್ನ ದೇಸಗತಿಯನ್ನು ಇಟ್ಟುಕೊಳ್ಳಲು ಬ್ರಿಟಿಷರು ಅನುಮತಿಯನ್ನಿತ್ತರು. 1781ರಲ್ಲಿ ಟಿಪ್ಪುವನ್ನು ಎದುರಿಸಲು ಮಲ್ಲಸರ್ಜನು ಪೇಶ್ವೆಯರಿಗೆ ಸಹಾಯ ಮಾಡಿದನು. ಅದರ ಪ್ರತಿಫಲವಾಗಿ 1809 ರಲ್ಲಿ ಮಲ್ಲಸರ್ಜ ಪೇಶ್ವೆಯರೊಂದಿಗೆ ಒಪ್ಪಂದ ಮಾಡಿಕೊಳ್ಳಲು ಸಾಧ್ಯವಾಯಿತು. ಈ ಒಪ್ಪಂದದನ್ವಯ ಕಿತ್ತೂರ ಅರಸರು 1,75,000 ರೂಪಾಯಿಯ ವರ್ಷಾಶನ ಕೊಡಬೇಕು. ಕಿತ್ತೂರ ರಾಜರು ತಮ್ಮ ರಾಜ್ಯದ ಆಂತರಿಕ ಆಡಳಿತದ ಪೂರ್ಣ ಅಧಿಕಾರ ಹೊಂದಿರಬೇಕು. ತಮ್ಮ ಸೈನ್ಯವನ್ನು ಇಟ್ಟುಕೊಳ್ಳುವ ಅಧಿಕಾರವನ್ನು ಅವರು ಪಡೆದಿರಬೇಕು. ಈ ಒಪ್ಪಂದದ ಮೇಲೆ ಕಿತ್ತೂರಿನ ಪೂರ್ಣ ಆಡಳಿತಾಧಿಕಾರ ಮಲ್ಲಸರ್ಜನಿಗೆ ದೊರೆಯಿತು. ಕಪಾಳದುರ್ಗದ ಕೋಟೆಯಿಂದ ತಪ್ಪಿಸಿಕೊಂಡು ಬರುವಾಗ ಅವನು ತೋರಿಸಿದ ಜಾಣ್ಮೆ, ಧೈರ್ಯ, ಸಾಹಸಗಳ ಗುರುತಿಗಾಗಿ ಮತ್ತು ಟಿಪ್ಪು ಸುಲ್ತಾನನೊಡನೆ ಯುದ್ಧ ಮಾಡುವಾಗ ತೋರಿಸಿದ ಶೌರ್ಯಕ್ಕಾಗಿ ಮಲ್ಲಸರ್ಜನಿಗೆ 'ಪ್ರತಾಪರಾವ' ಎಂಬ ಬಿರುದನ್ನು ಕೊಡಲಾಯಿತು. ಈ ಬಿರುದಿನ ಸ್ಮಾರಕವಾಗಿ ಮಲ್ಲಸರ್ಜ ನಂದಗಡದಲ್ಲಿ ಕೋಟೆಯೊಂದನ್ನು ಕಟ್ಟಿಸಿ, ಅದಕ್ಕೆ 'ಪ್ರತಾಪಗಡ'ವೆಂದು ಹೆಸರಿಟ್ಟನು.

ಕಿತ್ತೂರಿನ ಆಳರಸರು ಕಿತ್ತೂರಿನ ಸ್ವಾತಂತ್ರ್ಯ ಹಾಗೂ ಅದರ ಆಂತರಿಕ ಆಡಳಿತದ ಪೂರ್ಣ ಅಧಿಕಾರವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಮಾಡಿದ ಪ್ರಯತ್ನಗಳು ಗಮನಾರ್ಹವಾಗಿವೆ. ಪೇಶ್ವೆಯರು, ಪಟವರ್ಧನರು ಕಿತ್ತೂರಿನ ಸ್ವಾತಂತ್ರ್ಯಹರಣಮಾಡಿ ಅವರನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳಲು ಸಕಲ ಪ್ರಯತ್ನ ಮಾಡುತ್ತಲೇ ಇದ್ದರು. ಆದರೆ ಅವರು ಯಶಸ್ವಿಯಾಗಲಿಲ್ಲ. 1809 ರಲ್ಲಿ ಬರೆಯಲಾದ ಮರಾಠಿ ದಾಖಲೆಯೊಂದರಲ್ಲಿ ಕಾಣಿಸಿದ ವಿಷಯ, ಕಿತ್ತೂರಿನ ಅರಸರ ಕ್ಷಾತ್ರತೇಜ ಹಾಗೂ ಕಿತ್ತೂರ ಜನತೆಯ ಗುಣವಿಶೇಷಗಳ ಬಗ್ಗೆ ಬೆಳಕು ಚೆಲ್ಲುತ್ತದೆ.

"ಕಿತ್ತೂರಿನ ದೇಸಾಯಿಯು ಕರ್ನಾಟಕದಲ್ಲಿ ಪ್ರಬಲ ಕ್ರಾಂತಿಕಾರಿಯಾಗಿದ್ದನು. ಪೇಶ್ವೆಯರು ಸತತವಾಗಿ 40 ವರ್ಷಗಳವರೆಗೆ ಕಿತ್ತೂರನ್ನು ಮೆಟ್ಟಿ, ತಮ್ಮ ಅಧೀನಕ್ಕೆ ತೆಗೆದುಕೊಳ್ಳಲು ಯತ್ನಿಸಿದರೂ ಯಶಸ್ವಿಯಾಗಲಿಲ್ಲ".

ಬ್ರಿಟಿಷರ ಹಾಗೂ ಪೇಶ್ವೆಯರ ನಡುವೆ ಅಧಿಕಾರಕ್ಕೆ ಸೆಣಸಾಟ ಒಂದೇ ಸಮನೆ ನಡದೇ ಇತ್ತು. ಈ ಕಾಲದಲ್ಲಿ ಕಿತ್ತೂರಿಗೆ ಮಾತ್ರ ಆಂತರಿಕ ವಿಷಯಗಳಲ್ಲಿ ಪೂರ್ಣ ಸ್ವಾತಂತ್ರ್ಯವಿದ್ದಿತು. ಜನಹಿತಕ್ಕಾಗಿ ಅಹರ್ನಿಶ ಚಿಂತಿಸುತ್ತಿದ್ದ ಮಲ್ಲಸರ್ಜನ ಚತುರ ಆಡಳಿತದಿಂದಾಗಿ ಕಿತ್ತೂರು

ಸರ್ವತೋಮುಖ ಉತ್ಕರ್ಷೆ ಹೊಂದಿದ್ದಿತು. ಜನರು ಸುಖಿಗಳಾಗಿದ್ದರು. 1821 ರವರೆಗೆ ಕಿತ್ತೂರಿನಲ್ಲಿ ಎಲ್ಲವೂ ಸರಳ ಹಾಗೂ ಸುಖರೂಪವಾಗಿ ಸಾಗಿದ್ದವು. ಈ ಸಮಯಕ್ಕೆ, ಪೇಶ್ವೆ ಬಾಜೀರಾಯ ಕಿತ್ತೂರಿನ ಬಗೆಗೆ ಅಸೂಯೆಪಡತೊಡಗಿದನು. ಕಿತ್ತೂರಿನ ಸಂಪತ್ತು, ಉತ್ಕರ್ಷೆಗಳ ಬಗೆಗೆ ಎಲ್ಲರ ಬಾಯಿಯಿಂದ ಆತನು ಕೇಳುತ್ತಿದ್ದನು. ಮಲ್ಲಸರ್ಜನ ಜನಪ್ರಿಯತೆ ಬಗೆಗೆ ಅವನಲ್ಲಿ ಅಸೂಯೆ ಉಂಟಾಯಿತು. ಕಿತ್ತೂರಿನ ಬಗೆಗೆ ಆತನ ಬಾಯಿಯಲ್ಲಿ ನೀರೂರಿತು. ಸ್ವಾರ್ಥಿಗಳೂ, ಠಕ್ಕರೂ ಆದ ಹಲವು ಕಿತ್ತೂರಿನ ದ್ರೋಹಿಗಳು ಬಾಜೀರಾಯನ ಕಡೆಗೆ ಹೋಗಿ ಮಲ್ಲಸರ್ಜನ ಪ್ರಾಬಲ್ಯದ ಬಗೆಗೆ ಚಾಡಿ ಹೇಳತೊಡಗಿದರು. ಹೀಗೆಯೇ ಬಿಟ್ಟರೆ ಆತನು ಅತ್ಯಂತ ಬಲಶಾಲಿಯಾಗಿ ಬಂದು ಪೇಶ್ವೆಯರ ವಿರುದ್ಧ ಬಂಡೇಳುವುದರಲ್ಲಿ ಸಂದೇಹವಿಲ್ಲ ಎಂದು ಹೇಳಿ, ಆತನನ್ನು ರೊಚ್ಚಿಗೆಬ್ಬಿಸತೊಡಗಿದರು. ಬಾಜೀರಾಯ ಈ ಕಥೆಗಳನ್ನು ನಂಬಿದನು. ಮಲ್ಲಸರ್ಜನನ್ನು ಬಲಹೀನಗೊಳಿಸಿ ಮುಖಭಂಗ ಮಾಡಲು ಯೋಚಿಸಿದನು. ಪೇಶ್ವೆಯರ ಮನೆತನದ ದೇವರಾದ ಕಾರ್ತಿಕೇಯ ಸ್ವಾಮಿಯ ಪೂಜೆ ದರ್ಶನಕ್ಕಾಗಿ ಆತ ಸೊಂಡೂರು ಹಾಗೂ ದಕ್ಷಿಣ ಭಾಗಗಳ ಪ್ರವಾಸವನ್ನು ಕೈಕೊಂಡನು. ಅವನೊಂದಿಗೆ ಅವನ ಕೊಡ್ಡ ಮಾಂಡಲೀಕರು, ಸರದಾರರು, ಕುದುರೆ ಸವಾರರು, ಕಾಲಾಳುಗಳು ಇತ್ಯಾದಿ ದೊಡ್ಡ ಸರಂಜಾಮವೇ ಹೊರಟಿತು. ಪೇಶ್ವೆ ಹಲವಾರು ಸ್ಥಳಗಳಲ್ಲಿ ವಸತಿಮಾಡುತ್ತಿದ್ದನು. ಆ ಸ್ಥಳಗಳಲ್ಲಿ ಸುತ್ತಲಿನ ಮಾಂಡಲೀಕರು, ದೇಸಾಯರು ಬೆಲೆಬಾಳುವ ವಸ್ತು, ಒಡವೆ ಹಾಗೂ ಗೌರವಧನ ಒಪ್ಪಿಸಬೇಕಾಗುತ್ತಿತ್ತು. ಹೊಂಗಲದಲ್ಲಿ ಬಂದು ಭೆಟ್ಟಿಯಾಗಲು ಮಲ್ಲಸರ್ಜನಿಗೆ ಹೇಳಿಕಳಿಸಲಾಯಿತು. ಮಲ್ಲಸರ್ಜನು ಹೋಗಲು ನಿರಾಸಕ್ತನಾಗಿದ್ದನು. ಶೇಗುಣಸಿಯ ಅಲ್ಲಪ್ಪಗೌಡನೆಂಬ ಧೂರ್ತನು ಪೇಶ್ವೆಯ ಹಸ್ತಕನಾಗಿದ್ದನು. ಆತನು ಮಲ್ಲಸರ್ಜನನ್ನು ಮನವೊಲಿಸಿ ಪೇಶ್ವೆಯರ ಭೆಟ್ಟಿಗೆ ಕರೆತಂದನು. ಮಲ್ಲಸರ್ಜ ಹೊಂಗಲ ಮುಟ್ಟುವಷ್ಟರಲ್ಲಿ, ಉದ್ದೇಶಪೂರ್ವಕವಾಗಿಯೇ ಬಾಜೀರಾವ ಹೊಂಗಲನ್ನು ಬಿಟ್ಟು ಮುನ್ನಡೆದಿದ್ದನು. ಹೋಗುವಾಗ ಮಲ್ಲಸರ್ಜ ಬಂದೊಡನೆ ಆತನನ್ನು ಪುಣೆಗೆ ಕಳಿಸಿಕೊಡಲು ತನ್ನ ಅಧಿಕಾರಿಗಳಿಗೆ ಹೇಳಿಹೋಗಿದ್ದನು. ಪೇಶ್ವೆಯ ಆಜ್ಞೆಯ ಪ್ರಕಾರ ಮಲ್ಲಸರ್ಜ ಪುಣೆಗೆ ಹೋದೊಡನೆಯೇ ಆತನನ್ನು ಮುಧೋಳಕರವಾಡಾದಲ್ಲಿ ಬಂದಿಯನ್ನಾಗಿರಿಸಲಾಯಿತು. ವಾಡಾದ ಸುತ್ತಲೂ ಪಹರೆ ಇಡಲಾಯಿತು. ಮೂರು ವರ್ಷಗಳ ಕಾಲ ಅವನನ್ನು ಬಂಧನದಲ್ಲಿಟ್ಟು, ಚಿತ್ರಹಿಂಸೆಗೆ ಗುರಿಪಡಿಸಲಾಯಿತು. ಮಲ್ಲಸರ್ಜನ ಆರೋಗ್ಯ ಸಂಪೂರ್ಣವಾಗಿ ಹಾಳಾಯಿತು. ಆತನು ಅತ್ಯಂತ ಆತ್ಮಗೌರವದ ವ್ಯಕ್ತಿ. ಬಾಜೀರಾಯನ ಸಣ್ಣಪುಟ್ಟ ಸಹಾನುಭೂತಿ ಹಾಗೂ ಗೌರವದ ಮಾತುಗಳಿಗೆ ಆತನು ಮಾರುಹೋಗಲಿಲ್ಲ. ಬಾಜಿರಾಯನ ಸರಿಕನಂತೆ ತನ್ನನ್ನು ನಡೆಯಿಸಿಕೊಳ್ಳಬೇಕೆಂಬುದು ಆತನ ಛಲ. ತನ್ನ ಸಂಸ್ಥಾನಕ್ಕೆ ಪೂರ್ಣ ಆಂತರಿಕ ಸ್ವಾತಂತ್ರ್ಯವಿರಬೇಕೆಂಬುದು ಆತನ ಹಟ. ಬಾಜಿರಾಯ ಕಿತ್ತೂರಿನ ಸ್ವಾತಂತ್ರ್ಯ ಹರಣಮಾಡಿ ಮಲ್ಲಸರ್ಜನನ್ನು ತನ್ನ ಕೈಗೊಂಬೆಯನ್ನಾಗಿ ಮಾಡಿಕೊಳ್ಳಲು ಹವಣಿಸಿದನು. ಮಲ್ಲಸರ್ಜ ಆತನ ದರ್ಪಕ್ಕೆ ಸೊಪ್ಪು ಹಾಕಲಿಲ್ಲ.

ಸ್ವಾಭಿಮಾನಿಯಾದ ಆತನು ತನ್ನ ರಾಜ್ಯದ ಪಾರತಂತ್ರ್ಯಕ್ಕಿಂತ, ಉಪವಾಸ ಹಾಗೂ ಸಾವೇ ಲೇಸೆಂದು ಭಾವಿಸ್ಸಿದನು. ಅವನ ಆರೋಗ್ಯ ಸಂಪೂರ್ಣ ಹದಗೆಟ್ಟು, ಆತನ ಮರಣ ಸಮೀಪಿಸಿತೆಂದು ಭಯ ತೋರತೊಡಗಿತು. ಬಾಜಿರಾಯನಿಗೆ ಭೀತಿಯಾಯಿತು. ಆತನು ಬಂಧನದಲ್ಲಿ ಸತ್ತರೆ ಅದರ ಪರಿಣಾಮ ಏನಾಗಬಹುದೋ ಎಂಬ ವಿವಂಚನೆ ಆತನಲ್ಲಿ ಉಂಟಾಯಿತು. ಆದಕಾರಣ ಅವನನ್ನು ಬಿಟ್ಟುಬಿಡಲು ನಿರ್ಧರಿಸಿದನು. ಅವನನ್ನು ಬಿಡುಗಡೆ ಮಾಡಿ, ಮುಚ್ಚಿದ ರಥದಲ್ಲಿ ಕಿತ್ತೂರಿಗೆ ಕಳಿಸಲು ವ್ಯವಸ್ಥೆ ಮಾಡಿದನು. ಅವನು ಪುಣೆಯಿಂದ ಹೊರಟ ವಿಷಯವನ್ನು ಕಿತ್ತೂರಿನ ರಾಜಮನೆತನದವರಿಗೆ ತಿಳಿಸಲಾಯಿತು. ಮಲ್ಲಸರ್ಜನ ದೇಹಸ್ಥಿತಿ ಚಿಂತಾಜನಕವಾಗಿದ್ದ ವಿಷಯ ಮನೆಯವರಿಗೆ ತಿಳಿದಿತ್ತು. ಅವರು ಯೋಚನೆಗೀಡಾಗಿದ್ದರು. ರಾಜಮನೆತನದ ಸಕಲ ಪರಿವಾರ, ಸರದಾರರು, ನಂಬಿಗೆಯ ಅನುಯಾಯಿಗಳು ಎಲ್ಲರೂ ಮಲ್ಲಸರ್ಜನು ಬರುವ ದಾರಿಯಲ್ಲಿದ್ದ ದುರದುಂಡಿಯ ಅರಭಾವಿಮಠದಲ್ಲಿ ನೆರೆದರು. ಅಲ್ಲಿ ಸೊರಗಿ ಸಣ್ಣಾಗಿ ಎಲುಬಿನ ಹಂದರದಂತಿದ್ದ ರೋಗಗ್ರಸ್ಥ ಮಲ್ಲಸರ್ಜನನ್ನು ಬರಮಾಡಿಕೊಂಡು, ಸ್ವಲ್ಪ ಹೊತ್ತು ವಿಶ್ರಮಿಸಿ, ಕಿತ್ತೂರಿಗೆ ನಡೆದರು. ಕಿತ್ತೂರು ಮುಟ್ಟುವಷ್ಟರಲ್ಲಿ ಆತನಿಗೆ ಸ್ಮೃತಿ ಉಳಿದಿರಲಿಲ್ಲ. ಕಿತ್ತೂರನ್ನು ಪ್ರವೇಶಿಸಿದೊಡನೆ 34 ತೋಫುಗಳನ್ನು ಹಾರಿಸಲಾಯಿತು. ಅರೆಎಚ್ಚರವಾಗಿದ್ದ ಮಲ್ಲಸರ್ಜ ಅದು ಏನು ಎಂದು ಕೇಳಿದನು. ಮಲ್ಲಸರ್ಜ ದೊರೆಯ 34 ವರ್ಷಗಳ ಉಜ್ವಲ ಆಳ್ವಿಕೆಯ ಸಂಕೇತವಾಗಿ, ಅವನು ಮರಳಿದ ಶುಭಪ್ರಸಂಗದ ದ್ಯೋತಕವಾಗಿ 34 ತೋಫುಗಳನ್ನು ಹಾರಿಸಲಾಯಿತೆಂದು ಸರದಾರರು ಹೇಳಿದರು. ಅವನು ಏಳುವ ಸ್ಥಿತಿಯಲ್ಲಿರಲಿಲ್ಲ. 3-4 ದಿನಗಳ ನಂತರ ಇಬ್ಬರು ಹೆಂಡಿರು - ರಾಣಿ ರುದ್ರಮ್ಮ ಹಾಗು ರಾಣಿ ಚೆನ್ನಮ್ಮ - ಹಾಗೂ ಮಗ ಶಿವಲಿಂಗರುದ್ರಸರ್ಜನನ್ನು ಬಿಟ್ಟು ಆತನು ಅಸುನೀಗಿದನು. ಅಂದಿಗೆ ಮಲ್ಲಸರ್ಜನನ ಉಜ್ವಲ ಅಳ್ವಿಕೆ ಕೊನೆಗೊಂಡಿತು.ಅವನ ಹಿರಿಯ ಮಗ, ಬಾಪುಸಾಹೇಬನೆಂದು ಹೆಸರುವಾಸಿಯಾದ ಶಿವಲಿಂಗರುದ್ರ ಸರ್ಜನು ಕಿತ್ತೂರ ಸಂಸ್ಥಾನದ ಪಟ್ಟಕ್ಕೆ ಬಂದನು.

# 3. ಕಿತ್ತೂರಿನ ಅವನತಿಯ ಕಾಲ

ಮಲ್ಲಸರ್ಜನ ತರುವಾಯ ಪಟ್ಟಕ್ಕೆ ಬಂದ ಶಿವಲಿಂಗರುದ್ರ ಸರ್ಜ ತಂದೆಗೆ ತಕ್ಕ ಮಗನಾಗಿರಲಿಲ್ಲ. ಅವನ ಆರೋಗ್ಯವೂ ಸರಿಯಾಗಿರಲಿಲ್ಲ. ಅವನಿಗೆ ರಾಜಕಾರಣಕ್ಕಿಂತ ಸಾಹಿತ್ಯದಲ್ಲಿಯೇ ಹೆಚ್ಚು ಆಸಕ್ತಿಯಿದ್ದಿತು. ಕನ್ನಡದಲ್ಲಿ ಆತನು ಮೂರು ಗ್ರಂಥಗಳ ಕರ್ತೃ. ಶಿವಗುತ್ತಿ (ಇದಕ್ಕೆ ಶಮ್ ಸಾದಾಬಾದೆ ಎಂತಲೂ ಕರೆಯುತ್ತಿದ್ದರು)ದೇಸಾಯಿಯರೆಂಬ ಒಳ್ಳೇ ಮರ್ಯಾದಸ್ಥ ಮನೆತನದ ಹೆಣ್ಣುಮಗಳು ವೀರಮ್ಮ ಆತನ ಹೆಂಡತಿ. ಶಿವಲಿಂಗರುದ್ರ ಸರ್ಜ ಮೈಸೂರಿನಿಂದ ಗಾಣಿಗ ಚೆನ್ನಬಸಪ್ಪನೆಂಬ ನಯ್ಯಾಯಿಕ ಪಂಡಿತನನ್ನು ಕರೆತಂದು ಅವನ ಮಾರ್ಗದರ್ಶನದಲ್ಲಿ ತತ್ವಜ್ಞಾನವನ್ನು ಅಭ್ಯಾಸಮಾಡಿ, ಧರ್ಮ ಹಾಗೂ ತತ್ವಜ್ಞಾನಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದ್ದನೆಂದು ತಿಳಿದುಬರುತ್ತದೆ. ಆತನು ಇನ್ನೂ ಚಿಕ್ಕವಯಸ್ಸಿನವನಿದ್ದು ಅನನುಭವಿಯಾಗಿದ್ದನು. ಅವನ ಸುತ್ತಲೂ ಸ್ವಾರ್ಥಿ, ನೀಚ ಹೊಗಳುಭಟ್ಟರು ಸುತ್ತುವರಿದಿದ್ದರು. ಕಿತ್ತೂರಿನ ದರ್ಬಾರಿನಲ್ಲಿ ಗುಂಪುಗಳಾಗಿದ್ದವು. ಒಂದು ಗುಂಪಿಗೆ ಸರದಾರ ಗುರುಸಿದ್ದಪ್ಪ ಮುಖಂಡನಾಗಿದ್ದನು. ಆತನು ರಾಣಿಚೆನ್ನಮ್ಮನಿಗೆ ಅತ್ಯಂತ ನಿಷ್ಠನಾಗಿ ದುಡಿಯುತ್ತಿದ್ದನು. ಇನ್ನೊಂದು ಗುಂಪಿಗೆ ಹಾವೇರಿ ವೆಂಕಟರಾವ ಹಾಗೂ ಮಲ್ಲಪ್ಪಶೆಟ್ಟಿ ಮುಂದಾಳುಗಳು. ಅವರು ಸರದಾರರನ್ನು ದುರ್ಬಲಗೊಳಿಸಿ, ಯಾವ ದುಷ್ಕೃತ್ಯಗಳನ್ನಾದರೂ ಮಾಡಿ, ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವ ಹೊಂಚಿನಲ್ಲಿದ್ದರು. ಅವರು ಬ್ರಿಟಿಷ ಅಧಿಕಾರಿಗಳೊಂದಿಗೆ ಗುಪ್ತ ಸಂಬಂಧ ಹೊಂದಿದ್ದು, ಸಂಸ್ಥಾನದ ಬಗೆಗಿನ ಮಹತ್ವದ ಗೌಪ್ಯ ವಿಷಯಗಳನ್ನು ಅವರಿಗೆ ತಿಳಿಸುವ ಹೇಯ ಕೃತ್ಯಗಳಲ್ಲಿ ತೊಡಗಿರುತ್ತಿದ್ದರು. ಕಿತ್ತೂರಿನ ವಿಷಯ ತಿಳಿದುಕೊಳ್ಳುವ ಬ್ರಿಟಿಷರ ಆಸಕ್ತಿ ದಿನೇ ದಿನೆ ಹೆಚ್ಚುತ್ತ ನಡೆದಿತ್ತು. ಕಿತ್ತೂರನ್ನು ಏನಾದರೂ ಒಂದು ಕಾರಣ ಮುಂದುಮಾಡಿ ಕಬಳಿಸುವ ವಿಚಾರದಲ್ಲಿಯೇ ಅವರು ಮಗ್ನರಾದರು.... ಅನನುಭವಿಕನಾದ ಶಿವಲಿಂಗರುದ್ರ ಸರ್ಜನು ವೆಂಕಟರಾಯ ಹಾಗೂ ಮಲ್ಲಪ್ಪಶೆಟ್ಟಿಯ ಕುಹಕ ಜಾಲಕ್ಕೆ ತುತ್ತಾದನು. ಅವರು ಬ್ರಿಟಿಷರಿಂದ ಹಣವನ್ನು ಪಡೆಯುತ್ತ, ತಮ್ಮ ಕ್ಷುಲ್ಲಕ ಸ್ವಾರ್ಥಸಾಧನೆಗಾಗಿ ಕಿತ್ತೂರನ್ನು ಮಾರಲು ಸಿದ್ಧರಾದರು.

ಶಿವಲಿಂಗರುದ್ರ ಸರ್ಜನು 1816ರಲ್ಲಿ ಸಂಸ್ಥಾನದ ಪಟ್ಟಕ್ಕೆ ಬಂದನು. 1818ರಲ್ಲಿ ಬ್ರಿಟಿಷ ಹಾಗೂ ಬಾಜೀರಾವ ಪೇಶ್ವೆಯರ ನಡುವಿನ ಸಂಬಂಧಗಳು ಬಹಳ ತೀಕ್ಷ್ಣಮಟ್ಟವನ್ನು ಮುಟ್ಟಿದವು. ಅವರ ನಡುವೆ ಬಹಿರಂಗವಾಗಿಯೇ ಭಿನ್ನಾಭಿಪ್ರಾಯ ತಲೆದೋರಿ ಪರಿಸ್ಥಿತಿ

ಉಲ್ಬಣಗೊಂಡಿತ್ತು. ಪೇಶ್ವೆಯನ್ನು ಒಂದು ಸಲ ಕೊನೆಗಾಣಿಸಿಬಿಡಲು ಅವರು ನಿರ್ಧರಿಸಿದ್ದರು. ಅವರ ರಾಜ್ಯದ ವಿಸ್ತಾರದ ಸಾಹಸಗಳಿಗೆ ಪೇಶ್ವೆ ತೊಡಕಾಗುವುದು ಅವರಿಗೆ ಬೇಡವಾಗಿತ್ತು. ಬ್ರಿಟಿಷರು ಪೇಶ್ವೆಯರ ಮೇಲಿನ ದಾಳಿಯನ್ನು ದಕ್ಷಿಣದಿಂದ ಆರಂಭಿಸಿದರು. 1817ರ ನವಂಬರ್‌ನಲ್ಲಿ ಡೆಕ್ಕನದ ಕಮಿಶನರರಾದ ಎಲ್‌ಫಿನ್ಸನ್, ಕಿತ್ತೂರು ದೇಸಾಯಿಗೆ ಪತ್ರವೊಂದನ್ನು ಬರೆದು ಪೇಶ್ವೆಯರ ವಿರುದ್ಧ ಕೈಕೊಂಡ ಹೋರಾಟಕ್ಕೆ ಅವರ ಸಹಾಯವನ್ನು ಕೋರಿದನು. 1818 ರಲ್ಲಿ ಬ್ರಿಟಿಷರು ಪೇಶ್ವೆಯರ ಅಧೀನದಲ್ಲಿದ್ದ ಬೆಳಗಾಂವ ಕೋಟೆಯ ಮೇಲೆ ದಾಳಿ ಆರಂಭಿಸಿದರು. ದಾಳಿ 1818 ರ ಮಾರ್ಚ 21 ರಿಂದ ಏಪ್ರಿಲ್ 12 ನೆಯ ತಾರೀಖಿನವರೆಗೆ ನಡೆಯಿತು. ಈ ದಾಳಿಯ ಕಾಲದಲ್ಲಿ ಕಿತ್ತೂರಿನ ದೇಸಾಯಿ ಶಿವಲಿಂಗರುದ್ರ ಸರ್ಜ ಬ್ರಿಟಿಷರಿಗೆ ಹಣ, ಆಯುಧ ಸಂಗ್ರಹ ಹಾಗೂ ಧಾನ್ಯ ಇವುಗಳನ್ನಿತ್ತು ಸಹಾಯಮಾಡಿದನು. 1818 ರ ಏಪ್ರಿಲ್ 12ರಷ್ಟರಲ್ಲಿ ಪೇಶ್ವೆಯರನ್ನು ಪೂರ್ತಿ ಸೋಲಿಸಿ ಬೆಳಗಾಂವ ಕೋಟೆಯಿಂದ ಓಡಿಸಲಾಯಿತು. ಬ್ರಿಟಿಷರು ಬೆಳಗಾಂವ ಕೋಟೆಯನ್ನು ವಶಪಡಿಸಿಕೊಂಡರು. ಅಂದಿನಿಂದ ಬೆಳಗಾಂವದ ದಕ್ಷಿಣಕ್ಕಿರುವ ಪೇಶ್ವೆಯರ ಎಲ್ಲ ರಾಜ್ಯ ಬ್ರಿಟಿಷರ ವಶವಾಯಿತು. ಈ ಭಾಗದಲ್ಲಿದ್ದ ಕಿತ್ತೂರು ಕೂಡ ಬ್ರಿಟಿಷರ ಆಧೀನಕ್ಕೆ ಒಳಪಟ್ಟಿತು.

ಇದಾದ ಕೆಲವು ದಿನಗಳಲ್ಲಿ, ಧಾರವಾಡದ ಕಮೀಷನರನಾದ ಥಾಮಸ್ ಮನ್ರೋ ಶಿವಲಿಂಗರುದ್ರ ಸರ್ಜನನ್ನು ಕರೆಯಿಸಿ 1818 ರ ಜುಲೈ 28 ನೆಯ ತಾರೀಖಿನಂದು ಒಂದು ಒಪ್ಪಂದಕ್ಕೆ ಸಹಿ ಹಾಕಿಸಿಕೊಂಡನು. ಈ ಒಪ್ಪಂದದ ಪ್ರಕಾರ ಕಿತ್ತೂರ ಅರಸರು ತಾವು ಆಳುತ್ತಿದ್ದ ರಾಜ್ಯವನ್ನು 1,75,000 ರೂಪಾಯಿಗಳ ವರ್ಷಾಶನ ಕೊಟ್ಟು ಇಟ್ಟುಕೊಳ್ಳ ಬಹುದು. ಆದರೆ ಬ್ರಿಟಿಷರಿಗೆ ಖಾನಾಪುರ ತಾಲೂಕನ್ನು, ಅವರ ಮಿಲಿಟರಿ ಠಾಣೆಯ ಸ್ಥಾಪನೆಗಾಗಿ ಬಿಟ್ಟು ಕೊಡಬೇಕು. ಆ ಮಿಲಿಟರಿ ಠಾಣೆಯ ಖರ್ಚಿಗಾಗಿ ಖಾನಾಪುರ ತಾಲ್ಲೂಕಿನ ಉತ್ಪನ್ನ ಬ್ರಿಟಿಷರಿಗೆ ಸಲ್ಲಬೇಕು. ಬ್ರಿಟಿಷ ವಿರೋಧಿ ಯಾವ ಕೃತ್ಯಗಳನ್ನು ಕಿತ್ತೂರ ಒಡೆಯರು ಮಾಡಕೂಡದು. ಈ ರೀತಿ ನಡೆದುಕೊಂಡಲ್ಲಿ, ಕಿತ್ತೂರಿನ ಆಡಳಿತದಲ್ಲಿ ಅವರು ಯಾವ ರೀತಿಯ ಹಸ್ತಕ್ಷೇಪ ಮಾಡುವುದಿಲ್ಲವಾಗಿಯೂ ಹಾಗೂ ಕಿತ್ತೂರಿನ ಒಡೆಯರನ್ನು ಗೌರವದಿಂದ ಕಾಣುವುದಾಗಿಯೂ ಆಶ್ವಾಸನವಿತ್ತನು.

ಆದರೂ ಖಾನಾಪುರವನ್ನು ಬಿಟ್ಟುಕೊಡುವ ಕರಾರು ಕಿತ್ತೂರಿಗೆ ನಷ್ಟ ಹಾಗೂ ಅಪಮಾನಕಾರಕವಾಗಿತ್ತು. ಖಾನಾಪುರ ಎಲ್ಲ ದೃಷ್ಟಿಯಿಂದ ಆಯಕಟ್ಟಿನ ಸ್ಥಳದಲ್ಲಿದ್ದದ್ದರಿಂದ ಅದನ್ನು ಬಿಟ್ಟುಕೊಡುವುದು ಕಿತ್ತೂರಿಗೆ ಅಪಾಯಕಾರಿಯಾಗಿತ್ತು. ಸಂಸ್ಥಾನದ ಆದಾಯಕ್ಕೂ ಸಾಕಷ್ಟು ನಷ್ಟವಾಗುತ್ತಿತ್ತು. ಇದಕ್ಕಾಗಿ ರಾಣಿ ಚೆನ್ನಮ್ಮ ಬಹಳ ನೊಂದುಕೊಂಡಳು. ಆದರೆ ಅವಳು ನಿರುಪಾಯಳಾಗಿದ್ದಳು. ಕಿತ್ತೂರಿನ ಕಲ್ಲುಮಠದ ಸ್ವಾಮಿಗಳು ಹಾಗೂ ತನ್ನ ಸರದಾರರೊಡನೆ ರಾಣಿ ಚೆನ್ನಮ್ಮ ದೀರ್ಘ ಚರ್ಚೆ ನಡೆಸಿದಳು. ಅಂದಿನ ಪರಿಸ್ಥಿತಿಯಲ್ಲಿ ಈ ಅನ್ಯಾಯಗಳನ್ನು ಸಹಿಸಿಕೊಂಡು ಕಾಲ ಹಾಕುವುದೇ ಒಳಿತೆಂದು ಅವರು ನಿರ್ಣಯಿಸಿ ಕೊಂಡರು. ಬ್ರಿಟಿಷರ ವಿರುದ್ಧ ಬಂಡೇಳಲು ಸೂಕ್ತ ಹಾಗೂ ಅನುಕೂಲ ಸಮಯಕ್ಕಾಗಿ

ಕಾಯಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ದುಡುಕಿನ ಕಾರ್ಯಕ್ಕಿಂತ ಬುದ್ಧಿವಂತಿಕೆಯ ತಾಳ್ಮೆಯೇ ಮೇಲೆಂಬುದನ್ನು ಅವಳು ಅರಿತಿದ್ದಳು. ಅವಳು ಅನುಕೂಲವಾದ ಸಮಯಕ್ಕಾಗಿ ಕಾಯುವ ನಿರ್ಣಯ ಕೈಕೊಂಡಳು. ಆಗ ಅವಳು ಬ್ರಿಟಿಷರ ವಿರುದ್ಧ ಸಿಡಿದೇಳಲು ನಿರುಪಾಯಳಾಗಿದ್ದಳು. ಮೊದಲು ತನ್ನ ಮನೆಯನ್ನು ಸರಿಪಡಿಸಿಕೊಳ್ಳಲು ಆಕೆ ಉದ್ಯುಕ್ತಳಾದಳು. ದರ್ಬಾರದಲ್ಲಿಯ ವಿರೋಧಿ ಗುಂಪುಗಳಲ್ಲಿಯ ಭಿನ್ನಾಭಿಪ್ರಾಯಗಳನ್ನು ತೊಡೆದು ಹಾಕಲು ಅವಳು ಯತ್ನಿಸತೊಡಗಿದಳು. ಸಂಸ್ಥಾನದ ಕಾರಭಾರದ ವಿಷಯಗಳಲ್ಲಿ ಶಿವಲಿಂಗರುದ್ರ ಸರ್ಜನಿಗೆ ಸಲಹೆ ನೀಡುತ್ತಿದ್ದಳು. ಅವನಲ್ಲಿ ಸ್ವಾತಂತ್ರ್ಯ ಪ್ರೇಮ, ನಾಡಪ್ರೇಮ, ಇವುಗಳನ್ನು ಕುದುರಿಸಲು ಯತ್ನಿಸಿದಳು. ಈ ಸಮಯದಲ್ಲಿ ಬ್ರಿಟಿಷರು ಕಿತ್ತೂರಿನ ವಿದ್ಯಮಾನಗಳನ್ನು ಬಹಳ ತೀಕ್ಷ್ಣವಾಗಿ ಅಭ್ಯಾಸ ಮಾಡುವುದರಲ್ಲಿ ಉದ್ಯುಕ್ತರಾಗಿದ್ದರು. ಅವರು ಕಿತ್ತೂರಿನ ಆಂತರಿಕ ವಿಷಯಗಳಲ್ಲಿ ಕೈಹಾಕಲು ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದರು. ರಾಣಿ ಚೆನ್ನಮ್ಮನ ತಾಳ್ಮೆ ಹಾಗೂ ವಿವೇಕಪೂರ್ಣ ನಿಲುಮೆ ಅವರ ಹೊಂಚಿಗೆ ತಡೆಯನ್ನುಂಟು ಮಾಡಿತು.

ದಿನಗಳು ಕಳೆದಂತೆ ರಾಣಿ ಚೆನ್ನಮ್ಮ ರಾಜ್ಯದಲ್ಲಿ ಹೆಚ್ಚು ಹೆಚ್ಚು ಆಡಳಿತದ ಅಧಿಕಾರ ವಹಿಸತೊಡಗಿದಳು. ಅವಳು ಬಹುಮಟ್ಟಿಗೆ ಕಿತ್ತೂರಿನ ಒಡತಿಯೇ ಆಗಿದ್ದಳೆಂದರೂ ಸಲ್ಲುವುದು. ಅವಳು ಯೌವನದ ಉತ್ಸಾಹದ ಜೊತೆಗೆ ಅತುಲ ಧೈರ್ಯ ಹಾಗೂ ವಿವೇಕ ಇವುಗಳನ್ನು ಪಡೆದಿದ್ದಳು. ಅವಳು ದೇಹದಾರ್ಢ್ಯವುಳ್ಳವಳಾಗಿದ್ದು, ಸ್ಫುರದ್ರೂಪಿಯಾಗಿದ್ದರಿಂದ ಆಕರ್ಷಕ ವ್ಯಕ್ತಿತ್ವವನ್ನು ಪಡೆದಿದ್ದಳು. ಅವಳು ಕತ್ತಿ ತಿರಿಗಿಸುವುದರಲ್ಲಿ, ಕುದುರೆ ಹತ್ತುವುದರಲ್ಲಿ ಬಾಣ ಪ್ರಯೋಗದಲ್ಲಿ ಪಾರಂಗತಳಾಗಿದ್ದಳಲ್ಲದೆ ರಾಜ್ಯಶಾಸ್ತ್ರದಲ್ಲಿಯೂ ಪರಿಣತಳಾಗಿದ್ದಳು. ದರ್ಬಾರಿನಲ್ಲಿ ನಡೆಯುವ ಸಭೆಗಳಲ್ಲಿ ಆಕೆಯೇ ಮುಖ್ಯ ಪಾತ್ರ ವಹಿಸುತ್ತಿದ್ದಳು. ಗಂಭೀರ ನಡವಳಿಕೆ ಹಾಗೂ ವಿವೇಕಯುಕ್ತವಾದ ನಿಲುಮೆಯಿಂದ ಆಕೆ ಈ ಸಭೆಗಳಿಗೆ ಮುಂದಾಳುತ್ವವನ್ನು ಒದಗಿಸುತ್ತಿದ್ದಳು. ಸಂದರ್ಭ ಒದಗಿದಾಗ ಆಕೆ ಥಟ್ಟನೇ ನಿರ್ಣಯ ಕೈಕೊಳ್ಳುವ ಯೋಗ್ಯತೆಯನ್ನು ಪಡೆದಿದ್ದಳು. ಆ ನಿರ್ಣಯಗಳು ಸಮಯೋಚಿತವಾಗಿರುತ್ತಿದ್ದವು. ಕಿತ್ತೂರ ನಾಡಿನ ಜನತೆಯ ಏಳ್ಗೆಗಾಗಿ ಚಿಂತಿಸುವ ಅವಳ ನಿರ್ಣಯಗಳು ನಾಡಿನ ಕಲ್ಯಾಣಕ್ಕಾಗಿಯೇ ಇರುತ್ತಿದ್ದವು. ಕಿತ್ತೂರು ಮತ್ತೆ ಎಲ್ಲ ರೀತಿಯಿಂದ ಉತ್ಕರ್ಷ ಹೊಂದತೊಡಗಿತು. ಸಮೃದ್ಧವೂ ಬಲಶಾಲಿಯೂ ಆದ ನಾಡನ್ನು ಅವಳು ಕಟ್ಟತೊಡಗಿದಳು. ರಾಣಿ ಚೆನ್ನಮ್ಮನ ಕೀರ್ತಿ ನಾಲ್ಕೂ ದಿಕ್ಕಿನಲ್ಲಿ ಹರಡತೊಡಗಿತು. ಅವಳು ತನ್ನ ಸೈನ್ಯವನ್ನು ಎಂಥ ಯುದ್ಧ ಪ್ರಸಂಗ ಬಂದರೂ ಎದುರಿಸುವಂತೆ ಸನ್ನಾಹಗೊಳಿಸತೊಡಗಿದಳು.

ಈ ಭಾಗದ ಬ್ರಿಟಿಷರ ಆಡಳಿತ ಕೇಂದ್ರ ಧಾರವಾಡವಾಗಿತ್ತು. ಧಾರವಾಡ ಕಿತ್ತೂರಿಗೆ ಕೇವಲ 40 ಕಿ.ಮಿ. ದೂರದಲ್ಲಿದ್ದು ಕಿತ್ತೂರಿನ ಉತ್ಕರ್ಷ ಹಾಗೂ ಸರ್ವತೋಮುಖ ಪ್ರಗತಿಯ ಸುದ್ದಿಗಳು ಬ್ರಿಟಿಷರಿಗೆ ಅಸಮಾಧಾನಕಾರಕವಾಗಿದ್ದವು. ಅವರು ಚಟಪಡಿಸ

ತೊಡಗಿದರು. ದಕ್ಷಿಣದ ರಾಜ್ಯಗಳಲ್ಲಿಯೇ ಅತ್ಯಂತ ಸಮೃದ್ಧವೂ ಬಲಶಾಲಿಯೂ ಆದ ಈ ಸಣ್ಣ ಸಂಸ್ಥಾನದ ಬಗೆಗೆ ಅವರಿಗೆ ವಿವಂಚನೆಯುಂಟಾಯಿತು. ಕಿತ್ತೂರನ್ನು ತುಳಿದು ತಮ್ಮ ಹಿಡಿತದಲ್ಲಿಟ್ಟುಕೊಳ್ಳದಿದ್ದರೆ, ಕಿತ್ತೂರು ಹಾಗೂ ಉಳಿದ ದಕ್ಷಿಣ ಸಂಸ್ಥಾನಗಳಿಗೆ ಇದರಿಂದ ಪ್ರೋತ್ಸಾಹ ದೊರೆತು ಅವರೆಲ್ಲರೂ ಒಂದುಗೂಡಿ ತಮ್ಮ ವಿರುದ್ಧ ಒಂದು ದಿವಸ ಬಂಡು ಏಳಬಹುದೆಂಬ ಹೆದರಿಕೆ ಅವರಿಗೆ ಉಂಟಾಗತೊಡಗಿತು. ತಮ್ಮ ಮಿಲಿಟರಿ ಶಕ್ತಿಗೆ ಅದು ಒಂದು ಆಹ್ವಾನವೇ ಆದೀತೆಂಬ ಹೆದರಿಕೆ ಅವರಿಗೆ ಆಗತೊಡಗಿತು.

ಈ ವಿಚಾರಸರಣಿಯಲ್ಲಿದ್ದ ಧಾರವಾಡದ ಮುಖ್ಯ ಕಲೆಕ್ಟರನಾದ ಥ್ಯಾಕರೆ 1822 ರಲ್ಲಿ ಕಿತ್ತೂರ ದೇಸಾಯರಿಗೆ ಒಂದು ಪತ್ರ ಬರೆದು ಕಿತ್ತೂರ ಸಂಸ್ಥಾನ ದರೋಡೆಖೋರರಿಗೂ, ಕಳ್ಳರಿಗೂ ಆಶ್ರಯ ಕೊಡುತ್ತಿದೆಯೆಂದು ಆಪಾದಿಸಿ, ಅದರಿಂದ ಸುತ್ತು ಪ್ರದೇಶದಲ್ಲಿ ಶಾಂತಿ ಭಂಗವಾಗುತ್ತಿದೆಯೆಂದು ಎಚ್ಚರಿಕೆ ನೀಡಿದನು. ಇದನ್ನು ಕೂಡಲೇ ಪ್ರತಿಬಂಧಿಸದಿದ್ದರೆ ತೀವ್ರ ಕ್ರಮ ಕೈಕೊಳ್ಳುವುದಾಗಿ, ಅದರ ಪರಿಣಾಮ ಭೀಕರವಾಗುವುದಾಗಿ ಹೆದರಿಕೆಯಿತ್ತನು. ಈ ಸಂಗತಿಗಳು ಸುಳ್ಳಿನ ಕಂತೆಗಳಾಗಿದ್ದವು. ಬ್ರಿಟಿಷರು ಕಿತ್ತೂರಿನ ಆಡಳಿತದಲ್ಲಿ ಕೈಹಾಕಲು ಏನಾದರೂ ಕುಂಟ ನೆಪ ಹುಡುಕುತ್ತಿದ್ದಾರೆಂಬುದು ಸ್ಪಷ್ಟವಾಗಿ ಕಂಡುಬರುವಂತಿತ್ತು. ಆದರೆ ಬ್ರಿಟಿಷರು ದುಡುಕಲಿಲ್ಲ. ಇಂಥ ಸುಳ್ಳಿನ ಕ್ಷುಲ್ಲಕ ಕಾರಣ ಮುಂದೆಮಾಡಿ ಕಿತ್ತೂರಿನ ಆಡಳಿತದಲ್ಲಿ ಕೈಹಾಕಿದರೆ ದಕ್ಷಿಣದ ಸಂಸ್ಥಾನಿಕರು ಒಂದುಗೂಡಿ ತಮ್ಮ ವಿರುದ್ಧ ಬಂಡೇಳಬಹುದೆಂಬ ಹೆದರಿಕೆಯೂ ಅವರಿಗಿತ್ತು. ಮತ್ತೆ ಕೆಲಕಾಲ ಕಾಯಲು ನಿರ್ಧರಿಸಿ ಸ್ತಬ್ಧರಾದರು. ಆದರೂ ಕಿತ್ತೂರಿನ ಆಡಳಿತದಲ್ಲಿ ಕೈಹಾಕಲು ಸಬಲ ಕಾರಣವೊಂದನ್ನು ಹುಡುಕುತ್ತ, ಅವರು ಕಣ್ಣಲ್ಲಿ ಕಣ್ಣಿಟ್ಟು ಕಿತ್ತೂರಿನ ವಿದ್ಯಮಾನಗಳನ್ನು ವೀಕ್ಷಿಸತೊಡಗಿದರು.

ಕೆಲವು ಕಾಲ ಕಿತ್ತೂರಿನ ಸಂಸ್ಥಾನದ ಆಡಳಿತ ಸುಗಮವಾಗಿ ಸಾಗಿತು. ಯಾವ ಅಘಟಿತ ಘಟನೆಗಳೂ ನಡೆಯಲಿಲ್ಲ. ಜನರು ಸುಖಿಗಳಾಗಿದ್ದರು. ವ್ಯಾಪಾರ ಉದ್ದಿಮೆಗಳು ಭರದಿಂದ ಸಾಗಿದ್ದವು. ಆಡಳಿತವು ಚೊಕ್ಕವಾಗಿತ್ತು. ಸೈನ್ಯ ಸುಸಜ್ಜಿತವಾಗಿತ್ತು. ದರ್ಬಾರಿನಲ್ಲಿಯ ಬೇರೆ ಬೇರೆ ಗುಂಪುಗಳಲ್ಲಿಯ ಭಿನ್ನಾಭಿಪ್ರಾಯಗಳು ಕಡಿಮೆಯಾಗಿದ್ದವು. ರಾಜ್ಯದ ಆಡಳಿತದ ಸರ್ವ ವಿಷಯಗಳು ರಾಣೀ ಚೆನ್ನಮ್ಮನ ಕೈಯಲ್ಲಿ ಭದ್ರವಾಗಿದ್ದವು. ಕ್ಷಯರೋಗ ಪೀಡಿತನಾದ ಶಿವಲಿಂಗರುದ್ರ ಸರ್ಜನ ಆರೋಗ್ಯ ದಿನೇ ದಿನೇ ಕೆಡತೊಡಗಿತ್ತು. ಆತನು ಹೆಸರಿಗೆ ಮಾತ್ರ ಕಿತ್ತೂರಿನ ದೊರೆಯಾಗಿದ್ದನು. ಅವನು ಹಾಸಿಗೆ ಹಿಡಿದು ಸವೆಯುತ್ತಿದ್ದನು. ಕೆಲವು ದಿನಗಳಲ್ಲಿ ಆತನ ರೋಗ ಉಲ್ಬಣಗೊಂಡು 1824 ರ ಸೆಪ್ಟೆಂಬರ್ ತಿಂಗಳಲ್ಲಿ ಆತನು ತೀರಿಕೊಂಡನು. ಅಂದಿಗೆ ಅವನ ಸುಮಾರು ಎಂಟು ವರ್ಷಗಳ ಆಳ್ವಿಕೆ ಕೊನೆಗೊಂಡಿತು. ಆಗ ಚೆನ್ನಮ್ಮ ರಾಜ್ಯಭಾರದ ಪೂರ್ತಿ ಹೊಣೆಯನ್ನು ಹೊತ್ತುಕೊಂಡು ಕಿತ್ತೂರಿನ ರಾಣಿಯಾದಳು.

# 4. ರಾಣಿ ಚೆನ್ನಮ್ಮ

ಮಲ್ಲಸರ್ಜನ ಉಜ್ವಲ ಆಳ್ವಿಕೆಯ ವಿಷಯವನ್ನು ಹಿಂದಿನ ಒಂದು ಅಧ್ಯಾಯದಲ್ಲಿ ಆಗಲೇ ವಿವರಿಸಲಾಗಿದೆ. ಅವನಿಗೆ ಇಬ್ಬರು ಹೆಂಡಂದಿರು – ರುದ್ರಮ್ಮ ಹಾಗೂ ಚೆನ್ನಮ್ಮ. ಮೊದಲನೆಯ ಹೆಂಡತಿಯಾದ ರುದ್ರಮ್ಮ ಪ್ರಸಿದ್ಧವಾದ ತಲ್ಲೂರ ದೇಸಾಯರ ಮಗಳು. ಅವರ ವಂಶಜರು ಇಂದಿಗೂ ಇದ್ದಾರೆ. ಅವಳೂ ಸ್ವತಃ ಶೂರಳಾಗಿದ್ದಳು. ಯುದ್ಧಕಲೆಯಲ್ಲಿ ಅವಳು ಪರಿಣತಳಾಗಿದ್ದಳು. ದೇಸನೂರ ಯುದ್ಧದಲ್ಲಿ ಕಿತ್ತೂರಿನ ಸೈನ್ಯ ಟಿಪ್ಪುವಿನ ಸೈನ್ಯವನ್ನು ಸೋಲಿಸಿ ಹಿಮ್ಮೆಟ್ಟಿಸಿತು. ಆ ಯುದ್ಧದಲ್ಲಿ ರುದ್ರಮ್ಮ ಸ್ವತಃ ಭಾಗವಹಿಸಿದ್ದಾಳೆಂಬುದಕ್ಕೆ ಅನೇಕ ಕಡೆ ಐತಿಹಾಸಿಕ ಹಾಗೂ ಸಾಹಿತ್ಯಿಕ ಆಧಾರಗಳು ಸಿಗುತ್ತವೆ. ಅವಳು ದೇಸಾಯರ ಮನೆಯಲ್ಲಿಯ ಶ್ರೇಷ್ಠ ಪರಂಪರೆ ಹಾಗೂ ವಾತಾವರಣದಲ್ಲಿ ಅವಳ ಬಾಲ್ಯ ಶಿಕ್ಷಣ ನಡೆದಿದ್ದುದರಿಂದ ರಾಜ್ಯಭಾರಗಳ ವಿಷಯಗಳಲ್ಲಿ ಅವಳಿಗೆ ಪರಿಣತಿಯಿದ್ದಿತು. ಅವಳು ಪರ್ಶಿಯನ್ ಮತ್ತು ಉರ್ದು ಭಾಷೆಗಳನ್ನು ಚೆನ್ನಾಗಿ ಬಲ್ಲವಳಾಗಿದ್ದಳು. ಮಲ್ಲಸರ್ಜನ ಪತ್ರವ್ಯವಹಾರಗಳಲ್ಲಿ ಆಕೆ ಸಹಾಯ ಮಾಡುತ್ತಿದ್ದಳು. ಟಿಪ್ಪು ಸುಲ್ತಾನನಿಗೆ ಮಲ್ಲಸರ್ಜ ಬರೆದ ಅನೇಕ ಪತ್ರಗಳಲ್ಲಿ ಮೊದಲ ಕರಡುಗಳು ಅವಳಿಂದಲೇ ತಯಾರುಮಾಡಲ್ಪಟ್ಟವು. ಚೆನ್ನಮ್ಮ ಮಲ್ಲಸರ್ಜನ ಎರಡನೆಯ ಹೆಂಡತಿ. ಮಲ್ಲಸರ್ಜ ಧೀರಳೂ, ಗುಣವಂತೆಯೂ ಆದ ಮೊದಲನೆಯ ಹೆಂಡತಿಯೊಡನೆ ಸುಖವಾಗಿದ್ದಾಗಲೂ ಎರಡನೆಯವಳನ್ನು ಏಕೆ ಮದುವೆ ಮಾಡಿಕೊಂಡ ಎಂಬುದು ಸ್ವಾಭಾವಿಕವಾಗಿ ಉದ್ಭವಿಸುವ ಪ್ರಶ್ನೆ. ಮಲ್ಲಸರ್ಜ ಚೆನ್ನಮ್ಮನನ್ನು ಮೊದಲ ಸಲ ಭೆಟ್ಟಿಯಾದ ರಮ್ಯ ಘಟನೆ ಹಾಗೂ ಕೆಲವೇ ದಿನಗಳಲ್ಲಿ ಆ ಭೆಟ್ಟಿ ಮದುವೆಯಲ್ಲಿ ಪರ್ಯಾವಸನಗೊಂಡ ಪ್ರಸಂಗ ಅನೇಕ ಕಾವ್ಯ ಹಾಗೂ ಜಾನಪದ ಹಾಡುಗಳಲ್ಲಿ ವರ್ಣಿತವಾಗಿವೆ.

ಅವರ ಆಶ್ಚರ್ಯಕರವಾದ ಭೆಟ್ಟಿಯು ನಡೆದ ಘಟನೆಯ ವಿವರ ಕಟ್ಟು ಕಥೆಗೆ ಅನುಸಾರವಾಗಿ ಹೀಗಿದೆ: ದಕ್ಷಿಣದಲ್ಲಿದ್ದ ಹಲವಾರು ಸಂಸ್ಥಾನಗಳ ದೇಶಾಭಿಮಾನಿಗಳಾದ ರಾಜರುಗಳ ಸಣ್ಣ ಗುಂಪಿಗೆ ಮಲ್ಲಸರ್ಜನೇ ಅನಭಿಷಕ್ತ ನೇತಾರ. ಟಿಪ್ಪು ಮತ್ತು ಪೇಶ್ವೆಯರ ನಡುವೆ ನಡೆಯುತ್ತಿದ್ದ ನಿರಂತರ ಯುದ್ಧಗಳ ಬಗೆಗೆ ಮಲ್ಲಸರ್ಜ ಬಹಳ ವಿವಂಚಿತವಾಗಿದ್ದನು. ಈ ಯುದ್ಧಗಳು ಸಣ್ಣ ಸಂಸ್ಥಾನಿಕರನ್ನು ಅನೇಕಸಲ ಬಹಳ ಪೇಚಿನ ಹಾಗೂ ದುರಂತ ಪ್ರಸಂಗಗಳಲ್ಲಿ ಸಿಲುಕಿಸುತ್ತಿದ್ದವು. ಪ್ರಬಲರಾದ ಈ ದೊಡ್ಡ ರಾಜರುಗಳ ನಡುವೆ ನಡೆದ ಈ

ನಿರಂತರವಾದ ಯುದ್ಧಗಳು ಪರಕೀಯರಿಗೆ, ಅದರಲ್ಲಿಯೂ ಬ್ರಿಟಿಷರಿಗೆ ಒಳ್ಳೇ ಅವಕಾಶ ಒದಗಿಸುತ್ತಿದ್ದವು. ಇಂಥ ದುರದೃಷ್ಟಕರ ಪರಿಸ್ಥಿತಿಯ ಅವಕಾಶ ಪಡೆದು ಅವರು ತಮ್ಮ ಬೇಳೆ ಬೇಯಿಸಿಕೊಳ್ಳಲು ಅನುಕೂಲವಾಯಿತು. ಅವರು ಒಬ್ಬರಮೇಲೆ ಇನ್ನೊಬ್ಬರನ್ನು ಎತ್ತಿ ಹೋರಾಟ ಮಾಡಹಚ್ಚಿ ಇಬ್ಬರನ್ನೂ ದುರ್ಬಲಗೊಳಿಸಿ, ಇಬ್ಬರಿಂದಲೂ ಕಸಿದುಕೊಂಡು ತಮ್ಮ ರಾಜ್ಯವನ್ನು ದಿನೇ ದಿನೇ ವಿಸ್ತರಿಸುತ್ತ ಹೋಗಲು ಇದರಿಂದ ಅನುಕೂಲವಾಯಿತು. ಬ್ರಿಟಿಷರು 'ಒಡೆ ಹಾಗೂ ಒಡೆತನ ಮಾಡು' ನೀತಿಯನ್ನು ಜಾಣತನದಿಂದ ಮುಂದುವರಿಸಿಕೊಂಡು ಹೋದರು. ಪ್ರಬಲರಾದ ಪೇಶ್ವೆ, ಟಿಪ್ಪುರಂಥ ದೊಡ್ಡ ರಾಜರು ಬ್ರಿಟಿಷರ ಮೋಸದ ಆಟಕ್ಕೆ ಬಲಿಬಿದ್ದು ತಮ್ಮಲ್ಲಿ ಹೋರಾಡುವುದನ್ನು ಕಂಡು ಅತುಲ ದೇಶಾಭಿಮಾನಿ ಮಲ್ಲಸರ್ಜ ಅತಿಯಾಗಿ ನೊಂದುಕೊಂಡಿದ್ದನು. ಆತನು ಕೊಲ್ಲಾಪುರ ರಾಜನನ್ನೊಳಗೊಂಡ ದಕ್ಷಿಣದ ಎಲ್ಲ ಸಂಸ್ಥಾನಿಕರು ಹಾಗೂ ದೇಸಾಯರನ್ನು ಒಂದುಗೂಡಿಸಿ ಒಂದು ಪ್ರಬಲ ಗುಂಪನ್ನಾಗಿ ಮಾರ್ಪಡಿಸಿ, ಬ್ರಿಟಿಷರ ವಿರುದ್ಧ ಹೋರಾಡಲು ಅವರನ್ನು ಅಣಿಗೊಳಿಸಬೇಕೆಂದು ಯೋಚಿಸಿದನು. ತನ್ನ ಉದ್ದೇಶ ಬ್ರಿಟಿಷರಿಗೆ ತಿಳಿಯದಂತೆ, ಜಾಣತನದಿಂದ ಅವರೆಲ್ಲರನ್ನು ಭೆಟ್ಟಿಯಾಗಿ ಅವರನ್ನು ತನ್ನ ವಿಶ್ವಾಸದಲ್ಲಿ ತೆಗೆದುಕೊಂಡು ಪರ್ಯಾಯವಾಗಿ ತನ್ನ ಗುರಿ ಸಾಧಿಸಲು ಅಣಿಯಾದನು. ತನಗೆ ವಿಶ್ವಾಸವಿದ್ದ ಎಲ್ಲ ಸಂಸ್ಥಾನಿಕರನ್ನು ದೇಸಾಯರನ್ನು ಭೆಟ್ಟಿಯಾಗಲು ತಾನೇ ಪ್ರವಾಸ ಕೈಕೊಂಡನು. ಇಂಥ ಒಂದು ಪ್ರವಾಸದಲ್ಲಿ ಆತನು ಕಾಕತಿಗೆ ಬಂದನು. ಕಾಕತಿ ಬೆಳಗಾಂವ ಜಿಲ್ಲೆಯಲ್ಲಿ ಒಂದು ಸಣ್ಣ ದೇಸಗತಿ ಆಗಿದ್ದಿತು. ಅದರ ದೇಸಾಯಿ ಧೂಳಪ್ಪಗೌಡ ದೇಸಾಯಿಯು ಉತ್ತರ ಕರ್ನಾಟಕದಲ್ಲಿ ಪ್ರಬಲನಾದ ದೇಸಾಯಿಯಾಗಿದ್ದನು. ಆಗ ಕಾಕತಿ ಸಾಂಗಲಿ ಸಂಸ್ಥಾನದಲ್ಲಿತ್ತು. ಮಲ್ಲಸರ್ಜನು ಕಾಕತಿ ಹತ್ತರ ಬಿಡಾರಬಿಟ್ಟು ಧೂಳಪ್ಪಗೌಡನಿಗೆ ತಾನು ಅವನ ಭೆಟ್ಟಿಗೆ ಬಂದ ವಿಷಯ ಹೇಳಿ ಕಳಿಸಿ ವಿಶ್ರಮಿಸಿದನು. ಅವನಿಂದ ಉತ್ತರಕ್ಕಾಗಿ ಕಾಯ್ದು ಅಂದು ಅಲ್ಲಿಯೇ ಉಳಿದನು.

ಮಲ್ಲಸರ್ಜನ ಬೀಡಾರದ ವಿಷಯ ತಿಳಿದೊಡನೆ ಸುತ್ತಲಿನ ಹಳ್ಳಿಯ ಜನರೆಲ್ಲ ಆತನ ದರ್ಶನಕ್ಕೆ ಬಂದರು. ಹಲವು ಹಳ್ಳಿಯ ಜನರು ಸಮೀಪದ ಅಡವಿಯಲ್ಲಿ ವಾಸವಾಗಿ, ಹಳ್ಳಿಗರ ದನಕರುಗಳನ್ನು ಕೊಂದು ತಿನ್ನುತ್ತಿದ್ದ ಹುಲಿಯ ಕಾಟದ ಬಗ್ಗೆ ಪ್ರಸ್ತಾಪಮಾಡಿ, ಮಲ್ಲಸರ್ಜರು ಅದರ ಬೇಟೆಯಾಡಿಕೊಂಡು ಅವರ ತೊಂದರೆಯನ್ನು ಪರಿಹರಿಸಬೇಕೆಂದು ಬಿನ್ನವಿಸಿ ಕೊಂಡರು. ಮಲ್ಲಸರ್ಜ ಬೇಟೆಯಾಡುವುದರಲ್ಲಿ ಬಹಳ ನಿಪುಣನು. ಜನರ ಬಿನ್ನಹದ ಮೇರೆಗೆ ತನ್ನ ಕೆಲವು ಹಿಂಬಾಲಕರನ್ನು ಕರೆದುಕೊಂಡು ಅಡವಿಯಲ್ಲಿ ಬೇಟೆಗೆ ಹೊರಟನು. ಕೊನೆಗೆ ಅವರಿಗೆ ಹುಲಿ ಕಂಡಿತು. ತನ್ನ ಒಂದೇ ಒಂದು ಬಾಣದಿಂದ ಮಲ್ಲಸರ್ಜನು ಹುಲಿಯನ್ನು ಹೊಡೆದು ಕೊಂದನು. ಅವನು ಅಡವಿಯ ದಟ್ಟವಾದ ಗಿಡಗಳ ತೊಡಕುಗಳನ್ನು ಬಿಡಿಸಿಕೊಂಡು ಹುಲಿಯು ಸತ್ತುಬಿದ್ದ ಸ್ಥಳವನ್ನು ಮುಟ್ಟಿದಾಗ ಒಂದು ವಿಸ್ಮಯಕಾರಿ ದೃಶ್ಯವನ್ನು ಕಂಡನು. ಆ ಸತ್ತು ಬಿದ್ದ ಹುಲಿಯ ಮಗ್ಗುಲಲ್ಲಿಯೇ ಧನುರ್ಧಾರಿಯಾದ ಒಬ್ಬ ಸುಂದರ ಯುವತಿ ನಿಂತಿದ್ದಾಳೆ. ಅವಳು ಇವನನ್ನು ಕಂಡಾಗ ತನ್ನ ಬಾಣದಿಂದ ಆ ಹುಲಿಯನ್ನು ತಾನು ಕೊಂದಿರುವುದಾಗಿ ಸಾಧಿಸಿ, ಅವಳ ಬೇಟೆಯ ಕ್ರೀಡೆಯ ಆನಂದಕ್ಕೆ ಭಂಗ

ಉಂಟುಮಾಡಿದುದುಕ್ಕೆ ಈ ಅಪರಿಚಿತ ವ್ಯಕ್ತಿಯನ್ನು ತರಾಟೆಗೆ ತೆಗೆದುಕೊಳ್ಳುವಂತಹ ಮಾತನ್ನಾಡತೊಡಗಿದಳು. ಮಲ್ಲಸರ್ಜ ಅವಳ ಸೌಂದರ್ಯ, ಗಾಂಭೀರ್ಯಗಳಿಗೆ ಚಕಿತನಾಗಿ ಕ್ಷಣಕಾಲ ಸುಮ್ಮನೆ ನಿಂತು, ನಖಶಿಖಾಂತ ಅವಳನ್ನು ವೀಕ್ಷಿಸಿದನು. ಈ ಸುಂದರ ಯುವತಿ ತನ್ನ ಗಾಂಭೀರ್ಯ ಹಾಗೂ ಚೆಲುವಿಕೆಯಿಂದ ಓರ್ವ ರಾಜಕನ್ನಿಕೆಯಂತೆಯೇ ಕಂಗೊಳಿಸಿದಳು. ಆಗ ಚೆನ್ನಮ್ಮ ಯೌವನದ ಪರಾಕಾಷ್ಠೆಯ ಹಂತದಲ್ಲಿದ್ದಳು. ಧೂಳಪ್ಪಗೌಡ ದೇಸಾಯಿ ಹಾಗೂ ಅವನ ಪತ್ನಿ ಪದ್ಮಾವತಿಯರ ಉದರದಲ್ಲಿ 1778 ರಲ್ಲಿ ಜನಿಸಿದ ಚೆನ್ನಮ್ಮ ಆಗ 22 ವರ್ಷದ ಯುವತಿ. ಅವಳ ತೆಳುವಾದ, ಚೆಲುವಾದ ಬಳುಕುವ, ಅಂಗಸೌಷ್ಠವಕ್ಕೆ ಮಲ್ಲಸರ್ಜ ಮಾರುಹೋದನು. ಅವನ ದೃಷ್ಟಿ ಅವಳ ಚೆಲುವಿನಲ್ಲಿ ಹಲವು ಕ್ಷಣ ನೆಟ್ಟು ಮೈ ಮರೆಯಿತು. ಪ್ರಯಾಸದಿಂದ ಆ ದೃಷ್ಟಿಯನ್ನು ಅಲ್ಲಿಂದ ಹುಲಿಯ ಕಡೆ ಹೊರಳಿಸಿದಾಗ, ಹುಲಿಯ ದೇಹದಲ್ಲಿ ಎರಡು ಬಾಣಗಳು ನೆಟ್ಟಿದ್ದನ್ನು ಕಂಡನು. ಅದಕ್ಕಾಗಿಯೇ ಚೆನ್ನಮ್ಮ ತನ್ನ ಬಾಣದಿಂದ ಹುಲಿ ಸತ್ತಿದೆಯೆಂದು ವಾದಿಸುತ್ತಿರಬೇಕೆಂದುಕೊಂಡನು. ಅವಳ ಗಾಂಭೀರ್ಯಕ್ಕೆ ಶೌರ್ಯಕ್ಕೆ ಮಾರುಹೋದ ಅರಸನು ಅವಳಿಗೆ ಸಂಪೂರ್ಣವಾಗಿ ಮನಸೋತನು. ಅವಳೊಡನೆಯ ಆ ನಂತರ ನಡೆಸಿದ ಸಂಭಾಷಣೆಯಿಂದ ಅವಳು ಧೂಳಪ್ಪಗೌಡ ದೇಸಾಯಿಯ ಮಗಳೆಂಬುದು ತಿಳಿದು, ಅವನಿಗೆ ಅತ್ಯಂತ ಹರ್ಷವಾಯಿತು. ತಾನು ಅವಳ ತಂದೆಯನ್ನು ಕಾಣಲು ಬಂದ ವಿಚಾರ ಅವಳಿಗೆ ತಿಳಿಸಿದನು. ಕೊಂದ ಹುಲಿಯನ್ನು ಒಯ್ಯಬಹುದೆಂದು ಒಪ್ಪಿ, ಅವಳ ಶೌರ್ಯವನ್ನು ಕೊಂಡಾಡಿದನು. ಅವನು ಮಲ್ಲಸರ್ಜನೆಂಬ ವಿಷಯ ತಿಳಿದು ಚೆನ್ನಮ್ಮ ಗಾಬರಿಗೊಂಡರೂ, ಅವನ ಮಾತುಗಳಿಂದ ಚೇತರಿಸಿಕೊಂಡಳು. ಅವನ ಪ್ರಶಂಸೆಯ ಮಾತುಗಳನ್ನು ನಾಚಿಕೆಯ ನಗೆಯಿಂದ ಸ್ವೀಕರಿಸಿದಳು. ಮಲ್ಲಸರ್ಜ ಮರುದಿನ ತಮ್ಮ ಮನೆಗೆ ಬರುವ ವಿಷಯ ತಿಳಿದು ಆಕೆ ತುಂಬ ಸಂತೋಷ ಪಟ್ಟಳು. ಚೆಲುವನೂ, ಆಕರ್ಷಕ ವ್ಯಕ್ತಿತ್ವವುಳ್ಳವನೂ ಆದ ಮಲ್ಲಸರ್ಜ ಚೆನ್ನಮ್ಮನ ಮನಸ್ಸಿನಮೇಲೆ ಅಷ್ಟರಲ್ಲಿಯೇ ತನ್ನ ಪ್ರಭಾವವನ್ನು ಬೀರಿದ್ದನು. ತಾನು ಮರುದಿವಸ ಅವನಿಗಾಗಿ ಕಾಯುತ್ತಿರುವುದಾಗಿ ಹೇಳಿ, ಚೆನ್ನಮ್ಮ ಅವನ ಅಪ್ಪಣೆ ಪಡೆದು ಮನೆಗೆ ತೆರಳಿದಳು.

ಮರುದಿನ ಮಲ್ಲಸರ್ಜನು ಧೂಳಪ್ಪಗೌಡರ ಮನೆಗೆ ಹೋಗಿ ಮೊಟ್ಟಮೊದಲು ತನ್ನ ಯೋಜನೆಗಳ ಬಗ್ಗೆ ಚರ್ಚೆ ಮಾಡಿದನು. ಬ್ರಿಟಿಷ, ಫ್ರೆಂಚ ಮತ್ತು ಪೋರ್ಚುಗೀಸರಂತಹ ಪರಕೀಯರ ದಾಳಿಯನ್ನು ಎದುರಿಸಲು, ದಕ್ಷಿಣದ ಎಲ್ಲ ಸಂಸ್ಥಾನಿಕರು ತಮ್ಮಲ್ಲಿಯ ಭಿನ್ನಾಭಿಪ್ರಾಯಗಳನ್ನು ಮರೆತು ಒಂದಾಗುವ ಅವಶ್ಯಕತೆಯನ್ನು ಬಿಂಬಿಸಿದನು. ಎಂಥ ದುರ್ಧರ ಪ್ರಸಂಗ ಬಂದರೂ ಅದನ್ನು ಎದುರಿಸುವ ಶಕ್ತಿಯು ಇಂಥ ಐಕ್ಯತೆಯಿಂದ ಮಾತ್ರ ಸಾಧ್ಯ ಎಂಬುದನ್ನು ಆತನು ದೇಸಾಯಿಯ ಮನಸ್ಸಿನ ಮೇಲೆ ಬಿಂಬಿಸಲೆತ್ನಿಸಿದನು. ಆಮೇಲೆ ತಾನು ಆತನ ಮಗಳಾದ ಚೆನ್ನಮ್ಮನನ್ನು ಅಕಸ್ಮಾತ್ ಭೆಟ್ಟಿಯಾದ ವಿಷಯ ಪ್ರಸ್ತಾಪಿಸಿ, ಅವರ ಒಪ್ಪಿಗೆಯಿದ್ದರೆ ಅವಳನ್ನು ಮದುವೆಯಾಗುವುದಾಗಿ ಸೂಚಿಸಿದನು. ಮಲ್ಲಸರ್ಜ ದೊರೆಯಂಥ ದೊಡ್ಡ ಸಂಸ್ಥಾನಿಕನ ಬೀಗತನ ಮಾಡುವುದು ಒಂದು ಸೌಭಾಗ್ಯವೆಂದು

ಭಾವಿಸಿದ ಧೂಳಪ್ಪಗೌಡ ಸಂತೋಷದಿಂದ ಒಪ್ಪಿಕೊಂಡನು. ಮಲ್ಲಸರ್ಜನನ್ನು ಚೆನ್ನಮ್ಮ ತಮ್ಮ ವಾಡೆಯಲ್ಲಿ ಮತ್ತೊಮ್ಮೆ ಭೆಟ್ಟಿಯಾದಳು. ಆಗ ಮಲ್ಲಸರ್ಜನು ತನಗೆ ಆಗಲೇ ಮದುವೆಯಾಗಿ, ರಾಣಿ ರುದ್ರಮ್ಮನೆಂಬ ಶೂರ ಹಾಗೂ ಪ್ರತಿಭಾನ್ವಿತಳಾದ ಹೆಂಡತಿ ಇರುವುದಾಗಿ ಅವಳಿಗೆ ಹೇಳಿದನು. ಚೆನ್ನಮ್ಮನು ಇದನ್ನು ಕೇಳಿ ಆತಂಕಪಟ್ಟುಕೊಳ್ಳಲಿಲ್ಲ. ಅವಳು ಅವನ ಎರಡನೆಯ ಹೆಂಡತಿಯಾಗಲು ಸಿದ್ಧಳಾಗಿದ್ದಳು. ಅಂದಿನ ಕಾಲದಲ್ಲಿ ರಾಜಮನೆತನಗಳಲ್ಲಿ ಬಹುಪತ್ನಿತ್ವ ಪ್ರಚಲಿತವಾಗಿತ್ತು. ಅವಳು ರಾಣಿ ರುದ್ರಮ್ಮನನ್ನು ತನ್ನ ಹಿರಿಯಕ್ಕನಂತೆ ಗೌರವ ವಾತ್ಸಲ್ಯಗಳಿಂದ ಕಂಡು, ಅವಳೊಂದಿಗೆ ಹೊಂದಿಕೊಂಡು ಹೋಗುವುದಾಗಿ ಆಶ್ವಾಸನವಿತ್ತಳು. ಅವಳನ್ನು ಎಂದಿಗೂ ದುಃಖಿಯನ್ನಾಗಿ ಮಾಡುವುದಿಲ್ಲ ವೆಂದು ವಚನಕೊಟ್ಟಳು. ಕೆಲವೇ ದಿನಗಳಲ್ಲಿ ಕಾಕತಿಯಲ್ಲಿ ಮದುವೆಯಾಯಿತು. ಅದಾದನಂತರ ಒಂದೆರಡು ದಿನಗಳಲ್ಲಿ ಮಲ್ಲಸರ್ಜ ಕಿತ್ತೂರಿಗೆ ಮರಳಿದನು. ಅವನು ಕಿತ್ತೂರಿಗೆ ಮರಳಿದಾಗ ಗಂಭೀರ ಹಾಗೂ ವಿವೇಕಯುಕ್ತ ನಡುವಳಿಕೆಯ ಆ ಚೆಲುವ ಯುವತಿ ಚೆನ್ನಮ್ಮ ಅವನೊಡನಿದ್ದಳು.

ಮುಂದಿನ ವರ್ಷಗಳಲ್ಲಿ ಚೆನ್ನಮ್ಮ ತನ್ನ ಮಾತನ್ನು ಚಾಚೂ ತಪ್ಪದೇ ನಡೆಯಿಸಿಕೊಟ್ಟಳು. ರುದ್ರಮ್ಮನನ್ನು ತನ್ನ ಹಿರಿಯಕ್ಕನಂತೆ ಗೌರವ, ಪ್ರೀತಿಗಳಿಂದ ಕಂಡಳು. ಅವಳ ಇಬ್ಬರು ಗಂಡುಮಕ್ಕಳು, ಶಿವಲಿಂಗರುದ್ರ ಸರ್ಜ (ಬಾಪು ಸಾಹೇಬ) ಮತ್ತು ವೀರರುದ್ರ ಸರ್ಜ (ಬಾಬಾ ಸಾಹೇಬ) ಅವರನ್ನು ತನ್ನ ಸ್ವಂತ ಮಗನಾದ ಶಿವಬಸವರಾಜ (ಬಾಳಾ ಸಾಹೇಬ)ನನ್ನು ಕಾಣುವಷ್ಟೇ ಪ್ರೀತಿಯಿಂದ ಕಾಣುತ್ತಿದ್ದಳು. ಅವರಿಗೆ ಯಾವುದರಲ್ಲಿಯೂ ಯಾವುದೇ ತರಹದ ವ್ಯತ್ಯಾಸವನ್ನು ಆಕೆ ಮಾಡಲಿಲ್ಲ. ಅವರೆಲ್ಲರನ್ನು ಅಷ್ಟೇ ಪ್ರೀತಿ ವಿಶ್ವಾಸಗಳಿಂದ ಕಾಣುತ್ತಿದ್ದಳು.

ರಾಣಿ ರುದ್ರಮ್ಮನ ಮಗ ಶಿವಲಿಂಗರುದ್ರ ಸರ್ಜನೇ ಮಲ್ಲಸರ್ಜನ ತರುವಾಯ ಪಟ್ಟಕ್ಕೆ ಬರಬೇಕೆಂದು ಚೆನ್ನಮ್ಮ ಯಾವಾಗಲೂ ಯೋಚಿಸಿದ್ದಳು. ಅವಳೇ ಈ ವಿಚಾರ ಪ್ರಸ್ತಾಪಿಸಿದ್ದಳು. ದೈವವೂ ಅವಳ ಸಂಕಲ್ಪಕ್ಕೆ ಸಹಾಯಮಾಡಿತು. ಅವಳ ಮಗ ಶಿವಬಸವರಾಜ ಸ್ವಲ್ಪ ದಿನಗಳ ಗೋಗದ ನಂತರ ತೀರಿಹೋದನು. ಇನ್ನೊಬ್ಬ ಮಗ ವೀರರುದ್ರ ಸರ್ಜನೂ ಕೆಲವು ವರ್ಷಗಳಲ್ಲಿ ತೀರಿಹೋದನು. ಮಲ್ಲಸರ್ಜನ ತರುವಾಯ ಕಿತ್ತೂರಿನ ಸಂಸ್ಥಾನಕ್ಕೆ ಉತ್ತರಾಧಿಕಾರಿಯಾಗಿ ಶಿವಲಿಂಗರುದ್ರ ಸರ್ಜ ಮಾತ್ರ ಬದುಕಿದ್ದನು.

ರಾಣಿ ರುದ್ರಮ್ಮ ವಿದ್ಯಾವಂತಳೂ, ಸಾಹಿತ್ಯ ಇತ್ಯಾದಿ ಓದಿಕೊಂಡವಳೂ ಆಗಿದ್ದಳು. ರಾಣಿ ಚೆನ್ನಮ್ಮ ರಾಜ್ಯಭಾರದ ಜವಾಬ್ದಾರಿ ವಹಿಸಿಕೊಂಡ ನಂತರ ಅವಳು ಧರ್ಮ, ತತ್ವಜ್ಞಾನಗಳಲ್ಲಿ ಹೆಚ್ಚು ಆಸಕ್ತಿ ವಹಿಸತೊಡಗಿದಳು. ಅವಳು ಆಡಳಿತ ಹಾಗೂ ಸಾರ್ವಜನಿಕ ಜೀವನದಿಂದ ದಿನೇ ದಿನೇ ದೂರ ಸರಿಯತೊಡಗಿದಳು. ಧಾರ್ಮಿಕ ಕಾರ್ಯಗಳಲ್ಲಿ ಅವಳು ಹೆಚ್ಚು ವೇಳೆಯನ್ನು ಕಳೆಯತೊಡಗಿದಳು. ಕಲ್ಲುಮಠದ ಸ್ವಾಮಿಗಳು ಅವಳಿಗೆ ಧರ್ಮಗ್ರಂಥಗಳ ಪ್ರವಚನ ಮಾಡುತ್ತಿದ್ದರು. ಮಲಪ್ರಭಾ ದಂಡೆಯಮೇಲೆ ಸಂಗೊಳ್ಳಿ ಯೆಂಬ ಹಳ್ಳಿಯಲ್ಲಿ ತನಗಾಗಿ ಒಂದು ಸಣ್ಣ ಕುಟೀರವನ್ನು ಕಟ್ಟಿಕೊಂಡು ಅಲ್ಲಿಯೇ ಪೂಜೆ

ಪುನಸ್ಕಾರಗಳಲ್ಲಿ ಆಕೆ ಕಾಲಕಳೆಯತೊಡಗಿದಳು. ಕಿತ್ತೂರಿನ ಅರಮನೆ ವಿಷಯ ಹಾಗೂ ಕಿತ್ತೂರ ರಾಜ್ಯ ಆಡಳಿತದ ವಿಷಯಗಳನ್ನು ಆಕೆ ಚೆನ್ನಮ್ಮನಿಗೆ ಬಿಟ್ಟುಕೊಟ್ಟಳು. ಚೆನ್ನಮ್ಮ ಎಲ್ಲ ವಿಷಯಗಳ ಜವಾಬ್ದಾರಿಯನ್ನು ಆಸಕ್ತಿಯಿಂದ ವಹಿಸಿಕೊಂಡು ಎಲ್ಲರೂ ಮೆಚ್ಚುವಂತೆ ಅವುಗಳನ್ನು ನಿರ್ವಹಿಸತೊಡಗಿದಳು.

ಚೆನ್ನಮ್ಮನಿಗೆ ರಾಜ್ಯಭಾರದಲ್ಲಿ ಅತುಲ ಆಸಕ್ತಿಯಿದ್ದಿತ್ತು. ರಾಜ್ಯದಲ್ಲಿ ಯಾರಿಂದಲೇ ಆಗಲಿ ಅನ್ಯಾಯ ಅಥವಾ ದುರ್ಬಲರ ಶೋಷಣೆ ನಡೆದದ್ದು ಕಂಡರೆ ಆಕೆ ಸಿಡಿಮಿಡಿಗೊಳ್ಳುತ್ತಿದ್ದಳು. ಅವಳಿಗೆ ಕ್ರೂರತನವನ್ನು ಕಂಡರೆ ಆಗುತ್ತಿರಲಿಲ್ಲ. ಅವಳು ಅತ್ಯಂತ ದಯಾಮಯಿ. ಈ ಗುಣಗಳಿಂದ ಆಕೆ ತನ್ನ ಗಂಡ ಮಲ್ಲಸರ್ಜನಷ್ಟೇ ಅಲ್ಲ ಎಲ್ಲ ಜನತೆಯ ಪ್ರೀತಿ, ವಿಶ್ವಾಸ, ಮೆಚ್ಚುಗೆಗಳಿಗೆ ಪಾತ್ರಳಾಗಿದ್ದಳು. ಮರಾಠಾ ಹಾಗೂ ಬ್ರಿಟಿಷರ ನಿರಂತರ ಹೋರಾಟದಲ್ಲಿ ಗಾಸಿಯಾಗುತ್ತಿದ್ದ ಕಿತ್ತೂರಿನ ಆಡಳಿತದ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿ ಅವಳು ಗಂಡ ಮಲ್ಲಸರ್ಜನಿಗೆ ನೆರವಾಗತೊಡಗಿದಳು ಹೀಗಾಗಿ ರಾಜ್ಯದ ರಾಜಕೀಯ ಚಟುವಟಿಕೆಗಳಲ್ಲಿ ಅವಳು ಸಂಪೂರ್ಣಭಾಗಿಯಾಗತೊಡಗಿದ್ದಳು. ಮಲ್ಲಸರ್ಜನನ ಎಲ್ಲ ಯುದ್ಧ ಹಾಗೂ ರಾಜಕೀಯ ದ್ಯೂತ ಪ್ರವಾಸಗಳಲ್ಲಿ ಅವಳು ಅವನೊಡನೆ ಇರುತ್ತಿದ್ದಳು. ಅವನು ರಾಜ್ಯದ ಸಮಸ್ಯೆಗಳನ್ನು ಚರ್ಚಿಸುವ ದರ್ಬಾರಿನ ಸಭೆಗಳಲ್ಲಿ ಆಕೆ ಹಾಜರಿರುತ್ತಿದ್ದಳು. ಅವಳು ಎಲ್ಲ ದೃಷ್ಟಿಯಿಂದ ತನ್ನ ಗಂಡನ ಮಿತ್ರಳೂ, ತತ್ವಜ್ಞಾನಿಯೂ, ಮಾರ್ಗದರ್ಶಕಳೂ ಆಗಿದ್ದಳೆಂದರೂ ಸಲ್ಲುವುದು. ಈ ಕಾರಣಗಳಿಂದಾಗಿ ಮಲ್ಲಸರ್ಜ ತೀರಿಕೊಂಡೊಡನೆ, ಸ್ವಾಭಾವಿಕವಾಗಿಯೇ ರಾಜ್ಯಭಾರ ಅವಳ ಕೈಯಲ್ಲಿ ಬಂದಿತು. ಅವಳಾದರೂ ಯಾವ ಪ್ರಯಾಸವಿಲ್ಲದೇ ಅದನ್ನು ವಹಿಸಿಕೊಳ್ಳಲು ಶಕ್ತಳಾದಳು. ಅವಳು ರಾಜಕೀಯದಲ್ಲಿಯ ಬೆಳವಣಿಗೆ ಹಾಗೂ ವಿದ್ಯಮಾನಗಳನ್ನು ಬಹಳ ಸೂಕ್ಷ್ಮದೃಷ್ಟಿಯಿಂದ ಯಾವಾಗಲೂ ನೋಡುತ್ತಿದ್ದಳು. ಸುತ್ತಲಿನ ರಾಜಕೀಯ ಪರಿಸ್ಥಿತಿಯ ಪರಿಜ್ಞಾನ ಅವಳಿಗಿದ್ದಿತು. ಧೈರ್ಯ ಮತ್ತು ಮುಂದಾಲೋಚನೆಯುಳ್ಳ ಚೆನ್ನಮ್ಮನ ಕೈಯಲ್ಲಿ ಕಿತ್ತೂರಿನ ಭವಿಷ್ಯ ಸುಭದ್ರವಾಗಿತ್ತು. ಅವಳು ಕಿತ್ತೂರಿನ ಜನತೆಯನ್ನು ಪ್ರೀತಿಸುತ್ತಿದ್ದಳು. ಅವರೊಡನೆ ಬೆರೆತು ಅವರ ಸಮಸ್ಯೆಗಳನ್ನು ಕಷ್ಟಕಾರ್ಪಣ್ಯಗಳನ್ನು ಅರಿತುಕೊಳ್ಳುತ್ತಿದ್ದಳು. ಅವಶ್ಯವಿದ್ದಾಗ ಆಕೆ ಕೂಡಲೇ ನಿರ್ಣಯ ತೆಗೆದುಕೊಳ್ಳುತ್ತಿದ್ದಳು. ಅವನ್ನು ಕಾರ್ಯರೂಪದಲ್ಲಿ ತರಲು ಅವಳು ಹಿಂತೆಗೆಯುತ್ತಿರಲಿಲ್ಲ. ಬಡವ ಹಾಗೂ ದುರ್ಬಲರಿಗೆ ಸಹಾಯ ಮಾಡುವುದರಲ್ಲಿ ಆಕೆ ಯಾವಾಗಲೂ ಮುಂದಾಗಿರುತ್ತಿದ್ದಳು. ತನ್ನ ಸರದಾರರು ಹಾಗೂ ಸೈನ್ಯದೊಡನೆ ಅತ್ಯಂತ ಸಮೀಪದ ಸಂಪರ್ಕವಿಟ್ಟುಕೊಂಡಿದ್ದಳು. ಸೈನಿಕರ ಶೌರ್ಯ ಹಾಗೂ ಸಾಹಸ ಕೃತ್ಯಗಳನ್ನು ಕೂಡಲೇ ಮೆಚ್ಚಿ ಅವರಿಗೆ ತಕ್ಕ ಪ್ರೋತ್ಸಾಹ ಹಾಗೂ ಉದಾರವಾಗಿ ಹಣದ ಬಹುಮಾನಗಳನ್ನು ಕೊಡುತ್ತಿದ್ದಳು. ಚೆನ್ನಮ್ಮ ಹೀಗೆ ಮಲ್ಲಸರ್ಜನನ ಮರಣದ ತರುವಾಯ ಎರಡು ವರ್ಷಗಳ ಕಾಲ ರಾಜ್ಯಭಾರದ ಹಡಗನ್ನು ಸುರಕ್ಷಿತವಾಗಿ ನಡೆಸಿಕೊಂಡು ಬಂದಳು. ಶಿವಲಿಂಗರುದ್ರ ಸರ್ಜ ಕೇವಲ ಹೆಸರಿಗೆ ಮಾತ್ರ ಕಿತ್ತೂರಿನ ದೊರೆಯಾಗಿದ್ದನು.

# 5. ದತ್ತಕ ಸಮಸ್ಯೆ

ಕಿತ್ತೂರಿನ ಆಂತರಿಕ ಆಡಳಿತದಲ್ಲಿ ಕೈಹಾಕಿ ಅದನ್ನು ಕಬಳಿಸಿ ತಮ್ಮ ರಾಜ್ಯದಲ್ಲಿ ಸೇರಿಸಿಕೊಳ್ಳಲು ಒಂದು ಒಳ್ಳೇ ಅವಕಾಶಕ್ಕಾಗಿ ಬ್ರಿಟಿಷರು ಕಾಯುತ್ತಿದ್ದರು. ಕಿತ್ತೂರಿನ ಸಂಸ್ಥಾನದಲ್ಲಿ ನಡೆಯುವ ಎಲ್ಲ ಘಟನೆಗಳನ್ನು ಅವರು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದರು. ಹಲವು ವರ್ಷಗಳಿಂದ ಶಿವಲಿಂಗರುದ್ರ ಸರ್ಜನ ಆರೋಗ್ಯ ಹದಗೆಟ್ಟಿತ್ತು. ಅವನು ಕೇವಲ ಹೆಸರಿಗೆ ಮಾತ್ರ ಕಿತ್ತೂರಿನ ದೊರೆಯಾಗಿದ್ದನು. ರಾಣಿ ಚೆನ್ನಮ್ಮನೇ ಕಿತ್ತೂರಿನ ರಾಜ್ಯವಾಳಿದಂತಿತ್ತು. ಶಿವಲಿಂಗರುದ್ರನ ಪ್ರಕೃತಿಯ ಬಗ್ಗೆ ವಿಚಾರಿಸಿ ಸಹಾನುಭೂತಿ ತೋರಿಸಲು ಥ್ಯಾಕರೆ 1824ರ ಮೇ 18ರಂದು ಕಿತ್ತೂರಿಗೆ ಭೇಟಿಯಿತ್ತನು. ಶಿವಲಿಂಗರುದ್ರನಿಗಾಗಿ ಹಲವು ಔಷಧಗಳನ್ನು ಆತನು ತಂದಿದ್ದನು. ಆ ಭೇಟಿಯ ಸಮಯದಲ್ಲಿ ಕಿತ್ತೂರ ರಾಜ್ಯದ ಆಡಳಿತದ ಅನೇಕ ವಿಷಯಗಳ ಬಗ್ಗೆ ಆತನು ಚರ್ಚಿಸಿದನು. ಅಷ್ಟರಲ್ಲಿ ಶಿವಲಿಂಗರುದ್ರ ಸರ್ಜ ದತ್ತಕ ತೆಗೆದುಕೊಳ್ಳಲು ನಿರ್ಣಯ ತೆಗೆದುಕೊಂಡಿದ್ದರೂ, ಆ ವಿಷಯದ ಬಗ್ಗೆ ಥ್ಯಾಕರೆನ ಕೂಡ ಪ್ರಸ್ತಾಪ ಮಾಡಲಿಲ್ಲ. ಅದಕ್ಕೆ ಕಾರಣಗಳಿದ್ದವು. ತನ್ನ ಇಬ್ಬರೂ ತಮ್ಮಂದಿರರು ಚಿಕ್ಕ ವಯಸ್ಸಿನಲ್ಲಿಯೇ ತೀರಿಹೋಗಿದ್ದರು. ಮತ್ತು ತನಗೂ ಮಕ್ಕಳಾಗಿರಲಿಲ್ಲ. ತನ್ನ ನಂತರ ಯಾರು ಕಿತ್ತೂರಿನ ಪಟ್ಟಕ್ಕೆ ಬರಬೇಕೆಂಬುದು ಅವನ ಮನಸ್ಸನ್ನು ಕಾಡುತ್ತಿತ್ತು. ಥ್ಯಾಕರೇನ ಕೂಡ ವಿಷಯ ಪ್ರಸ್ತಾಪಮಾಡಿದರೆ ಏನೆಲ್ಲ ತೊಂದರೆಗಳು ಉದ್ಭವಿಸಬಹುದೆಂಬ ಯೋಚನೆಯಿಂದ ಆ ವಿಷಯವನ್ನು ಆತನ ಕೂಡ ಚರ್ಚಿಸುವಾಗ ಪ್ರಸ್ತಾಪಿಸಲಿಲ್ಲ.

ಅದಾದನಂತರ ಶಿವಲಿಂಗರುದ್ರ ಸರ್ಜನ ಪ್ರಕೃತಿ ಮತ್ತೆ ಕ್ಷೀಣಿಸತೊಡಗಿತು. ಜೂನ್ ತಿಂಗಳಲ್ಲಿ ಅವನ ಪ್ರಕೃತಿ ಹದಗೆಟ್ಟಿತು. ತನ್ನ ಕೊನೆ ಸಮೀಪಿಸಿತೆಂದು ಭೀತಿ ಅವನಿಗುಂಟಾಯಿತು. ಆದಕಾರಣ ತನ್ನ ನಂಬಿಗಸ್ಥ ಮಂತ್ರಿ, ಸರದಾರರನ್ನು ಕರೆಯಿಸಿಕೊಂಡು ಒಬ್ಬ ಹುಡುಗನನ್ನು ದತ್ತಕ ತೆಗೆದುಕೊಳ್ಳುವ ವಿಚಾರವನ್ನು ಪ್ರಸ್ತಾಪಿಸಿದನು. ಈ ಸಂದರ್ಭದಲ್ಲಿ ಕನ್ನೂರ ಮಲ್ಲಪ್ಪ, ಕನ್ನೂರ ವೀರಪ್ಪ, ಸುಬೇದಾರ ಮಲ್ಲಪ್ಪ ಮತ್ತು ಸರದಾರ ಗುರುಸಿದ್ದಪ್ಪ ಹಾಜರಿದ್ದರು. ಶಿವಲಿಂಗರುದ್ರ ಸರ್ಜ ಗುರುಸಿದ್ದಪ್ಪನನ್ನು ಸಿಂಧೋಳಿ, ಮರಿಕಟ್ಟಿ, ಖುದಾನಪುರ ಮತ್ತು ಶಹಪುರ ತಾಲ್ಲೂಕಿನಲ್ಲಿಯ ಮಾಸ್ತಮರಡಿಗೆ ಮತ್ತು ಸುಬೇದಾರ ಮಲ್ಲಪ್ಪನನ್ನು ಮುರಗೋಡ ಚಿಕೋಸ ಗ್ರಾಮಕ್ಕೂ ಹೋಗಿ, ಕಿತ್ತೂರ ಮನೆತನದ ಸಂಬಂಧಿಕರ ಪೈಕಿ ಯೋಗ್ಯರಾದ 4-5 ಹುಡುಗರನ್ನು ಕರೆದುಕೊಂಡು ಬರಲು ಕಳಿಸಿಕೊಟ್ಟನು.

ಅವರಲ್ಲಿ ಒಬ್ಬನನ್ನು ಆರಿಸಿ ದತ್ತಕಕ್ಕೆ ತೆಗೆದುಕೊಳ್ಳಬೇಕೆಂದು ಆತನು ಯೋಚಿಸಿದನು. ಆ ಪ್ರಕಾರ ಗುರುಸಿದ್ದಪ್ಪ ಸಿಂಧೋಳಿ, ಮಾಸ್ತಮರಡಿಗಳಿಗೆ ತೆರಳಿ ಅಲ್ಲಿಂದ ನಾಲ್ಕು ಹುಡಗರನ್ನು ಕರೆತಂದನು. ಚಿಕ್ಕಸಗ್ರಾಮದಲ್ಲಿಯ ಎಲ್ಲ ಕಿತ್ತೂರಿನ ಸಂಬಂಧಿಕರ ಮಕ್ಕಳೂ ಆಗಲೇ ಹೆಚ್ಚು ವಯಸ್ಕರಾಗಿದ್ದರಿಂದ ಆತನು ಯಾರನ್ನೂ ಕರೆದುಕೊಂಡು ಬರಲಿಲ್ಲ. ಗುರುಸಿದ್ದಪ್ಪ ತಂದ ನಾಲ್ಕು ಹುಡುಗರ ಪೈಕಿ ಶಿವಲಿಂಗರುದ್ರ ಸರ್ಜನು ಮಾಸ್ತಮರಡಿ ಬಾಳಪ್ಪಗೌಡನ ಮಗ ಶಿವಲಿಂಗಪ್ಪನನ್ನು ಆರಿಸಿಕೊಂಡನು. ಹುಡುಗ ಸದೃಢನಾಗಿದ್ದ ಮತ್ತು ಸ್ಫುರದ್ರೂಪಿಯೂ, ಚುರುಕು ಬುದ್ಧಿಯವನೂ ಆಗಿದ್ದ. ತನ್ನ ಕೊನೆ ಸಮೀಪಿಸಿದೆಯೆಂದು ತನಗೆ ಅನಿಸಿದೊಡನೆ ತನ್ನ ನಿರ್ಧಾರವನ್ನು ಪ್ರಕಟಿಸುವುದಾಗಿ ಆತನು ಹೇಳಿದನು. ಮಾಸ್ತಮರಡಿ ಬಾಳಪ್ಪಗೌಡರಿಗೆ ಪತ್ರವೊಂದನ್ನು ಬರೆದು, ಶಿವಲಿಂಗಪ್ಪನನ್ನು ದತ್ತಕ ತೆಗೆದುಕೊಳ್ಳುವ ತನ್ನ ನಿರ್ಧಾರವನ್ನು ಆತನಿಗೆ ತಿಳಿಸಿದನು. ಮರಾಠಿಯಲ್ಲಿ ಬರೆದ ಅವನ ಆ ಪತ್ರದ ಸಾರ ಹೀಗಿದೆ:

"ನನಗೆ ಸ್ವಂತ ಮಕ್ಕಳಿಲ್ಲ. ನಾವು ನಿಮ್ಮ ಮಗ ಶಿವಲಿಂಗಪ್ಪನನ್ನು ಇಲ್ಲಿಗೆ ಕರೆತಂದು ಅವನನ್ನು ದತ್ತಕ ತೆಗೆದುಕೊಳ್ಳಬೇಕೆಂದು ನಿರ್ಧರಿಸಿದ್ದೇವೆ. ಈಗ ನನ್ನ ಆರೋಗ್ಯವೂ ಸರಿಯಾಗಿಲ್ಲ. ಆದಕಾರಣ ಈ ಪತ್ರಮುಟ್ಟಿದ ಕೂಡಲೇ ನಿಮ್ಮ ಮಗನನ್ನು ಕರೆದುಕೊಂಡು ಬರಬೇಕು. ಅವನನ್ನು ದತ್ತಕ ತೆಗೆದುಕೊಂಡು ರಾಜಮುದ್ರೆತೊಡಿಸಿ ಅವನಿಗೆ ಸಂಸ್ಥಾನವನ್ನು ಒಪ್ಪಿಸುತ್ತೇವೆ. ನಮ್ಮ ಹಿರಿಯ ಅಣ್ಣ-ತಮ್ಮಂದಿರ ಮನೆತನಗಳಲ್ಲಿ ನೀವೇ ಅತೀ ಸಮೀಪದ ಬಾಂಧವರು."

ತನ್ನ ಸಮೀಪದ ಬಂಧುಗಳಲ್ಲಿ ಹಲವರನ್ನು ತನ್ನ ವಿಶ್ವಾಸಕ್ಕೆ ತೆಗೆದುಕೊಂಡು ಅವರಿಗೆ ಮಾತ್ರ ಈ ವಿಷಯವನ್ನು ಆತನು ತಿಳಿಯಪಡಿಸಿದನು. ದರ್ಬಾರದಲ್ಲಿ ಗುಂಪುಗಳಿದ್ದವು. ಅದರಲ್ಲಿಯ ಹಲವು ಬಂಧುಗಳು ತಮ್ಮ ಮಕ್ಕಳನ್ನು ದತ್ತಕ ಕೊಡಲು ಹಾತೊರೆಯುತ್ತಿದ್ದರು. ಆದಕಾರಣ ಶಿವಲಿಂಗರುದ್ರ ಸರ್ಜನಿಗೆ ಹುಡಗನನ್ನು ದತ್ತಕ ತೆಗೆದುಕೊಳ್ಳುವ ತನ್ನ ನಿರ್ಣಯವನ್ನು ಪ್ರಕಟಗೊಳಿಸಲು ಇಚ್ಛೆಯಿರಲಿಲ್ಲ. ಇದು ಗೊತ್ತಾದರೆ ಅವರಲ್ಲಿ ಮನಸ್ತಾಪವುಂಟಾಗಿ ಆಡಳಿತದಲ್ಲಿ ತೊಂದರೆಗಳನ್ನುಂಟುಮಾಡಲು ಅವರು ಯತ್ನಿಸಬಹುದೆಂದು ಆತನಿಗೆ ಹೆದರಿಕೆಯಿತ್ತು. ಅಲ್ಲಿ ನೆರೆದ ಬಂಧುಗಳ ಹತ್ತಿರ ಆ ಹುಡುಗನನ್ನು ಕೈ ಹಿಡಿದು ಕರೆದುಕೊಂಡು ಬಂದು ಅವರಿಗೆ "ಈ ಹುಡುಗ ನನಗೆ ಎಲ್ಲ ರೀತಿಯಿಂದ ಯೋಗ್ಯನಾದ ಉತ್ತರಾಧಿಕಾರಿಯಾಗಬಲ್ಲನೆಂದು ಅನಿಸುತ್ತದೆ. ಆದಕಾರಣ ಅವನು ನನ್ನ ಪಶ್ಚಾತ್ ಪಟ್ಟಕ್ಕೆ ಬರಬೇಕೆಂದು ನಾನು ಇಚ್ಛಿಸಿದ್ದೇನೆ. ಇದಕ್ಕೆ ನಿಮ್ಮ ಅನುಮೋದನೆ ಹಾಗೂ ಒಪ್ಪಿಗೆಯನ್ನು ಬೇಡುತ್ತೇನೆ" ಎಂದು ಬಿನ್ನವಿಸಿದನು ನೆರೆದ ಸರದಾರರು ಹಾಗೂ ಬಂಧುಗಳು ಇದಕ್ಕೆ ಒಪ್ಪಿಗೆಯನ್ನಿತ್ತರು. ಅದಾದನಂತರ ಹುಡಗನನ್ನು ಕಿತ್ತೂರಿಗೆ ಕರೆತಂದು ಅರಮನೆಯಲ್ಲಿಯೇ ಇರುವ ವ್ಯವಸ್ಥೆ ಮಾಡಲಾಯಿತು. ರಾಜ್ಯಾಡಳಿತದ ವಿಷಯಗಳ ಪರಿಚಯ ಆತನಿಗೆ ಆಗುವಂತೆ ಅನುಕೂಲತೆಗಳನ್ನು ಕಲ್ಪಿಸಿ ಕೊಡಲಾಯಿತು. ಮತ್ತೆ ಕೆಲದಿನ ಹೀಗೆಯೇ ಕಳೆದವು. ಮತ್ತೆ ಜುಲೈ ಮೊದಲನೆಯ ವಾರದಲ್ಲಿ ಶಿವಲಿಂಗರುದ್ರ ಸರ್ಜನ ಆರೋಗ್ಯ ತೀವ್ರ ಹದಗೆಡತೊಡಗಿತು. 1824 ನೆಯ ಜುಲೈ 10 ನೆಯ ದಿನಾಂಕ ಶಿವಲಿಂಗರುದ್ರ ಸರ್ಜ

ಥ್ಯಾಕರೆನಿಗೆ ತನ್ನ ದತ್ತಕದ ನಿರ್ಧಾರವನ್ನು ತಿಳಿಸುವ ಉದ್ದೇಶದಿಂದ ಸುದೀರ್ಘ ಪತ್ರವೊಂದನ್ನು ಸಿದ್ಧಪಡಿಸಿದನು. ಅದರಲ್ಲಿ ಶಿವಲಿಂಗಪ್ಪನನ್ನು ತಾನು ದತ್ತಕ ತೆಗೆದುಕೊಳ್ಳುವ ನಿರ್ಧಾರವನ್ನು ಸ್ಪಷ್ಟವಾಗಿ ನಮೂದಿಸಿದನು. ಇಂಗ್ಲಿಷಿನಲ್ಲಿ ಬರೆದ ಪತ್ರದ ಪೂರ್ತಿಪಾಠ ಈ ಕೆಳಗಿನಂತಿದೆ:

"ನಾನು ರೋಗದಿಂದ ಬಳಲುತ್ತಿದ್ದು, ಬಹಳ ಕ್ಷೀಣವಾಗಿರುವುದರಿಂದ, ಸಂಸ್ಥಾನಕ್ಕೆ ಉತ್ತರಾಧಿಕಾರಿಯನ್ನು ನೇಮಿಸಲು ಇಚ್ಛಿಸಿದ್ದೇನೆ. ಈ ಉದ್ದೇಶಕ್ಕಾಗಿ ನಾನು (ಸವಾಯಿ) ಮಲ್ಲಸರ್ಜ (ದತ್ತಕ ತೆಗೆದುಕೊಂಡ ಈ ಹುಡುಗನ ಹೆಸರು ಮೊದಲಿಗೆ ಮಾಸ್ತಮರಡಿಯ ಶಿವಲಿಂಗಪ್ಪ ಎಂದು ಇದ್ದಿತು) ಈತನನ್ನು ಹುಬ್ಬಳಿಯ ನಾಡಗೌಡ, ಅಝುಮ್ ನಗರ ಸುರುಫ್, ಖಾನಾಪುರ ಸುರುಫ್, ಚಂದಗಡ ಸುರುಫ್ ಸುಪಾ ಸುರುಫ್ ಇವುಗಳ ಸರ ದೇಸಾಯಿ ಸರ ದೇಶಪಾಂಡೆ ಎಂತಲೂ ಸಂಸ್ಥಾನದ ಉತ್ತರಾಧಿಕಾರಿಯೆಂತಲೂ ನೇಮಿಸಿ ರಾಜಮುದ್ರೆಯಿಂದ ಭದ್ರಪಡಿಸಿದ್ದೇನೆ.

"ಆದ ಕಾರಣ ನಮ್ಮ ಪೂರ್ವಜರು ಹಾಗೂ ನಾನು ತಮ್ಮ ಅಂತಃಕರಣದ ಕಾರಣದಿಂದ ರಾಜ್ಯಭಾರ ನಡೆಸಿದ ಸಂಸ್ಥಾನವನ್ನು ಮುಂದುವರಿಸುವುದು ನಿಮ್ಮ ಔದಾರ್ಯವನ್ನೇ ಕೂಡಿದೆ."

ಇದಾದ ನಂತರ, ದೈವವಶಾತ್ ಶಿವಲಿಂಗರುದ್ರ ಸರ್ಜನ ಪ್ರಕೃತಿ ಮತ್ತೆ ಸ್ವಲ್ಪ ಸುಧಾರಿಸತೊಡಗಿತು. ಆದಕಾರಣ ಈ ಪತ್ರವನ್ನು ಕೂಡಲೇ ಥ್ಯಾಕರೆನಿಗೆ ಕಳಿಸಿಕೊಡಲಿಲ್ಲ. ಇದಾದ ನಂತರ ಸುಮಾರು ಎರಡು ತಿಂಗಳ ಕಾಲ ಅವನ ಆರೋಗ್ಯ ಸಾಧಾರಣವಾಗಿಯೇ ಇತ್ತು. ಆದರೆ ಸಪ್ಟೆಂಬರ ಮೊದಲನೆಯ ವಾರದಲ್ಲಿ ಅವನ ಆರೋಗ್ಯ ಮತ್ತೆ ಕೆಡತೊಡಗಿತು. 1824 ರ ಸೆಪ್ಟೆಂಬರ 11 ನೆಯ ದಿನ ಅವನ ಆರೋಗ್ಯ ತೀರ ಚಿಂತಾಜನಕವಾಗಿ ಅವನಿಗೆ ತನ್ನ ಕೊನೆ ಸಮೀಪಿಸಿತೆಂದು ಖಾತ್ರಿಯಾಯಿತು. ಅಂದೇ ಮಧ್ಯಾಹ್ನ ತನ್ನ ಸರದಾರರೆಲ್ಲರನ್ನೂ, ಬಂಧುಗಳನ್ನೂ ಕರೆಯಿಸಿ ದತ್ತಕ ಸಮಾರಂಭವನ್ನು ನೆರವೇರಿಸಲು ಆಜ್ಞೆ ಮಾಡಿದನು. ಅವನ ಆಜ್ಞೆಗನುಸಾರವಾಗಿ ಹುಡಗನನ್ನು ಮಂಗಳಸ್ನಾನ ಇತ್ಯಾದಿ ವಿಧಿಗಳ ನಂತರ, ದೇಸಾಯಿಯ ರಾಜಮುದ್ರೆ ಇತ್ಯಾದಿ ವೈಭವಗಳಿಂದ ಅಲಂಕರಿಸಲಾಯಿತು. ಅವನಿಗೆ 'ಸವಾಯಿ ಮಲ್ಲಸರ್ಜ'ನೆಂಬ ಅಭಿದಾನವನ್ನಿತ್ತು, ಕಿತ್ತೂರ ರಾಜ್ಯದ ಸರ್ವಾಧಿಕಾರವನ್ನು ಪಡೆದ ಉತ್ತರಾಧಿಕಾರಿಯೆಂದು ಅಧಿಕಾರ ನೀಡಲಾಯಿತು.[1]

ರಾಣಿ ಚೆನ್ನಮ್ಮನಿಗೆ ಕಿತ್ತೂರಿನ ಭವಿಷ್ಯದ್ದೆ ಚಿಂತೆ. ಅವಳಿಗೆ ಥ್ಯಾಕರೆನ ದುಷ್ಟ ಉದ್ದೇಶಗಳ ಬಗೆಗೆ ಸಂದೇಹವಿದ್ದಿತು. ಇದಲ್ಲದೆ ಕಿತ್ತೂರಿನ ದರ್ಬಾರದಲ್ಲಿಯೇ ಇದ್ದ ಖನ್ನೂರ ಮಲ್ಲಪ್ಪ ಮುಂತಾದವರಂತಹ ಕುಹಕ ದ್ರೋಹಿಗಳ ಮೋಸಕೃತ್ಯಗಳ ಬಗೆಗೂ ಸಂಶಯ ಇದ್ದೇ ಇತ್ತು. ಕಿತ್ತೂರಿನ ಆಂತರಿಕ ಆಡಳಿತದಲ್ಲಿ ಥ್ಯಾಕರೇನಿಂದ ಯಾವ ರೀತಿಯ ಹಸ್ತಕ್ಷೇಪವೂ ಆಕೆಗೆ

---

1. ಈ ಸಮಾರಂಭದ ವರ್ಣನೆ ಬೈಲಹೊಂಗಲದ ಶ್ರೀ ಭಾವೆಪ್ಪ ಮೂಗಿಯವರ ಖಾಸಗಿ ಸಂಗ್ರಹದಲ್ಲಿನ ಮರಾಠಿಯಲ್ಲಿ ಬರೆಯಲ್ಪಟ್ಟ ಪತ್ರವೊಂದರಲ್ಲಿದೆ.

ಬೇಕಿರಲಿಲ್ಲ. ಚೆನ್ನಮ್ಮ ಕೂಡಲೇ ಖನ್ನೂರ ಮಲ್ಲಪ್ಪ, ಸರದಾರ ಮಲ್ಲಪ್ಪಶೆಟ್ಟಿ ಮುಂತಾದ ಧುರೀಣರನ್ನೂ, ಗುರುಸಿದ್ದಪ್ಪ, ಹಿಮ್ಮತ್ ಸಿಂಗ, ನರಸಿಂರಾವ, ಗುರುಪುತ್ರ, ವೀರಪ್ಪ ಮುಂತಾದ ಸರದಾರರನ್ನು ಕರೆಕಳಿಸಿದಳು. ಆಗ ಅವರೆಲ್ಲರಿಗೂ, ತಮ್ಮ ತಮ್ಮಲ್ಲಿಯ ಎಲ್ಲ ಭಿನ್ನಭೇದಗಳನ್ನು ಮರೆತು, ಕಿತ್ತೂರ ಸಂಸ್ಥಾನಕ್ಕೆ ತಮ್ಮ ವಿಧೇಯತೆ ಹಾಗೂ ರಾಜನಿಷ್ಠೆಯನ್ನು ತೋರಿಸಿ, ಕಿತ್ತೂರು ಎದುರಿಸುತ್ತಿದ್ದ ದುರ್ಧರ ಪ್ರಸಂಗದಲ್ಲಿ ಅದರ ರಕ್ಷಣೆಗೆ ಒಗ್ಗಟ್ಟಿನಿಂದ ಮುಂದಾಗಬೇಕೆಂದು ಕಳಕಳಿಯಿಂದ ಬಿನ್ನವಿಸಿದಳು. ಅವಳ ಕಳಕಳಿಯ ಮಾತುಗಳು ನೆರೆದ ಎಲ್ಲರ ಹೃದಯಗಳನ್ನು ಮುಟ್ಟಿದವು. ಅವರು ಅವಳ ಮಾತಿಗೆ ಉತ್ಸಾಹದಿಂದ ಒಪ್ಪಿಕೊಂಡು ಅಂದು ನಡೆದ ದತ್ತಕ ಸಮಾರಂಭದಲ್ಲಿ ಪಾಲುಗೊಂಡರು. ಆದರೆ ಅಂದು ನೆರೆದ ಜನರಲ್ಲಿ ಖನ್ನೂರ ಮಲ್ಲಪ್ಪ ಹಾಗೂ ವೆಂಕಟರಾಯ ಹಾಜರಿದ್ದು, ಅವರೆಲ್ಲರೊಡಗೂಡಿ ಕೈಕೊಂಡ ಸಮಾರಂಭದಲ್ಲಿ ಭಾಗಿಗಳಾಗಿದ್ದರೂ, ಅವರ ಮನಸ್ಸಿನ ಆಳದಲ್ಲಿದ್ದ ದುಷ್ಟ ವಿಚಾರಗಳನ್ನು ಅವರು ಬಿಟ್ಟುಕೊಟ್ಟಂತೆ ಕಾಣಲಿಲ್ಲ. ಸಮಾರಂಭ ಮುಗಿದೊಡನೆ, ಅವರ ದುಷ್ಟ ಸ್ವಭಾವದ ಬಗೆಗೆ ಅವಳಿಗೆ ಗೊತ್ತಿದ್ದರೂ, ಅವರಲ್ಲಿ ನಂಬಿಗೆಯನ್ನು ವ್ಯಕ್ತಪಡಿಸುವ ಉದ್ದೇಶದಿಂದ, ದತ್ತಕ ವಿಷಯವಾಗಿ ಶಿವಲಿಂಗರುದ್ರ ಸರ್ಜ ಬರೆದ ಪತ್ರವನ್ನು ಥ್ಯಾಕರೆಗೆ ಮುಟ್ಟಿಸಲೆಂದು ಚೆನ್ನಮ್ಮ ಖನ್ನೂರ ಮಲ್ಲಪ್ಪನ ಕೈಯಲ್ಲಿ ಕೊಟ್ಟು, ಸರದಾರ ಮಲ್ಲಪ್ಪನೊಂದಿಗೆ ಹೋಗಿ ಅವರಿಗೆ ಮುಟ್ಟಿಸಲು ಹೇಳಿ ಕಳಿಸಿದಳು. ಆ ಹೊತ್ತಿನ ದತ್ತಕ ಸಮಾರಂಭದಲ್ಲಿ ಭಾಗವಹಿಸಿದ ಅವರು, ಕಿತ್ತೂರಿನ ಈ ವಿಪತ್ತಿನ ಸಮಯದಲ್ಲಿಯಾದರೂ ಕಿತ್ತೂರಿಗೆ ಸ್ವಾಮಿಭಕ್ತರಾಗಿ ನಡೆದುಕೊಂಡು, ಕಿತ್ತೂರ ಸಂಸ್ಥಾನವನ್ನು ಉಳಿಸಲು ಸಹಾಯಕರಾಗಬಹುದೆಂದು ಅವಳು ನಂಬಿದ್ದಳು. ಈ ಸಮಾರಂಭ ಮುಗಿದ ನಂತರ, ಕೇವಲ 12 ಘಂಟೆಗಳಕಾಲ ಶಿವಲಿಂಗರುದ್ರ ಸರ್ಜನು ಬದುಕಿದ್ದನು. ಅಂದಿನ ಬೆಳಗಿನ ಜಾವ ಅಂದರೆ 1824ರ ಸೆಪ್ಟೆಂಬರ 12 ನೆಯ ತಾರೀಖು ಮುಂಜಾನೆ 4 ಗಂಟೆಗೆ ಆತನು ಮರಣಹೊಂದಿದನು. ಖನ್ನೂರ ಮಲ್ಲಪ್ಪ ಹಾಗೂ ಸರದಾರ ಮಲ್ಲಪ್ಪ ತಾವು ತೆಗೆದುಕೊಂಡುಹೋಗಿದ್ದ ಪತ್ರವನ್ನು ಅವರು ಥ್ಯಾಕರೇಗೆ 12 ನೆಯ ತಾರೀಖು ಮುಂಜಾನೆ ಮುಟ್ಟಿಸಿದರು. ಆ ಪತ್ರದ ಮೇಲೆ 1824 ಜುಲಾಯಿ 10ನೆಯ ತಾರೀಖು ಎಂದು ಬರೆದಿದ್ದಿತು. ಈ ಪತ್ರದ ಬಗ್ಗೆ ಅವನಿಗೆ ಸಂದೇಹವುಂಟಾಯಿತು. ಈ ಪತ್ರ ಬೇರೆಯವರಿಂದ ಬರೆಯಲ್ಪಟ್ಟಿರಬೇಕು. ಸಂಸ್ಥಾನವನ್ನು ಉಳಿಸಿಕೊಳ್ಳುವ ಉದ್ದೇಶದಿಂದ, ಶಿವಲಿಂಗರುದ್ರ ಸರ್ಜ ರೋಗದ ಉಲ್ಬಣಾವಸ್ಥೆಯಲ್ಲಿ ಅವನ ವಿಚಾರ ಶಕ್ತಿ ಕಳೆದುಕೊಂಡ ಸ್ಥಿತಿಯಲ್ಲಿ ಆತನ ಸಹಿ ಪಡೆದಿರಬೆಕು ಎಂದು ಸಂದೇಹಪಟ್ಟ. ಆತನು ಕೂಡಲೇ ಧಾರವಾಡದ ಸಿವಿಲ್ ಸರ್ಜನ್‌ನಾದ ಡಾ॥ ಜಿ. ಎಚ್. ಬೆಲ್‌ನನ್ನು ಕರೆಕಳಿಸಿ, ಕೂಡಲೇ ಕಿತ್ತೂರಿಗೆ ಹೋಗಿ, ಶಿವಲಿಂಗರುದ್ರ ಸರ್ಜನ ದೇಹಸ್ಥಿತಿಯ ಬಗ್ಗೆ ವರದಿಮಾಡಲು ಕಳುಹಿಸಿಕೊಟ್ಟನು. ಅವನ ಆಜ್ಞೆಯ ಪ್ರಕಾರ ಕಿತ್ತೂರಿಗೆ ಹೋಗಿ ತಾನು ಕಂಡ ಸಂಗತಿಯ ಬಗ್ಗೆ ಆತನು ವರದಿ ಮಾಡಿದನು. 1824ರ ಸೆಪ್ಟೆಂಬರ 12ನೆಯ ತಾರೀಖಿನಂದು ಮಾಡಿದ ಅವನ ವರದಿಯ ಸಾರ ಹೀಗಿದೆ:

ಇಂದ,

ಜಿ. ಎಚ್. ಬೆಲ್, ಎಸ್ಕ್ವಾಯರ

ಧಾರವಾಡದ ಫಸ್ಟ್ ಸರ್ಜನ್

ಗೆ,

ಧಾರವಾಡದ ಪೊಲಿಟಿಕಲ್ ಏಜೆಂಟ್

ಥ್ಯಾಕರೆ ಎಸ್ಕ್ವಾಯರ್ ಅವರಿಗೆ

ಸರ್,

ತಮ್ಮ ಅಪೇಕ್ಷೆಯಂತೆ ನಾನು 12ನೆಯ ತಾರೀಖಿನ ದಿನ ಕಿತ್ತೂರಿಗೆ ದೇಸಾಯಿಯವರನ್ನು ಕಾಣಲು ಹೋಗಿದ್ದೆ.

ಕಿತ್ತೂರು ಸುಮಾರು ಎರಡು ಮೈಲು ದೂರದಲ್ಲಿರುವಾಗ, ನನಗೊಬ್ಬ ಕುದುರೆ ಸವಾರ ಭೆಟ್ಟಿಯಾದನು. ಅವನು 'ರಾಜರು ತೀರಿಕೊಂಡರು' ಎಂದು ಹೇಳಿದನು. ಯಾವ ಸ್ಥಿತಿಯಲ್ಲಿ ಮೃತದೇಹವನ್ನು ಕಂಡೆನೆಂಬುದನ್ನು ನಿಮಗೆ ತಿಳಿಸಲು ನಾನು ಶಕ್ತನಾಗಿರುವುದು ವಿಹಿತವೆಂದು ತಿಳಿದು ನಾನು ಕಿತ್ತೂರಿನವರೆಗೂ ಹೋದೆ. ನಾನು ಕಿತ್ತೂರು ತಲುಪಿದೊಡನೆ (ಆಗ ಮಧ್ಯಾಹ್ನ 3 ಗಂಟೆ) ರಾಜನ ಮೃತ ಶರೀರವನ್ನು ತೋರಿಸಲು ಬಿನ್ನವಿಸಿಕೊಂಡೆ. ತೆರೆದ 'ದಿವಾನ್ ಖಾನೆ'ಯಲ್ಲಿ ಅವನ ಮೃತ ಶರೀರ ಎಲ್ಲ ತರಹದ ಬಟ್ಟೆ, ಆಭರಣಗಳಿಂದ ಅಲಂಕರಿಸಲ್ಪಟ್ಟು, ಎಲ್ಲರ ದರ್ಶನಕ್ಕಾಗಿ ಇಡಲ್ಪಟ್ಟಿತ್ತು. ಆ ಮೃತದೇಹದಿಂದ ಕೊಳೆತ ವಾಸನೆಯೇನಾದರೂ ಬರುತ್ತಿದೆಯೇ ಎಂಬುದನ್ನು ನನಗೆ ಪರೀಕ್ಷಿಸುವುದಾಗಲಿಲ್ಲ. ಆದರೆ ಮೃತಶರೀರದ ಸೂಕ್ಷ್ಮ ವೀಕ್ಷಣೆಯಿಂದ ಮತ್ತು ಅದಕ್ಕೆ ಬಟ್ಟೆ ಬದಲಾಯಿಸುವುದಕ್ಕೆ, ಆಭರಣ ತೊಡಿಸುವುದಕ್ಕೆ ಹಾಗೆ ಹೊರಗೆ ತಂದು ನಾನು ಕಂಡ ಸ್ಥಿತಿಯಲ್ಲಿ ಅದನ್ನು ಇಟ್ಟು ಅಲಂಕರಿಸುವುದಕ್ಕೆ ಬೇಕಾಗಿರಬಹುದಾದ ಸಮಯದ ಬಗ್ಗೆ ವಿಚಾರಿಸಿದಾಗ, ನನಗೆ ನಾನು ಅಲ್ಲಿ ಮುಟ್ಟಿದ ವೇಳೆಗಿಂತ ಸ್ವಲ್ಪ ಸಮಯ ಮೊದಲೇ ರಾಜ ಸತ್ತಿರಬೇಕೆಂದು ಅನಿಸುತ್ತದೆ. ಮಹಲಿನ ಪ್ರಾಂಗಣವೆಲ್ಲ ಎಲ್ಲ ತರಹದ ದೇಶೀಯರಿಂದ ತುಂಬಿಹೋಗಿತ್ತು ಮತ್ತು ಮೃತಶರೀರವನ್ನು ನೋಡಲಿಕ್ಕೆ ಎಲ್ಲ ಜನರಿಗೂ ಮುಕ್ತಪ್ರವೇಶವಿದ್ದಂತೆ ಕಂಡುಬಂದಿತ್ತು.

ಧಾರವಾಡ

17 ಸಪ್ಟೆಂಬರ, 1824

ನಿಮ್ಮ

ಸಹಿ. ಜಿ. ಎಚ್. ಬೆಲ್

ಫಸ್ಟ್ ಸರ್ಜನ್

ಧಾರವಾಡ.

ಶಿವಲಿಂಗರುದ್ರ ಸರ್ಜನ ಪತ್ರದಲ್ಲಿ ಕಂಡುಬಂದ ತಾರೀಖಿನ ವಿಪರ್ಯಾಸವಷ್ಟೇ ಥ್ಯಾಕರೆಗೆ ಸಾಕಾಯಿತು. ಪತ್ರದಲ್ಲಿ ಕಾಣಿಸಿದ ವಿಷಯಗಳ ಸತ್ಯಾಸತ್ಯತೆಗಳ ಬಗೆಗೇ ಆತನು ಶಂಕಿಸತೊಡಗಿದನು. ಈ ಸದವಕಾಶದ ಪೂರ್ಣ ಪ್ರಯೋಜನವನ್ನು ಪಡೆಯಬೇಕೆಂದು ಆತನು ಕಾರ್ಯೋನ್ಮುಖನಾದನು. ಶಿವಲಿಂಗರುದ್ರ ಸರ್ಜ ತೀರಿಕೊಂಡ ಎರಡೇ ದಿನಗಳ

ನಂತರ ಅಂದರೆ ಸಪ್ಟೆಂಬರ 14ನೆಯ ದಿನಾಂಕ ಕಿತ್ತೂರಿಗೆ ಆತನು ಬಂದನು. ಅರಮನೆಯನ್ನೆಲ್ಲ ಶೋಧ ಮಾಡಿಸಿದನು. ರಾಜಮನೆತನದವರನ್ನು ಹಾಗೂ ಅಧಿಕಾರಿಗಳಿಗೆಲ್ಲ ಬೆದರಿಕೆ ಹಾಕಿ, ಕಿತ್ತೂರನ್ನು ಬ್ರಿಟಿಷರರಾಜ್ಯದ ವಶಕ್ಕೆ ತೆಗೆದುಕೊಳ್ಳಲು ಬೇಕಾದ ಪೂರ್ವತಯಾರಿ ಮಾಡತೊಡಗಿದನು. ಅದೇ ದಿವಸ ಅವನು ಡೆಕ್ಕನ್ನದ ಕಮಿಷನರ ಚಾಪ್ಲಿನ್‌ನಿಗೆ ಬರೆದ ಈ ಕೆಳಗಿನ ಪತ್ರದಿಂದ ಅವನ ಮನಸ್ಸಿನ ವಿಚಾರಸರಣಿ ಹೇಗಿತ್ತೆಂಬ ಬಗ್ಗೆ ನಿಜವಾದ ಕಲ್ಪನೆ ಬರುತ್ತದೆ, ಅಲ್ಲದೆ ಬಹಳ ದಿವಸಗಳಿಂದ ಆತನು ಇಟ್ಟುಕೊಂಡಿದ್ದ ಉತ್ಕಟ ಬಯಕೆಯನ್ನು ಪೂರೈಸಲು, ಆತನು ಹಮ್ಮಿಕೊಂಡ ಕಾರ್ಯಕ್ರಮದ ಬಗ್ಗೆ ತಿಳುವಳಿಕೆಯುಂಟಾಗುತ್ತದೆ. ಆ ಪತ್ರದ ಪೂರ್ತಿಪಾಠ ಇಂತಿದೆ:

ಸರ್,

ಸಪ್ಟೆಂಬರ 12 ನೆಯ ದಿನದಂದು ಮಧ್ಯಾಹ್ನ ಕಿತ್ತೂರಿನ ಮುಖ್ಯ ಸೇವಕರಲ್ಲಿ ಒಬ್ಬನಾದ ಕನ್ನೂರ ಮಲ್ಲಪ್ಪಶೆಟ್ಟಿ ನನ್ನನ್ನು ಭೆಟ್ಟಿಯಾದನು. ಅವನು ತನ್ನ ಒಡೆಯ ಸಾಯುತ್ತಿರುವುದಾಗಿ ಹೇಳಿ, ದತ್ತಕ ಮಗನನ್ನು ಸ್ವೀಕರಿಸಿದ ವಿಷಯವನ್ನು ತಿಳಿಸುವ ಪತ್ರವನ್ನು ಆತನು ನನಗೆ ಮುಟ್ಟಿಸಿದನು. ಈ ಪತ್ರದಲ್ಲಿ ಜುಲೈ 10 ನೆಯ ತಾರೀಖು ಎಂದು ಬರೆಯಲಾಗಿದ್ದು, ದತ್ತಕ ಆಗಲೇ ತೆಗೆದುಕೊಳ್ಳಲಾಗಿದೆಯೆಂದು ಅದರಲ್ಲಿ ಬರೆಯಲಾಗಿದೆ.

2. 12ನೆಯ ತಾರೀಖಿನಂದು ತಾನು ಕಿತ್ತೂರು ಬಿಟ್ಟಾಗ ಆಗಲೇ ದೇಸಾಯಿ ಸ್ಮೃತಿಹೀನ ಸ್ಥಿತಿಯಲ್ಲಿದ್ದನೆಂತಲೂ, ದತ್ತಕ ಸಮಾರಂಭ ಅಂದು ಮುಂಜಾನೆ ನಡೆಯಿತೆಂತಲೂ ಆ ಸಮಾರಂಭದ ದ್ಯೋತಕವಾಗಿ ತೋಪಿನ ವಂದನೆ ಸಲ್ಲಿಸಲಾಯಿತೆಂದೂ ಮಲ್ಲಪ್ಪನು ಹೇಳಿದನು.

3. ದೇಸಾಯಿಯ ಸಾವಿನ ಬಗ್ಗೆ ಅನೇಕ ತರಹದ ವರದಿಗಳನ್ನು ಕೇಳಿ, ವಿಧಿಯುಕ್ತವಾದ ದತ್ತಕ ಸಮಾರಂಭ ನಡೆಯಲಿಲ್ಲವೆಂದು ನಂಬಲಿಕ್ಕೆ ಸಾಕಷ್ಟು ಕಾರಣಗಳಿದ್ದದರಿಂದ, ನಾನು ಮಲ್ಲಪ್ಪನನ್ನು – ಸಿವಿಲ್ ಸರ್ಜನ್‌ನನ್ನು ಕಳಿಸಿ, ಅವನ ದೇಹಸ್ಥಿತಿಯ ಬಗ್ಗೆ ತಿಳಿದುಕೊಳ್ಳುವುದು ಸೂಕ್ತವೆಂದು ಒಪ್ಪಿಸಿ – ಅವನು ಒಪ್ಪಿಗೆ ಕೊಟ್ಟಮೇಲೆ ಮಿ॥ ಬೆಲ್‌ನಿಗೆ ಕಿತ್ತೂರಿಗೆ ಹೋಗಲು ನಾನು ಆಜ್ಞೆಯಿತ್ತೆ. ಆತನು ಕೂಡಲೇ ಅಲ್ಲಿಗೆ ಹೋದನು. ಆಗಲೇ ಕಿತ್ತೂರಿನ ಒಡೆಯ ತೀರಿಹೋದ ಸಂಗತಿಯನ್ನು ಆತನು ವರದಿಮಾಡಿದನು. ಹೆಣದ ಲಕ್ಷಣದ ಪ್ರಕಾರ ಮಲ್ಲಪ್ಪ ಕಿತ್ತೂರನ್ನು ಬಿಡುವ ಮೊದಲೇ ದೇಸಾಯಿ ಸತ್ತಿದ್ದನೆಂದು ನಂಬಲು ಸಾಕಷ್ಟು ಕಾರಣಗಳಿವೆ. ಆದರೆ, ದತ್ತಕ ತೆಗೆದುಕೊಳ್ಳಲು ದೇಸಾಯಿ ಪರವಾನಿಗೆಗೆ ಅರ್ಜಿ ಮಾಡಿದ್ದರೂ, ಆತ ಪರವಾನಿಗೆ ಕೊಟ್ಟರೂ ಕೂಡ ದತ್ತಕ ತೆಗೆದುಕೊಳ್ಳುವ ಸ್ಥಿತಿಯಲ್ಲಿದ್ದನೋ ಇಲ್ಲವೋ ಎಂಬುದು ಸಂದೇಹಾಸ್ಪದವಾಗಿದೆ.

4. ಮೇ ತಿಂಗಳಲ್ಲಿ ನಾನು ಕೊಲ್ಲಾಪುರದಿಂದ ಮರಳಿದಾಗ, ದೇಸಾಯಿ ನನಗೆ ಹಲವು ಔಷಧ ಕಳಿಸಲು ಕೇಳಿದ್ದನಷ್ಟೇ ಅಲ್ಲ, ನಾನು ಧಾರವಾಡಕ್ಕೆ ಹೋಗುವಾಗ ಕಿತ್ತೂರಿಗೂ ಭೆಟ್ಟಿ ಕೊಡಬೇಕೆಂದು ಬಿನ್ನವಿಸಿಕೊಂಡಿದ್ದನು. ನಾನು ಅವನ ಬಿನ್ನಹದ ಪ್ರಕಾರ 18 ರಂದು ಭೆಟ್ಟಿ

ಕೊಟ್ಟೆ. ಆ ದಿನ ನಾನು ಅವನೊಡನೆ ಬಹಳ ಹೊತ್ತು ಮಾತನಾಡಿದೆ. ಆತನ ಆರೋಗ್ಯ ಅಷ್ಟೊಂದು ಸರಿಯಾಗಿರದಿದ್ದರೂ ಆತನು ರಾಜ್ಯದ ಅನೇಕ ವಿಷಯಗಳ ಬಗೆಗೆ ನಿಸ್ಸಂಕೋಚವಾಗಿ ಮಾತನಾಡಿದನು. ಆದರೆ ದತ್ತಕ ವಿಷಯದ ಬಗ್ಗೆ ಆತನು ಚಕಾರ ಶಬ್ದವನ್ನೂ ಎತ್ತಲಿಲ್ಲ.

5. ದೇಸಾಯಿಯ ಅನುಯಾಯಿಗಳಲ್ಲಿರುವ ಹೊಂಚುಗಾರಿಕೆಯ ಬಗ್ಗೆ ನನಗೆ ಮೊದಲಿನಿಂದಲೇ ತಿಳಿದಿತ್ತು. ಅವರ ಒಡೆಯ ದತ್ತಕ ಮಾಡಿಕೊಳ್ಳದೇ ಮರಣಹೊಂದಿದರೆ ಅವನ ಅನುಯಾಯಿಗಳು, ಸರಕಾರದ ಪರವಾನಿಗೆ ಅವಶ್ಯವಿದೆಯೆಂಬುದು ಈ ವಿಷಯವಾಗಿ ಹೊರಡಿಸಲಾದ ಸರಕಾರದ ಪ್ರಕಟನೆಯ ಬಗ್ಗೆ ಗೊತ್ತಿರಲಿಲ್ಲ ಎಂದು ವಾದಿಸಬಹುದೆಂದು ನನಗೆ ಸಂದೇಹವಿದ್ದಿತು. ಆದ ಕಾರಣ ನಾನು ಆರು ವಾರಗಳ ಹಿಂದೆಯೇ ಎಲ್ಲ ಮುಖ್ಯ ರಾಜರ ಹಾಗೂ ದೇಸಾಯಿಯವರ ವಕೀಲರ ಸಮ್ಮುಖದಲ್ಲಿ ಪ್ರಕಟನೆಯನ್ನು ಉಳಿದ ಹಲವು ಫರ್ಮಾನುಗಳೊಂದಿಗೆ ಮತ್ತೊಮ್ಮೆ ಅವರೆಲ್ಲರ ಲಕ್ಷಕ್ಕೆ ತಂದೆನು. ದತ್ತಕವು ಶಾಸನಬದ್ಧವಾಗಲು ಅನುಸರಿಸಬೇಕಾದ ಎಲ್ಲ ಸಂಗತಿಗಳ ಬಗ್ಗೆ ಸಂಬಂಧಿಸಿದ ಎಲ್ಲರಿಗೂ ತಿಳಿದಿರ ಬೇಕೆಂಬುದೇ ನನ್ನ ಉದ್ದೇಶವಾಗಿತ್ತು.

6. ಪತ್ರ ತಂದ ಕಿತ್ತೂರಿನ ನೌಕರನಿಂದ ದತ್ತಕ ವಿಷಯದ ಬಗ್ಗೆ ಅವರ ಹೇಳಿಕೆಯನ್ನು ಕೇಳಿಕೊಂಡ ನಂತರ, ದತ್ತಕ ನಡೆಯಿತೆಂದು ಹೇಳಲಾದ ದಿನಕ್ಕೂ ಪತ್ರದಲ್ಲಿ ಕಾಣಿಸಲಾದ ತಾರೀಖಿಗೂ ಇರುವ ವ್ಯತ್ಯಾಸದ ಬಗ್ಗೆ ಪ್ರಶ್ನಿಸಿದೆ. ಆ ವ್ಯತ್ಯಾಸದ ಸಂದೇಹವನ್ನು ಮಲ್ಲಪ್ಪ ನಿವಾರಿಸಲು ಯತ್ನಿಸಲಿಲ್ಲ. ನನಗೆ ಬಂದ ವರದಿಗಳಿಂದ ಅವನ ಅನುಯಾಯಿಗಳು ಎಷ್ಟೇ ಒತ್ತಾಯಪಡಿಸಿದರೂ, ಎಂಥ ಮನಸ್ಥಿತಿಯಲ್ಲಿಯೂ ಆತನು ದತ್ತಕಕ್ಕೆ ಒಪ್ಪಿರಲಿಲ್ಲವೆಂಬುದು ಖಚಿತವಾಗಿದೆ. ಅವನು ದತ್ತಕಕ್ಕಾಗಿ ಪರವಾನಿಗೆಗಾಗಿ ಅರ್ಜಿ ಮಾಡಲು ಆತನಿಗೆ ಮನಸ್ಸಿರಲಿಲ್ಲವೆಂದು ಕಾಣುತ್ತದೆ. ಒಂದು ವೇಳೆ ದತ್ತಕ ಸಮಾರಂಭ ನಡೆದದ್ದೇ ಆದರೆ, ಅದು ಅವನು ಸತ್ತನಂತರ, ಇಲ್ಲವೇ ಅವನು ಎಚ್ಚರದಪ್ಪಿದಮೇಲೆಯೇ ನಡೆದಿರಬೇಕು.

7. ಪತ್ರದಲ್ಲಿ ಕಾಣಿಸಲಾದ ಮಗುವು, ಸತ್ತ ದೇಸಾಯಿಯ ದೂರದ ಬಂಧು. ಅವನಾಗಲೀ ಅಥವಾ ಬೇರೆ ಯಾವ ದೇಸಾಯಿಯ ಸಂಬಂಧಿಕರ ಮಗನಾಗಲೀ, ಕಿತ್ತೂರ ಸಂಸ್ಥಾನದ ಪಟ್ಟಕ್ಕೆ ಬಾಧ್ಯಸ್ಥರಾಗುವುದಿಲ್ಲ. ಈ ಹುಡಗನನ್ನು ಆರಿಸಿ, ಅವನನ್ನು ಪಟ್ಟಕ್ಕೆ ಕೂಡಿಸುವ ಉದ್ದೇಶದಿಂದ ದತ್ತಕ ತೆಗೆದುಕೊಳ್ಳಲಾಯಿತೆಂದು ಹೇಳಲಾಗುತ್ತಿದೆ. ಆದರೆ ನಾನು ಹೇಳಿದ ಮೇಲಿನ ಕಾರಣಗಳಿಂದ ಇದು ದೇಸಾಯಿಯ ಅನುಯಾಯಿಗಳು, ತಮ್ಮ ಪ್ರಭಾವವನ್ನು ಮುಂದುವರಿಸಲು ಮಾಡಿದ ಕುತಂತ್ರವೆಂಬುದು ಖಚಿತವಾಗುತ್ತದೆ. ಹಿಂದಿನ ತಾರೀಖು ಇದ್ದ ಈ ಪತ್ರದಲ್ಲಿ ದೇಸಾಯಿಯ ಸಹಿ ಕೂಡ ಚೆನ್ನಾಗಿ ಕಾಣಿಸುವುದಿಲ್ಲ. ಆ ಸಹಿಯ ಅಕ್ಷರಗಳು ಕೂಡ ಬೇರೆಯಾಗಿವೆ. ದೇಸಾಯಿಯ ಹಿಂದಿನ ಪತ್ರಗಳಲ್ಲಿ ಕೈಬರಹ ಬಹಳ ಸುಂದರ ಹಾಗೂ ಸ್ಪಷ್ಟವಾಗಿತ್ತು.

8. ತೀರಿಹೋದ ದೇಸಾಯಿಯ ಮನೆತನದಲ್ಲಿರುವವರೆಂದರೆ ಅವನ ಕೇವಲ 11 ವರುಷದ ವಿಧವೆ ಪತ್ನಿ, ಅವನ ಮಲತಾಯಿ ಮತ್ತು ಅವನ ಅಣ್ಣನ 16 ವರ್ಷದ ವಿಧವೆ

ಪತ್ನಿ, ಉಳಿದ ಬಂಧುಗಳು ದಾಯಾದಿಗಳ ಶಾಖೆಗಳಲ್ಲಿ ಬಹುದೂರದವರಿದ್ದು ಯಾವ ಪೂರ್ವಜನಿಂದ ಈ ಬಂಧುಗಳು ಬಂದವರೆಂಬುದನ್ನು ಕಂಡುಹಿಡಿಯುವುದು ನನಗೆ ಇದುವರೆಗೆ ಸಾಧ್ಯವಾಗಿಲ್ಲ. ಸಂಸ್ಥಾನದ ಪಟ್ಟಕ್ಕೆ ಬಾಧ್ಯಸ್ಥರ ಬಗ್ಗೆ ಸರಕಾರದ ನಿರ್ಧಾರ ಏನೇ ಆದರೂ, ಬಹುದಿನಗಳವರೆಗೆ ಅಲ್ಪಮಯಿಗಳು ಬಾಧ್ಯಸ್ಥರಾಗುವುದರಿಂದ, ನಾನು ಕಿತ್ತೂರಿಗೆ ಹೋಗಿ ದತ್ತಕದ ಬಗ್ಗೆ ಸ್ವತಃ ತನಿಖೆ ನಡಿಸಿ, ಈ ಪರಿಸ್ಥಿತಿಯ ದುರುಪಯೋಗವಾಗದಂತೆ ಹಾಗೂ ಶಾಂತಿ ರಕ್ಷಣೆಯಾಗುವಂತೆ ನೋಡಿಕೊಂಡೆನು. ಈ ನನ್ನ ಕ್ರಮಕ್ಕೆ ನಿಮ್ಮ ಒಪ್ಪಿಗೆ ನೀಡುವಿರೆಂದು ನಂಬಿದ್ದೇನೆ.

9. ಪ್ರಪ್ರಥಮವಾಗಿ ಸರದಾರರು ಮತ್ತು ಬೇರೆ ಬೇರೆ ವಿಭಾಗಗಳ ಮುಖ್ಯಸ್ಥರನ್ನು ಕರೆದು, ಅವರು ತಮ್ಮ ಜವಾಬ್ದಾರಿಯನ್ನು ಅರಿಯುವಂತೆ ತಿಳಿಹೇಳಿ, ದತ್ತಕ ಕಾಯಿದೇಶೀರ ಆಗಿರದೇ ಇರುವುದರಿಂದ ಮತ್ತು ದೇಸಾಯಿಯ ಹೆಂಡತಿ ಅಲ್ಪಮಯಿ ಇರುವುದರಿಂದ, ಕಿತ್ತೂರಿನ ಪಟ್ಟಕ್ಕೆ ಯಾರು ಬರಬೇಕೆಂಬ ವಿಷಯವನ್ನು ಸರಕಾರದ ನಿರ್ಣಯಕ್ಕಾಗಿ ಕೇಳಿಕೊಳ್ಳಲಾಗುವುದು ಎಂದು ಹೇಳಿ, ಅಲ್ಲಿಯವರೆಗೆ ರಾಜ್ಯವನ್ನು ರಕ್ಷಿಸುವುದು ಹಾಗೂ ಅಲ್ಲಿ ಶಾಂತಿಯನ್ನು ಕಾಯ್ದುಕೊಳ್ಳುವುದು ಮತ್ತು ಪ್ರತಿಯೊಬ್ಬನೂ ತನ್ನ ಕರ್ತವ್ಯವನ್ನು ನಿರ್ವಹಿಸುವುದನ್ನು ನೋಡಿಕೊಳ್ಳುವುದು ನನ್ನ ಜವಾಬ್ದಾರಿಯೆಂಬುದನ್ನು ಅವರಿಗೆ ತಿಳಿಸುವುದು ಸೂಕ್ತವೆನಿಸಿತು.

10. ಕಿತ್ತೂರಿನ ಖಜಾನೆಯ ವಿಷಯದಲ್ಲಿ ನನಗೆ ಬೇರೆ ಬೇರೆಯವರಿಂದ ಬೇರೆ ಬೇರೆ ವರದಿಗಳು ಬಂದದ್ದರಿಂದ ಮತ್ತು ಹಣಕಾಸಿನ ಬಗ್ಗೆ ಖಚಿತ ಮಾಹಿತಿ ಸಿಗದೇ ಇದ್ದದ್ದರಿಂದ, ನಾನು ಅರಸುಮನೆತನದ ಮುಖ್ಯ ಸದಸ್ಯರನ್ನೂ ಹಾಗೂ ನೌಕರರನ್ನೂ ವಿಚಾರಿಸಿದೆ. ಅವರೆಲ್ಲರೂ ದೇಸಾಯಿ ಸ್ವತಃ ಎಲ್ಲ ಹಣ ಇಟ್ಟುಕೊಳ್ಳುತ್ತಿದ್ದನೆಂದೂ ಮತ್ತು ಲೆಕ್ಕ ತಾನೇ ಬರೆಯುತ್ತಿದ್ದನೆಂದೂ, ರೊಕ್ಕದ ವಿಷಯದಲ್ಲಿ ಯಾರನ್ನೂ ನಂಬುತ್ತಿರಲಿಲ್ಲವೆಂದೂ ಹೇಳಿದರು. ಅವರು ಒದಗಿಸಿದ ಮಾಹಿತಿ ತೃಪ್ತಿಕರವಾಗಿರಲಿಲ್ಲವಾದ್ದರಿಂದ, ಹಣದ ಲೆಕ್ಕ ತೆಗೆದುಕೊಳ್ಳುವ ವಿಷಯದಲ್ಲಿ ಕಾಲಹರಣ ಮಾಡಬಾರದೆಂದು ನಿರ್ಧರಿಸಿ, ಖಜಾನೆಯ ಕಬ್ಜಾ ತೆಗೆದುಕೊಂಡು, ಸರಕಾರದ ನಿರ್ಣಯ ತಿಳಿಯುವವರೆಗೆ, ಖಜಾನೆಯನ್ನು ಸೀಲಮಾಡಿ, ಎಲ್ಲ ಹಣ ಖಜಾನೆಯಲ್ಲಿ ಉಳಿಯುವಂತೆ ಜಾಗರೂಕತೆ ವಹಿಸುವುದು ಸೂಕ್ತವೆಂದು ನನಗೆನಿಸಿತು.

11. ಕಾರಣ, ನನ್ನೊಡನೆ ಬಂದಿದ್ದ ಸರ್ವಶ್ರೀ ಸ್ಟಿವನ್ಸನ್ ಮತ್ತು ಫ್ರೀರ ಅವರನ್ನು ಕಿತ್ತೂರಿನ ಮುಖ್ಯ ನೌಕರರೊಡನೆ ಹೋಗಿ ಖಜಾನೆಯನ್ನು ಅವರ ಸಮ್ಮುಖದಲ್ಲಿ, ನನ್ನ ಹಾಗೂ ಕಿತ್ತೂರ ದೇಸಾಯಿಯ ಮುದ್ರೆಗಳಿಂದ ಮೊಹರು ಮಾಡಲು ಹೇಳಿದೆ. ನಾನು ಈ ಕ್ರಮ ಕೈಕೊಂಡಿದ್ದರಿಂದ ಬಹಳಷ್ಟು ಹಣ ಪೋಲು ಆಗುವುದನ್ನು ಪ್ರತಿಬಂಧಿಸಲಾಯಿತೆಂದು, ನನಗೆ ಇತ್ತೀಚೆಗೆ ಬಂದ ವರದಿಗಳಿಂದ ಖಚಿತವಾಗಿದೆ. ನನಗೆ ಖಜಾನೆಯಲ್ಲಿದ್ದ ಹಣವನ್ನು ಎಣಿಸುವ ಅವಶ್ಯಕತೆ ಕಾಣಲಿಲ್ಲ. ಕೆಲವು ಟ್ರೇಜರಿಯ ಕೀಲಿಗಳಿಗೆ ಕೈಗಳು ಹತ್ತಲಿಲ್ಲ. ಆದರೆ

ದೇಸಾಯಿಯೇ ಮರಾಠಿಯಲ್ಲಿ ಬರೆದ ಟಿಪ್ಪಣಿಗಳು, ಕೆಲವು ತೆರೆಯದೇ ಇಟ್ಟ ಪೆಟ್ಟಿಗೆಗಳಲ್ಲಿ ಸಿಕ್ಕವು. ಇವುಗಳ ಆಧಾರದಿಂದ, ಖಜಾನೆಯಲ್ಲಿ ಒಟ್ಟು 8 - 9 ಲಕ್ಷ ರೂಪಾಯಿಗಳಿರ ಬೇಕೆಂದು ಅಂದಾಜು ಮಾಡಬಹುದಾಗಿದೆ.

12. ಒಂದು ವರದಿಯ ಪ್ರಕಾರ, ಅರಮನೆಯಲ್ಲಿ ಬಚ್ಚಿಟ್ಟ ನಿಕ್ಷೇಪಗಳಿವೆಯೆಂತಲೂ, ಹಿಂದಿನ ದೇಸಾಯಿಯ ಕಾಲದಲ್ಲಿ ದೊಡ್ಡ ಮೊತ್ತದ ಹಣದ ಸಂಗ್ರಹಗಳನ್ನು ಹುಗಿದಿಡಲಾಗಿದೆಯೆಂದೂ ಹೇಳಲಾಗುತ್ತದೆ. ಆದರೆ ಸಂಸ್ಥಾನದ ಪ್ರಮುಖ ನೌಕರರು ಈ ವರದಿ ನಿರಾಧಾರವಾಗಿರುವುದಾಗಿಯೂ ಹಾಗೂ ಮಲ್ಲಪ್ಪ ಮತ್ತು ಹಿಂದಿನ ದೇಸಾಯಿಯ ತಂದೆಯವರು, ಕೆಲವು ವರ್ಷಗಳ ಹಿಂದೆ ಪುಣೆಯಲ್ಲಿರುವಾಗ 25 ಲಕ್ಷ ರೂಪಾಯಿಗಳನ್ನು ದುಂದು ವೆಚ್ಚಮಾಡಿ ಕಳೆದರೆಂತಲೂ ಹೇಳುತ್ತಾರೆ.

13. ದೇಸಾಯಿಯ ನೌಕರರ ಪ್ರಾಮಾಣಿಕತೆಯ ಬಗ್ಗೆ ಹೇಳುವುದಾದರೆ, ಇಂಥ ಸಂದರ್ಭದಲ್ಲಿ ಸಾಮಾನ್ಯವಾಗಿ ಎಷ್ಟು ಪ್ರಾಮಾಣಿಕತೆಯನ್ನು ನಾವು ನಿರೀಕ್ಷಿಸಬಹುದೋ ಅಷ್ಟು ಪ್ರಾಮಾಣಿಕತೆಯನ್ನು ನಾವು ಕಾಣಬಹುದು. ಆದರೆ ಅವರು ನಂಬಲರ್ಹವಾದ ಒಂದೂ ಸರಿಯಾದ ಲೆಕ್ಕಪತ್ರವನ್ನು ಇದುವರೆಗೆ ಸಾದರಪಡಿಸಿರದಿರುವುದರಿಂದ ಮತ್ತು ಕೆಲವು ಸಂದರ್ಭಗಳಲ್ಲಿ ನನ್ನನ್ನು ಮೋಸಗೊಳಿಸಲು ಯತ್ನಿಸಿದ್ದರಿಂದ ಮತ್ತು ಸಂಸ್ಥಾನದ ಆಡಳಿತ ವಿಷಯಗಳನ್ನು ಕೇವಲ ಅವರ ಕೈಯಲ್ಲಿ ಬಿಟ್ಟರೆ ಅಪಾಯಕರವೆಂದು ಕಂಡು ಬಂದದ್ದರಿಂದ, ನಾನು ಸದ್ಯಕ್ಕೆ ಆಡಳಿತವನ್ನು ಸರಕಾರವನ್ನು ಪ್ರತಿನಿಧಿಸುವ ಒಬ್ಬ ಹಾಗೂ ದೇಸಾಯಿಯ ಮನೆತನವನ್ನು ಪ್ರತಿನಿಧಿಸುವ ಒಬ್ಬ ಹೀಗೆ ಇಬ್ಬರು ಜೊತೆ ಆಡಳಿತಗಾರರ ಮುಖಾಂತರ ನಡೆಸಲು ನಿರ್ಧರಿಸಿದ್ದೇನೆ. ಈ ವ್ಯವಸ್ಥೆ, ಅಧಿಕಾರದ ದುರುಪಯೋಗವನ್ನು ತಡೆಗಟ್ಟಲು ನನಗೆ ಸಹಾಯಕಾರಿಯಾಗುವುದು. ಅಲ್ಲದೆ ಸಂಸ್ಥಾನದ ಹಳೆಯ ಪದ್ಧತಿ ಹಾಗೂ ರೂಢಿಗಳಿಗೆ ವ್ಯತಿರಿಕ್ತವಾಗದಂತೆ, ಸಂಸ್ಥಾನದ ಆಡಳಿತದಲ್ಲಿ ಕೈಹಾಕದಂತೆ ನಡೆಯಿಸಿಕೊಂಡು ಹೋಗಲು ಅನುಕೂಲವಾಗುತ್ತದೆ.

14. ಹೋದ ವರ್ಷದ ನಝರಾಣಾದಲ್ಲಿ ಇನ್ನೂ ಕೊಡಬೇಕಾದ ದೊಡ್ಡ ಮೊತ್ತ ಇದೆ. ಆದರೆ ಖಜಾನೆಯಲ್ಲಿರುವ ನಗದು ಹಣದಿಂದ ಇದನ್ನು ಬೇಕಾದಾಗ ಪಡೆಯಬಹುದು.

15. ಮನೆತನದ ವಂಶಾವಳಿಯ ಬಗ್ಗೆ ಇದುವರೆಗೆ ಸರಿಯಾದ ಮಾಹಿತಿಯನ್ನು ದೊರಕಿಸಲು ನಾನು ಯಶಸ್ವಿಯಾಗಿಲ್ಲ. ಆದರೆ ನಾನು ದೊರಕಿಸಿದ ಎಲ್ಲ ಮಾಹಿತಿಯ ಪ್ರಕಾರ, ಅವನಿಗೆ ಅಣ್ಣ – ತಮ್ಮಂದಿರಾಗಲಿ, ಮಕ್ಕಳಾಗಲಿ ಇಲ್ಲದೇ ಇರುವುದರಿಂದ, ಅವನ ವಿಧವೆ ಪತ್ನಿ ಮಾತ್ರ ವಾರಸುದಾರಳೆಂದು ಪರಿಗಣಿಸಬಹುದಾಗಿದೆ. ಸನದಿನ ಕರಾರುಗಳನ್ವಯ ಇವಳನ್ನು ವಾರಸುದಾರಳೆಂದು ಪರಿಗಣಿಸಬಹುದೇ ಎಂಬುದನ್ನು ನಿರ್ಧರಿಸಲು ಸಾಧ್ಯವಾಗುವುದಕ್ಕಾಗಿ ವಾರಸಾಕ್ಕೆ ಸಂಬಂಧಿಸಿದ ಕರಾರಿನ ಪ್ರತಿಯನ್ನು ಈ ಪತ್ರದ ಸಂಗಡ ಕಳುಹಿಸುತ್ತಿದ್ದೇನೆ.

16. ಇನ್ನು ಸ್ವಲ್ಪವೇ ದಿನಗಳಲ್ಲಿ ಮನೆತನದ ವಂಶಾವಳಿಯನ್ನು ಕಳಿಸಿಕೊಡುತ್ತೇನೆ. ತೀರಿಹೋದ ದೇಸಾಯಿಯ ತಂದೆಯ ಕಾಲದಲ್ಲಿ, ಸಂಸ್ಥಾನದ ವಾರಸಾಕ್ಕೆ ಅಧಿಕಾರವಿದ್ದ ಎಲ್ಲ

ಬಂಧುಗಳು ಕೊಲ್ಲಲ್ಪಟ್ಟರೆಂತಲೂ, ಕಿತ್ತೂರ ಸಂಸ್ಥಾನ, ಅದು ಒಬ್ಬನೇ ಪೂರ್ವಜನ ಕಾಲಕ್ಕೆ ಒಂದು ಸ್ವತಂತ್ರ ಸಂಸ್ಥಾನವಾಗಿತ್ತೆಂದು ಒಪ್ಪಿಕೊಂಡರೂ, ಈಗ ಇರುವ ದಾಯಾದಿಗಳು ಅತಿ ದೂರದ ಸಂಬಂಧಿಕರಾಗಿರುವುದರಿಂದ, ಅವರ್‍ಯಾರಿಗೂ ವಾರಸಾ ಹಕ್ಕು ಇದೆಯೆಂದು ನಾನು ಭಾವಿಸುವುದಿಲ್ಲ.

ಇತಿ

ಕ್ಯಾಂಪ್–ಕಿತ್ತೂರ ಜೆ. ಥ್ಯಾಕರೆ

14 ಸೆಪ್ಟಂಬರ್, 1824

ಥ್ಯಾಕರೆ ಚಾಪ್ಲಿನ್‌ಗೆ ಬರೆದ ಪತ್ರವನ್ನು ಸೂಕ್ಷ್ಮವಾಗಿ ನೋಡಿದರೆ, ಈ ಪೊಲಿಟಿಕಲ್ ಏಜೆಂಟನು ಕಿತ್ತೂರನ್ನು ಬ್ರಿಟಿಷ ರಾಜ್ಯಕ್ಕೆ ಸೇರಿಸಿಕೊಳ್ಳಲು ಏನಾದರೂ ಒಂದು ನೆವ ಹುಡುಕುತ್ತಿದ್ದನೆಂಬುದು ಖಚಿತವಾಗುತ್ತದೆ. ಅವನು ಬರೆದ ಪತ್ರದ 5ನೆಯ ಪರಿಚ್ಛೇದದಲ್ಲಿಯ ಬರವಣಿಗೆಯಿಂದ, ದೇಸಾಯಿ ದತ್ತಕ ತೆಗೆದುಕೊಳ್ಳಬಹುದೆಂಬ ವಿಷಯ ಆತನಿಗೆ ಮೊದಲೇ ತಿಳಿದಿತ್ತೆಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ ಆತನು ಕಿತ್ತೂರಿನ ಸಂಪತ್ತನ್ನು ಆಶಾಪೂರ್ಣ ದೃಷ್ಟಿಯಿಂದ ನೋಡುತ್ತಿದ್ದಾನೆಂಬುದೂ ಕಂಡುಬರುತ್ತದೆ. ಅದಕ್ಕಾಗಿಯೇ ಸಂಸ್ಥಾನದ ಆಡಳಿತಕ್ಕೆ ಸಂಬಂಧಿಸಿದ ಎಲ್ಲರನ್ನೂ ಆತ ಸಂದೇಹದೃಷ್ಟಿಯಿಂದ ನೋಡುತ್ತಿದ್ದನು. ಅವರು ಕಿತ್ತೂರಿನ ಸಂಪತ್ತನ್ನು ದೋಚಬಹುದೆಂಬ ಸಂಶಯ ಅವನಿಗಿದ್ದಿತು. ಚೆನ್ನಮ್ಮ ಅತ್ಯಂತ ಪ್ರತಿಭಾಶಾಲಿ ರಾಣಿಯಾಗಿದ್ದಳೆಂಬುದನ್ನು ಮತ್ತು ರಾಜ್ಯಭಾರವನ್ನು ಅತ್ಯಂತ ಯಶಸ್ವಿಯಾಗಿ ನಡೆಯಿಸಿಕೊಂಡು ಹೊರಟಿದ್ದಳೆಂಬುದನ್ನು ತಿಳಿದಿದ್ದರು. ಥ್ಯಾಕರೆ ಸಂಸ್ಥಾನದ ಒಳಿತಿಗಾಗಿ ಹಾಗೂ ಶಿವಲಿಂಗರುದ್ರ ಸರ್ಜನ ವಿಧವೆ ಪತ್ನಿಯ ರಕ್ಷಣೆಗಾಗಿ ಈ ಎಲ್ಲ ಕ್ರಮಗಳನ್ನು ಕೈಕೊಂಡಂತೆ ನಾಟಕ ಮಾಡತೊಡಗಿದ್ದನು.

8ನೆಯ ಪರಿಚ್ಛೇದದಲ್ಲಿ ಚೆನ್ನಮ್ಮನ ಬಗ್ಗೆ ಉಲ್ಲೇಖಿಸುವಾಗ, ಆತನು ಶಿವಲಿಂಗರುದ್ರ ಸರ್ಜನ ಮಲತಾಯಿಯೆಂದು ಹೇಳುವಾಗ, ಥ್ಯಾಕರೆನ ಮನಸ್ಸಿನ ಕುಹಕತೆಯನ್ನು ಕಾಣಬಹುದು. ರಾಜಮನೆತನದವರಲ್ಲಿ ಭಿನ್ನಾಭಿಪ್ರಾಯಗಳಿದ್ದವೆಂಬುದನ್ನು ಎತ್ತಿ ತೋರಿಸುವುದು ಅವನ ಮುಖ್ಯ ಉದ್ದೇಶವಾಗಿತ್ತು. ಏನಾದರೂ ನೆವಹುಡುಕಿ, ಸಂಸ್ಥಾನದ ಆಡಳಿತವನ್ನು ಕೈಯಲ್ಲಿ ತೆಗೆದುಕೊಳ್ಳುವುದು ಥ್ಯಾಕರೇನ ಉದ್ದೇಶವಾಗಿತ್ತೆಂಬುದು ಈ ಪತ್ರದಿಂದ ನಿಚ್ಚಳವಾಗಿ ಕಂಡುಬರುತ್ತದೆ. ಈ ಪತ್ರದಲ್ಲಿ ಅವನು ತೋರಿಸುವ ಕಾರಣಗಳು ಹಾಗೂ ಎತ್ತಿ ತೋರಿಸುವ ಸಂದಿಗ್ಧತೆಗಳು ಸಂಶಯದ ಮೇಲೆ ಆಧಾರಿತವಾಗಿವೆ. ಅವನ ವಾದಗಳು ಸಂಕ್ಷಿಪ್ತವಾಗಿ ಕೆಳಗೆ ಕಾಣಿಸಿದಂತೆ ಇವೆ:

(1) ಅವನ ಮೊದಲನೆಯ ವಾದ – ದೇಸಾಯಿಗೆ ದತ್ತಕ ತೆಗೆದುಕೊಳ್ಳುವ ವಿಚಾರವೇ ಇರಲಿಲ್ಲ. ಈ ವಾದ ಕೇವಲ ಒಂದು ಸುಳ್ಳು. ಮೇ ತಿಂಗಳಲ್ಲಿ ಥ್ಯಾಕರೆ ಶಿವಲಿಂಗರುದ್ರ ಸರ್ಜನನ್ನು ಭೆಟ್ಟಿಯಾದಾಗ ದತ್ತಕ ತೆಗೆದುಕೊಳ್ಳುವ ತನ್ನ ಇಚ್ಛೆಯನ್ನು ಪ್ರಸ್ತಾಪಿಸದಿದ್ದುದಕ್ಕೆ ಹಿಂದುಗಡೆಗೆ ಕನ್ನೂರ ಮಲ್ಲಪ್ಪ ಹಾಗೂ ಸರದಾರ ಮಲ್ಲಪ್ಪ ಅವರನ್ನು ತರಾಟೆಗೆ

ತೆಗೆದುಕೊಂಡಾಗ, ಶಿವಲಿಂಗರುದ್ರ ಸರ್ಜನು ದತ್ತಕ ತೆಗೆದುಕೊಳ್ಳಲು ಇಚ್ಛಿಸಿದ್ದನೆಂಬುದು ಅವನಿಗೆ ಖಚಿತವಾಗಿ ತಿಳಿದಿದ್ದಿತು.

(2) ಅವನ ಎರಡನೆಯ ವಾದ – ದತ್ತಕ ಸಮಾರಂಭ ನಡೆಯಲೇ ಇಲ್ಲ. ಅದು ದೇಸಾಯಿಯ ಇಚ್ಛೆಯೂ ಆಗಿರಲಿಲ್ಲ ಎಂಬುದು. ಈ ವಾದದಲ್ಲಿಯೂ ಹುರುಳಿಲ್ಲ. ಯಾಕೆಂದರೆ ದತ್ತಕ ಸಮಾರಂಭ ನಡೆಯಿತೆಂಬುದಕ್ಕೆ ಸಾಕಷ್ಟು ಆಧಾರಗಳಿವೆ. ದೇಸಾಯಿ ಇದನ್ನು ಅಪೇಕ್ಷಿಸಿದ್ದನಷ್ಟೇ ಅಲ್ಲ, ಅವನೇ ಸ್ವತಃ ದತ್ತಕ ಸ್ವೀಕಾರ ಮಾಡಿದನೆಂಬುದಕ್ಕೆ ಆಧಾರಗಳಿವೆ. ಈ ಸಮಾರಂಭದ ವಿವರಗಳು ಓರ್ವ ವೀಕ್ಷಕನಿಂದ ಒಂದು ಮರಾಠಿ ಪತ್ರದಲ್ಲಿ ವರ್ಣಿಸಲಾಗಿದೆ. ಸ್ವಲ್ಪ ಕೂಲಂಕಷವಾಗಿ ಘಟನೆಗಳನ್ನು ವೀಕ್ಷಿಸಿದರೆ ಸತ್ಯ ಸಂಗತಿ ಆತನಿಗೆ ತಿಳಿಯುತ್ತಿತ್ತು. ಆದರೆ ದತ್ತಕ ನಡೆಯಲಿಲ್ಲವೆಂದು ನಂಬಲು ಆತ ಆತುರನಾಗಿದ್ದನೆಂದು ಕಾಣುತ್ತದೆ.

(3) ಅವನ ಮೂರನೆಯ ವಾದ – ಒಂದು ವೇಳೆ ದತ್ತಕ ಸಮಾರಂಭ ನಡೆದಿದ್ದರೂ, ಅದು ಕಾಯ್ದೆಶೀರ ಅಲ್ಲ. ಯಾಕೆಂದರೆ ಅದಕ್ಕೆ ಸರಕಾರದ ಪೂರ್ವ ಅನುಮತಿ ಪಡೆದುಕೊಂಡಿರಲಿಲ್ಲ. ಈ ವಾದದಲ್ಲಿ ಯಾವ ಹುರುಳೂ ಇಲ್ಲ. ಕಿತ್ತೂರಿನ ಅರಸರು ಎಲ್ಲ ಆಂತರಿಕ ವಿಷಯಗಳಲ್ಲಿ ಸಂಪೂರ್ಣ ಅಧಿಕಾರ ಹೊಂದಿದ್ದರು. ಆದ್ದರಿಂದ ದತ್ತಕ ವಿಷಯದಲ್ಲಿ ಅವರು ಇಂಥ ಪರವಾನಿಗೆ ತೆಗೆದುಕೊಳ್ಳುವುದು ಅವಶ್ಯವಿರಲಿಲ್ಲ.

ಅವರ ಮನೆತನದ ಪೂರ್ವ ಇತಿಹಾಸದಲ್ಲಿಯೇ, ವೀರಪ್ಪಗೌಡ ಸರದೇಸಾಯಿ ಮಿರಜದಲ್ಲಿ ಬಂಧನದಲ್ಲಿರುವಾಗ ತೀರಿಕೊಳ್ಳಲು, ಅವನ ಹೆಂಡತಿ ಪಾರ್ವತವ್ವ ಅವನ ವಾರಸದಾರನೆಂದು ಮಲ್ಲಸರ್ಜನನ್ನು ದತ್ತಕ ತೆಗೆದುಕೊಂಡ ಉದಾಹರಣೆಯಿದೆ. ಆಗ ಕಿತ್ತೂರಿನ ಅರಸರು ಪೇಶ್ವೆಯರಿಗೆ ಅಧೀನರಾಗಿದ್ದರು. ಆಗ ಕಿತ್ತೂರಿನ ಅರಸರು ಮಲ್ಲಸರ್ಜನನ್ನು ದತ್ತಕ ತೆಗೆದುಕೊಳ್ಳಲಿಕ್ಕೆ ಪೇಶ್ವೆಯವರಿಂದ ಪರವಾನಿಗೆ ತೆಗೆದುಕೊಳ್ಳಲಿಲ್ಲ. 1818 ರಲ್ಲಿ ಸರ್ ಥಾಮಸ್ ಮನ್ರೋನೊಡನೆ ಕಿತ್ತೂರಿನ ಅರಸರು ಒಪ್ಪಂದಕ್ಕೆ ಬಂದಿದ್ದರು. ಆ ಒಪ್ಪಂದದ ಪ್ರಕಾರ, ಕಿತ್ತೂರು ಹಾಗೂ ಪೇಶ್ವೆಯರ ನಡುವೆ ಇದ್ದ ಕರಾರುಗಳ ಮೇಲೆಯೇ ದೇಸಗತಿಯನ್ನು ಮುಂದುವರಿಸಿದ್ದರು. ಈ ಒಪ್ಪಂದದಲ್ಲಿ ರಾಜ್ಯವನ್ನು ಮುಂದುವರಿಸಲು ದತ್ತಕ ತೆಗೆದುಕೊಳ್ಳಲಿಕ್ಕೆ ಪರವಾನಿಗೆ ಅವಶ್ಯಕತೆಯಿರುವುದನ್ನು ಕಾಣಿಸುವ ಯಾವ ಕರಾರೂ ಇರಲಿಲ್ಲ. ಈಸ್ಟ ಇಂಡಿಯಾ ಕಂಪನಿಯು 1854ರವರೆಗೆ ಯಾವುದೇ ಸಂಸ್ಥಾನದ ರಾಜಮನೆತದ ವಿಧವೆಯು ದತ್ತಕ ಮಗುನನ್ನು ತೆಗೆದುಕೊಳ್ಳುವುದಕ್ಕಾಗಲೀ ಅಥವಾ ದತ್ತಕ ಮಗನು ಗಂಡು ಅಥವಾ ಹೆಣ್ಣು ವಾರಸುದಾರರ ಮಕ್ಕಳಲ್ಲಿಯೇ ಇರಬೇಕೆಂಬುದಕ್ಕಾಗಲೀ ಯಾವುದೇ ಕಾಯ್ದೆಯನ್ನು ಮಾಡಿರಲಿಲ್ಲ. ಒಂದು ವೇಳೆ ದತ್ತಕ ಸಮಾರಂಭವು ದೇಸಾಯಿಯು ಸತ್ತ ಸ್ವಲ್ಪ ಹೊತ್ತಿನ ನಂತರ ನಡೆದಿದ್ದರೂ ಕೂಡ ಅದು ಕ್ರಮಬದ್ಧವಾಗಿತ್ತು. ಯಾಕೆಂದರೆ ಹಿಂದೂ ಕಾಯ್ದೆಯನ್ವಯ ಗಂಡ, ಗಂಡು ವಾರಸದಾರನಿಲ್ಲದೆ ಸತ್ತಾಗ, ಹಿಂದೂ ವಿಧವೆಗೆ ದತ್ತಕ ಮಗನನ್ನು ಮಾಡಿಕೊಳ್ಳಲು ಅಧಿಕಾರವಿದೆ. ಆದ ಕಾರಣ ಈ ದತ್ತಕ ಕ್ರಮಬದ್ಧವಾಗಿದ್ದಿಲ್ಲವೆಂಬ ವಾದ ಸಂಪೂರ್ಣ ಆಧಾರರಹಿತವಾದದ್ದು.

ಅವನ ಮುಂದಿನ ವಾದ – ದತ್ತಕ ತೆಗೆದುಕೊಂಡ ಮಗು ದೇಸಾಯಿಯ ಮನೆತನದ ನೇರ ವಾರಸದಾರನಾಗಿರಲಿಲ್ಲ ಎಂಬುದು. ಆದರೆ ಕಿತ್ತೂರ ದೇಸಾಯರು ಸರ್ ಥಾಮಸ್ ಮನ್ರೋ ಅವನೊಡನೆ ಮಾಡಿಕೊಂಡ ಒಪ್ಪಂದದಲ್ಲಿ ಇಂಥ ಕರಾರು ಯಾವುದೂ ಇರಲಿಲ್ಲವೆಂಬುದನ್ನು ನೋಡಿದಾಗ ಈ ವಾದದಲ್ಲಿಯೂ ಹುರುಳಿಲ್ಲ.

ಇಂಥ ಆಧಾರರಹಿತ ಹಾಗೂ ಅಪೂರ್ಣ ಸಾಕ್ಷಿಯ ಆಧಾರದ ಹಾಗೂ ಕಾಲ್ಪನಿಕ ಸಂದೇಹಗಳ ಆಧಾರದ ಮೇಲೆ, ಥ್ಯಾಕರೆ ಕಿತ್ತೂರ ಸಂಸ್ಥಾನವನ್ನು ಈಸ್ಟ ಇಂಡಿಯಾ ಕಂಪನಿಯ ಅಧೀನಕ್ಕೆ ತೆಗೆದುಕೊಳ್ಳಲು ಶಿಫಾರಸು ಮಾಡಿದನು. ಒಂದುವೇಳೆ ಕಿತ್ತೂರ ಅರಸರ ಅಧಿಕಾರವನ್ನು ಒಪ್ಪಿಕೊಂಡರೂ ವಾರಸದಾರನು ಅಲ್ಪವಯಿ ಇದ್ದದ್ದರಿಂದ ಕಿತ್ತೂರಿನ ಆಡಳಿತದ ಅಧಿಕಾರವನ್ನು ತನಗೇ ಒಪ್ಪಿಸಬೇಕೆಂದು ಬ್ರಿಟಿಷ ಸರಕಾರಕ್ಕೆ ಶಿಫಾರಸು ಮಾಡಿದನು.

ಆದರೆ ಒಂದೇ ಒಂದು ವಿಷಯದ ಬಗ್ಗೆ ಸಮರ್ಪಕವಾಗಿ ವಿವರಿಸುವುದು ಅವಶ್ಯವಿದೆ. ಅದೆಂದರೆ – 10 ಜುಲಾಯಿ 1824 ದಿನಾಂಕದ ಪತ್ರವನ್ನು ಇಷ್ಟು ತಡವಾಗಿ ಅಂದರೆ 12 ಸಪ್ಟಂಬರ 1824 ರಂದು ಏಕೆ ಕೊಡಲಾಯಿತು? ಎಂಬುದು. ಇದರ ಕಾರಣ ಅತ್ಯಂತ ಸ್ಫುಟವಾಗಿಯೇ ಇದೆ. ಕನ್ನೂರ ಮಲ್ಲಪ್ಪ ಸ್ವತಃ ತನ್ನ ಮಗನನ್ನು ಶಿವಲಿಂಗರುದ್ರ ಸರ್ಜನಿಗೆ ದತ್ತಕ ಕೊಡಬೇಕೆಂದು ಅಪೇಕ್ಷಿಸಿದ್ದನೆನ್ನುವುದಕ್ಕೆ ಆಧಾರಗಳಿವೆ. ಅದರಂತೆ ಅನೇಕ ಸಮೀಪದ ಬಂಧುಗಳು ತಮ್ಮ ಮಕ್ಕಳನ್ನು ದತ್ತಕ ಕೊಡಲಿಕ್ಕೆ ಉತ್ಸುಕರಾಗಿದ್ದರೆಂಬುದು ತಿಳಿಯುತ್ತದೆ. ಯಾರನ್ನು ದತ್ತಕ ತೆಗೆದುಕೊಳ್ಳಲಾಗುವುದು ಎಂಬ ವಿಷಯ ಪ್ರಕಟವಾದರೆ ಬಂಧು – ಬಳಗಗಳಲ್ಲಿ ಮನಸ್ತಾಪ, ನಿರಾಶೆ ಉಂಟಾಗಿ, ಗುಂಪುಗಳಾಗಿ, ಸಂಚುಗಾರಿಕೆ ನಡೆಯಬಹುದೆಂಬ ಹೆದರಿಕೆಯಿದ್ದಿತು. ಆದಕಾರಣ ಈ ಪತ್ರವನ್ನು ಥ್ಯಾಕರೆಗೆ ಕೂಡಲೇ ಕಳಿಸಿಕೊಡಲಾಗಲಿಲ್ಲ. ಶಿವಲಿಂಗರುದ್ರ ಸರ್ಜನಿಗೆ ಇನ್ನು ತಾನು ಬದುಕುವುದಿಲ್ಲವೆಂದ ಖಾತ್ರಿಯಾದ ನಂತರವೇ, ಅಂದರೆ 1824 ರ ಸಪ್ಟಂಬರ 11 ರ ಸಂಜೆ ಈ ಪತ್ರವನ್ನು ಕಳಿಸಿಕೊಡಲು ನಿರ್ಧರಿಸಲಾಯಿತು. ಆಗ ಕೂಡ ರಾಣಿ ಚೆನ್ನಮ್ಮ ನಂಬಿಗಸ್ಥ ಸರದಾರರ ಬಂಧುಗಳನ್ನು ಕರೆದು, ಸಂಸ್ಥಾನದ ಕಲ್ಯಾಣವನ್ನು ಸದಾ ಕಣ್ಣುಮುಂದಿಟ್ಟುಕೊಂಡು ನಡೆದುಕೊಳ್ಳಬೇಕೆಂದು ಅವರೆಲ್ಲರಿಗೂ ಮನವಿ ಮಾಡಿ, ಆ ಪತ್ರವನ್ನು ಕನ್ನೂರ ಮಲ್ಲಪ್ಪ ಹಾಗೂ ಸರದಾರ ಮಲ್ಲಪ್ಪಶೆಟ್ಟಿಯ ಕೈಯಲ್ಲಿ, ಥ್ಯಾಕರೆಗೆ ಮುಟ್ಟಿಸಲಿಕ್ಕೆಂದು ಅಂದಿನ ಸಂಜೆ ಕೊಡಲಾಯಿತು.

ಕನ್ನೂರ ಮಲ್ಲಪ್ಪ ಹಾಗೂ ಸರದಾರ ಮಲ್ಲಪ್ಪಶೆಟ್ಟಿಯವರು ಥ್ಯಾಕರೇನ ಪ್ರಶ್ನೆಗಳಿಗೆ ಉತ್ತರ ಕೊಡುತ್ತಿದಾಗ ಇತ್ತ ಹೇಳಿಕೆಗಳಲ್ಲಿ ಹಲವು ವಿಸಂಗತ ಹೇಳಿಕೆಗಳಿವೆಯೆಂಬುದು ನಿಜ. ಅದರಲ್ಲಿಯೂ ಶಿವಲಿಂಗರುದ್ರ ಸರ್ಜ ಮರಣಹೊಂದಿದ ವೇಳೆ ಮತ್ತು ಶಿವಲಿಂಗಪ್ಪನ ದತ್ತಕ ಸಮಾರಂಭದ ಸಮಯದ ಬಗ್ಗೆ ಅಸಂಗತ ಹೇಳಿಕೆಗಳಿವೆ. ಆದರೆ ಸ್ವತಃ ಕನ್ನೂರ ಮಲ್ಲಪ್ಪನೇ ಅತೃಪ್ತ ಹಾಗೂ ನಂಬಲನರ್ಹನಾದ ವ್ಯಕ್ತಿಯಾಗಿದ್ದಾನೆಂಬುದನ್ನು ನಾವು ಮರೆಯಕೂಡದು.

ಚೆನ್ನಮ್ಮ ಹಾಗೂ ಥ್ಯಾಕರೆಯವರ ನಡುವೆ ಏನಾದರೂ ತಪ್ಪು ಕಲ್ಪನೆಗಳುಂಟಾಗುವುದನ್ನೇ ಆತನು ಯಾವಾಗಲೂ ಬಯಸುತ್ತಿದ್ದನು. ಇದಲ್ಲದೇ, ಕ್ರೂರ ಅನಿಯಂತ್ರಿತ ಪ್ರಭುವಾದ ಥ್ಯಾಕರೇನ ಬೆದರಿಕೆಯ ಪ್ರಶ್ನೆಗಳಿಗೆ ಹೆದರಿ, ಕನ್ನೂರ ಮಲ್ಲಪ್ಪ, ಸರದಾರ ಮಲ್ಲಪ್ಪಶೆಟ್ಟಿ ಇಬ್ಬರೂ ಗಾಬರಿಯಾಗಿ, ಒಂದಕ್ಕೊಂದು ವಿಸಂಗತವಾದ ಹೇಳಿಕೆಗಳನ್ನು ಕೊಟ್ಟಿದ್ದರೆ ಅದರಲ್ಲಿ ಆಶ್ಚರ್ಯವೇನಿಲ್ಲ.

ಪುಣೆಯಲ್ಲಿ ಮುಖ್ಯ ಕಾರ್ಯಾಲಯ ಹೊಂದಿದ್ದ ಡೆಕ್ಕನದ ಕಮಿಶನರನಾದ ಚಾಪ್ಲಿನ್, ಕಿತ್ತೂರಿನ ಘಟನೆಗಳ ಬಗ್ಗೆ ಥ್ಯಾಕರೇ ಬರೆದ ಎಲ್ಲ ಸಂಗತಿಗಳನ್ನು ನಂಬಿದಂತೆ ಕಾಣುತ್ತದೆ. ಉಳಿದ ಅನೇಕ ವಸಹಾತುಶಾಹಿ ಬ್ರಿಟಿಷ ಆಫೀಸರರಂತೆ ಕಿತ್ತೂರನ್ನು ಬ್ರಿಟಿಷರ ಅಧೀನಕ್ಕೆ ಸೇರಿಸಿಕೊಳ್ಳಲು ಅತಿ ಆಸಕ್ತನಾಗಿದ್ದಂತೆ ತೋರುತ್ತದೆ. ಇವರೀರ್ವರು ಈ ವಿಷಯದಲ್ಲಿ ಒಂದೇ ಹೊಂಚಿನವರಾಗಿದ್ದಂತೆ ಕಂಡುಬರುತ್ತದೆ. 1824ರ ಸೆಪ್ಟೆಂಬರ 20 ರಂದು ಮುಂಬಯಿಯಲ್ಲಿಯ ಚೀಫ್ ಸೆಕ್ರೆಟರಿಯಾದ ನ್ಯೂನ್‌ಹ್ಯಾಮನಿಗೆ ಒಂದು ಪತ್ರ ಬರೆದನು. ಆ ಪತ್ರದ ಸಂಗಡ ಥ್ಯಾಕರೆಯಿಂದ ಬಂದ ಪತ್ರದ ಪ್ರತಿಯನ್ನು ಕಳಿಸಿದನು. ನ್ಯೂನ್‌ಹ್ಯಾಮನಿಗೆ ಬರೆದ ಈ ಪತ್ರದಲ್ಲಿ ಚಾಪ್ಲಿನ್ ಹೀಗೆ ಬರೆದಿದ್ದಾನೆ:

"ಒಂದು ವೇಳೆ ದತ್ತಕ ಸಮಾರಂಭವು ಸರಿಯಾಗಿ ನಡೆದು ಕ್ರಮಬದ್ಧವೆನಿಸಿದರೆ, ಈ ವಿಷಯದಲ್ಲಿ, ನನ್ನ ಕಲ್ಪನೆಯ ಪ್ರಕಾರ, ರಾಜ್ಯವನ್ನು ಕಿತ್ತೂರಿನ ದೇಸಾಯರ ಸ್ವಾಧೀನದಲ್ಲಿ ಮುಂದುವರಿಸಲಿಕ್ಕೆ ಸರಕಾರದ ಅಭ್ಯಂತರ ಇರಲಿಲ್ಲವೆಂದು ಕಾಣುತ್ತದೆ. ಯಾಕೆಂದರೆ ಕಾಯಿದೆಯ ದೃಷ್ಟಿಯಲ್ಲಿ ಹಿಂದೂ ಕಾಯಿದೆಯ ಪ್ರಕಾರ ದತ್ತಕ ಮಗ ಹಾಗೂ ಲಗ್ನದಿಂದ ಹುಟ್ಟಿದ ಮಗ ಇವರಲ್ಲಿ ಯಾವ ಭೇದವೂ ಇಲ್ಲ. ಅವರಿಬ್ಬರಿಗೂ ಸಮಾನ ಹಕ್ಕುಗಳಿವೆ. ಈ ದತ್ತಕವು ಮಾತ್ರ ದೇಸಾಯಿಯ ಕೊನೆಯ ಗಳಿಗೆಯವರೆಗೂ ಮುಂದೂಡಲ್ಪಟ್ಟು, ಆಮೇಲೆ (ಜುಲುಮೆಯಿಂದ) ನೆರವೇರಿಸಲ್ಪಟ್ಟಂತೆ ತೋರುತ್ತದೆ. ದತ್ತಕ ತೆಗೆದುಕೊಳ್ಳಲಾಯಿತೆಂದು ಹೇಳಲಾದ ವ್ಯಕ್ತಿಯ ರಕ್ತಸಂಬಂಧ ಕೂಡ ಇಷ್ಟೊಂದು ದೂರವಿದೆಯೆಂದರೆ, ಕಿತ್ತೂರ ವಕೀಲನೂ ಅದರ ನಿಶ್ಚಿತ ಸಂಬಂಧವನ್ನು ಹೇಳುವ ಪರಿಸ್ಥಿತಿಯಲ್ಲಿಲ್ಲ. ಇಂಥ ನಾಜೂಕಿನ ಪರಿಸ್ಥಿತಿಯಲ್ಲಿ ನನ್ನ ಮಾರ್ಗ ದರ್ಶನಕ್ಕಾಗಿ ಸಾಧ್ಯವಾದಷ್ಟು ಬೇಗನೇ ಸರಕಾರದ ಆಜ್ಞೆಗಳಿಗಾಗಿ ದಾರಿ ಕಾಯುತ್ತಿದ್ದೇನೆ. ಅಲ್ಲಿಯವರೆಗೆ ಥ್ಯಾಕರೆ ಕೈಕೊಂಡ ಕ್ರಮಗಳನ್ನು ನೀವು ಒಪ್ಪಿ ಮಂಜೂರ ಮಾಡುವಿರೆಂದು ನಾನು ನಂಬಿದ್ದೇನೆ.

"ಒಂದು ವೇಳೆ ಪಾಳೆಗಾರರ ಅಥವಾ ಪ್ರಧಾನಿಯ ರಾಜ್ಯವೆಂದೆನಿಸಿಕೊಳ್ಳಲು ಯೋಗ್ಯವಾದ ಕಿತ್ತೂರನ್ನು ಇತ್ತೀಚೆಗೆ ಮಾತ್ರ ಸಂಸ್ಥಾನವೆಂದು ಪರಿಗಣಿಸಲ್ಪಟುವುದರಿಂದ ಅದನ್ನು ಈಗ ಹಿಂತೆಗೆದುಕೊಳ್ಳುವುದು ಬಹಳ ಅಪ್ರಿಯವಾದ ಕೃತಿಯಾದೀತು. ಈಗ ಮಾಡಿರುವುದು ಈ ಸಂದರ್ಭದಲ್ಲಿ ಅತ್ಯಂತ ಸಮರ್ಪಕವಾದ ಕ್ರಮ. ದತ್ತಕವು ಕ್ರಮಬದ್ಧವೆಂದು ಪರಿಗಣಿಸಲ್ಪಡದಿದ್ದರೆ, ಅದು ಸನದಿನ ಪ್ರಕಾರ ಸರಿಯಾಗುವುದು.

"ಒಂದು ವೇಳೆ ದತ್ತಕ ಕಾಯಂ ಮಾಡಲ್ಪಟ್ಟರೆ, ಥ್ಯಾಕರೆ ದೇಸಗತಿಯ ವ್ಯವಸ್ಥೆಯ ಜವಾಬ್ದಾರಿಯನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳುವುದು ಅಲ್ಪವಯಿಗೆ ಹೆಚ್ಚು ಅನುಕೂಲವಾಗುವುದು. ಅಲ್ಪವಯಿ ದತ್ತಕ ಮಗನು ವಯಸ್ಸಿಗೆ ಬಂದು ರಾಜ್ಯಭಾರ ಹೊತ್ತುಕೊಳ್ಳುವವರೆಗೆ ಅವನು ಮುಂದುವರೆಯುವುದು ಒಳ್ಳೆಯದು. ಯಾಕಂದರೆ ಕಿತ್ತೂರ ರಾಜ ಮನೆತನಕ್ಕೆ ಸಂಬಂಧಿಸಿದ ಈ ಜವಾಬ್ದಾರಿಯನ್ನು ಹೊರಲು ನಂಬಬಹುದಾದ ಯೋಗ್ಯತೆಯುಳ್ಳ ಯಾವ ವ್ಯಕ್ತಿಯೂ ಇಲ್ಲ."

ಈ ಪತ್ರಕ್ಕೆ ಉತ್ತರ ಬರುವಷ್ಟರಲ್ಲಿ, ಚಾಪ್ಲಿನ್‌ಗೆ ಬರೆದ ತನ್ನ ಪತ್ರದಲ್ಲಿ ತಿಳಿಸಿದ ನಿರ್ಣಯದ ಪ್ರಕಾರ, ಥ್ಯಾಕರೆ ಹಾವೇರಿ ವೆಂಕಟರಾವ ಹಾಗೂ ಸರದಾರ ಮಲ್ಲಪ್ಪ ಇವರಿಬ್ಬರನ್ನೂ ಖಜಾನೆಯ ಕಾಳಜಿ ತೆಗೆದುಕೊಳ್ಳಲು ನೇಮಿಸಿದನು. ಕಿತ್ತೂರ ಅರಮನೆಯ ಎಲ್ಲ ಭಾಗಗಳ ಮೇಲೆ ನಿಗಾ ಇಡಲು ಮತ್ತು ಬರಹೋಗುವವರು ಪರವಾನಿಗೆ ಇಲ್ಲದೆ ಒಳಗೆ ಹೋಗದಂತೆ, ಒಳಗೆ ಹೋಗುವಾಗ, ಹೊರಗೆ ಬರುವಾಗ ಅವರ ಜೇಬುಗಳನ್ನು ತಪಾಸುಮಾಡಿಬಿಡಬೇಕಂತಲೂ, ಇವರಿಗೆ ಎಲ್ಲ ತರಹದ ಆಜ್ಞೆಗಳನ್ನು ಕೊಡಲಾಗಿತ್ತು. ರಾಜಮನೆತನದ ಸದಸ್ಯರ ಓಡಾಟ ಕೂಡ ನಿರ್ಬಂಧಿಸಲಾಗಿತ್ತು.

ಚೀಫ್ ಸೆಕ್ರೆಟರಿ ನ್ಯೂನ್‌ಹ್ಯಾಮ ಮಾತ್ರ ಒಬ್ಬ ನ್ಯಾಯದೃಷ್ಟಿಯ ಉದಾರಿ ಹಾಗೂ ತೆರೆದ ಮನಸ್ಸಿನವನಿದ್ದಂತೆ ತೋರುತ್ತದೆ. ಆತನಿಗೆ ಕಿತ್ತೂರಿನ ವಿಷಯಗಳು ದೀರ್ಘಕ್ಕೆ ಒಯ್ಯುವುದು ಬೇಕಾಗಿರಲಿಲ್ಲ. ಚಾಪ್ಲಿನ್‌ನು 1824 ಸೆಪ್ಟೆಂಬರ 23 ರಂದು ನ್ಯೂನ್‌ಹ್ಯಾಮನಿಗೆ ಪತ್ರ ಬರೆದು, ಧಾರವಾಡದಲ್ಲಿದ್ದ ಪೊಲಿಟಿಕಲ್ ಏಜಂಟ್ ಥ್ಯಾಕರೇನ ಕಡೆಯಿಂದ ಬಂದ ಮನೆತನದ ವಂಶಾವಳಿಯ ಕಾಗದದ ಪ್ರತಿಯೊಂದನ್ನು ಕಳಿಸಿಕೊಟ್ಟನು. ಚಾಪ್ಲಿನ್‌ನು ತನ್ನ ಆ ಪತ್ರದಲ್ಲಿ ಹೀಗೆ ಬರೆದಿದ್ದನು:

"ಈ ವಂಶಾವಳಿಯನ್ನು ಕಿತ್ತೂರಿನ ನೌಕರರು ತಯಾರಿಸಿದ್ದು ಅದಕ್ಕೆ ಯಾವ ಕಾಗದಪತ್ರಗಳ ಆಧಾರವಿಲ್ಲದೇ ಇರುವುದರಿಂದ ಅದು ಸರಿಯಾಗಿದೆಯೆಂದು ನಂಬಲು ಅನರ್ಹವಾಗಿದೆ. ಮೇಲಾಗಿ ಸಂಸ್ಥಾನದ ಎಲ್ಲ ವಿಷಯಗಳೂ ಗೌಪ್ಯದ ಮಂಜಿನಲ್ಲಿ ಮುಸುಕಿವೆ. ಇದಲ್ಲದೆ ನಮ್ಮ ಕೆಲವು ದೇಶೀಯ ನೌಕರರು ಹಿಂದಿನ ದೇಸಾಯಿ ಸನದುಕೊಟ್ಟಾಗ ದೇಸಾಯಿಯಿಂದ ಬಹಳ ಉದಾರವಾದ ಇನಾಮುಗಳನ್ನು ಪಡೆದರೆಂಬ ಸುದ್ದಿಯಲ್ಲಿ ಸತ್ಯವಿದೆಯೆಂದು ನಮ್ಮ ಪೊಲಿಟಿಕಲ್ ಏಜಂಟ ನಂಬಿದ್ದಾನೆ. ಕಾರಣ ಈ ಎಲ್ಲ ಕಾರಣಗಳಿಂದ ಈ ಕಾಗದದ ಮೇಲೆ ಹೆಚ್ಚಿನ ವಿಚಾರಣೆ ನಡಿಸಿದ್ದಾನೆ. ಆ ವಿಚಾರಣೆಯ ನಂತರ ಹೆಚ್ಚಿಗೆ ಏನಾದರೂ ವಿಷಯ ತಿಳಿದರೆ ನಿಮಗೆ ಕಳಿಸಿಕೊಡುತ್ತೇನೆ.

"ಕಿತ್ತೂರ ಸಂಸ್ಥಾನದ ವಾರಸುದಾರನೆಂದು ಹೇಳುತ್ತಿರುವ ದತ್ತಕ ಮಗನ ಕೈಯಲ್ಲಿ ಆಡಳಿತವನ್ನು ಮುಂದುವರಿಸಲು ನಿರ್ಧರಿಸಿದರೆ, ನಮ್ಮ ಹಾಗೂ ಕಿತ್ತೂರಿನ ಜೊತೆ ಆಡಳಿತದಲ್ಲಿ ಬರುವ ಕೆಲವು ಪ್ರದೇಶಗಳಲ್ಲಿಯ ಆಡಳಿತವನ್ನು ಹೆಚ್ಚು ಸಮರ್ಥವಾದ ರೀತಿಯಲ್ಲಿ ವ್ಯವಸ್ಥಿತಗೊಳಿಸುವುದು ಅವಶ್ಯವಿರುವುದರಿಂದ ಅವರೊಡನೆ ಕೆಲವು ನಿಚ್ಚಳ

ಕರಾರುಗಳನ್ನು ಮಾಡಿಕೊಳ್ಳುವುದು ಅವಶ್ಯವೆಂದು ಕಾಣುತ್ತದೆ. ಬ್ರಿಟಿಷರ ಆಡಳಿತ ಪ್ರದೇಶದಲ್ಲಿದ್ದ ಸುಂಕದ ಪದ್ಧತಿಯ ವ್ಯವಸ್ಥೆಯನ್ನು ಇಲ್ಲಿಯೂ ಆರಂಭಿಸುವುದು ಅವಶ್ಯವೆಂದು ತೋರುತ್ತದೆ. ಇದಲ್ಲದೆ ಕಿತ್ತೂರಿನಲ್ಲಿ ಇರುವ ಟಂಕಶಾಲೆಯನ್ನು ಮತ್ತೆ ಆರಂಭಿಸಲು ಕೊಡಬಾರದೆಂಬುದು ತೀರ ಖಚಿತವೆನಿಸಿದೆ.

"ದೇಶಗತಿಯನ್ನು ವಾರಸದಾರರಿಗೆ ಮುಂದುವರಿಸುವಾಗ ಬಹಳಷ್ಟು ನಝರಾಣಾ ತೆಗೆದುಕೊಳ್ಳುವ ರೂಢಿಯಿದೆ. ಮಲ್ಲಪ್ಪ, ವೀರಪ್ಪಸರ್ಜನಿಗೆ ಹಿಂದೆ ದೇಸಗತಿಯನ್ನು ಮುಂದುವರಿಸಿದಾಗ 90,000 ರೂಪಾಯಿ ನಝರಾಣಾ ತೆಗೆದುಕೊಳ್ಳಲಾಗಿತ್ತು. ಈ ಹಣದಲ್ಲಿ ಪೇಶ್ವೆಯವರ ಮಂತ್ರಿ ಇತರ ಪ್ರಮುಖರಿಗೆ ಕೊಟ್ಟ ಇನಾಮ ಹಣದ ಲೆಕ್ಕ ಹಿಡಿದಿಲ್ಲ. ಈ ಸಂದರ್ಭದಲ್ಲಿ, 1,75,000 ರೂಪಾಯಿಯ ನಝರಾಣಾ ಅಥವಾ ಒಂದು ಹೆಚ್ಚಿಗೆ ವರ್ಷದ ನಝರಾಣಾ ವಸೂಲ ಮಾಡುವುದು ಅದರಲ್ಲಿಯೂ ಸತ್ತ ದೇಸಾಯಿಗೆ ಗಂಡು ಸಂತಾನವಿಲ್ಲದ ಪರಿಸ್ಥಿತಿಯಲ್ಲಿ ಯೋಗ್ಯವೆಂದು ಕಾಣುತ್ತದೆ."

1824 ರ ಸೆಪ್ಟೆಂಬರ್ 24 ರಂದು ಚಾಪ್ಲಿನ್‌ನು ಚೀಫ್ ಸೆಕ್ರೆಟರಿಯವರಿಗೆ ಮತ್ತೊಂದು ಪತ್ರಬರೆದು, ಕಿತ್ತೂರಿನ ಆಡಳಿತದಲ್ಲಿ ಜಂಟಿ ಮೆನೇಜರನಾದ ಹಾವೇರಿ ವೆಂಕಟರಾವನ ಕಡೆಯಿಂದ ಬಂದಿತೆನ್ನಲಾದ ಗುಪ್ತಪತ್ರದ ನಕಲನ್ನು ಕಳಿಸಿಕೊಟ್ಟನು. ಈ ಪತ್ರದಲ್ಲಿ ವೆಂಕಟರಾವ ಬರೆದಿದ್ದೇನೆಂದರೆ –

"ದೇಸಾಯಿ ಸೆಪ್ಟೆಂಬರ 11 ರಂದು ರಾತ್ರಿ 10 ಗಂಟೆಗೆ ತೀರಿಕೊಂಡನು, 12ನೆಯ ತಾರೀಖಿಗೆ ಅಲ್ಲ. ದೇಸಾಯಿಯ ಮೂವರು ಪ್ರಮುಖ ನೌಕರರು ಈ ಸುದ್ದಿಯನ್ನು ಮುಚ್ಚಲು, ಧಾರವಾಡಕ್ಕೆ ನಝರಾಣಾ ಹಣವನ್ನು ತೆಗೆದುಕೊಂಡು ಹೋಗುವ ನೆವಮಾಡಿ 1,50,000 ರೂಪಾಯಿ ಹಣ ಮತ್ತು ಮುತ್ತು, ರತ್ನ, ಬಂಗಾರದ ಆಭರಣದ ಮೂರು ಪೆಟ್ಟಿಗೆಗಳನ್ನು ತೆಗೆದುಕೊಂಡರು. ರಾಜಮನೆತನದ ಸದಸ್ಯರನ್ನಾಗಲೀ, ಪ್ರಮುಖ ಸೇವಕರನ್ನಾಗಲಿ ಕೇಳದೆ ದತ್ತಕದ ಸುಳ್ಳು ಕಥೆಯನ್ನು ಹುಟ್ಟಿಸಿದರು. ನಿಜವಾಗಿ ದತ್ತಕ ಸಮಾರಂಭ ಮರುದಿವಸ ಮುಂಜಾನೆ ನಡೆಯಿತು. ಹಿಂದಿನ ಕಾರಭಾರಿಯಾದ ಮಲ್ಲಪ್ಪನು ದೇಸಾಯಿಯ ಹಣವನ್ನು ಹೊಂದಿದ್ದಾನೆ."

ಮತ್ತೆ ಕೆಲವು ವಿಷಯ ಬರೆದನಂತರ ಹೀಗೆ ಬರೆಯಲಾಗಿದೆ:

"ಈ ಸುದ್ದಿಗಳು ಬಂದು ಉಳಿದ ವರದಿಗಳಿಂದ ಸ್ಥಿರಪಡುತ್ತವೆಂದು ಥ್ಯಾಕರೇ ನನಗೆ ತಿಳಿಸಿದ್ದಾನೆ. ಸರಕಾರದ ಆಜ್ಞೆ ಬರುವವರೆಗೂ ಈಗಿದ್ದ ವ್ಯವಸ್ಥೆಯನ್ನು ಬದಲಿಸಲು ಥ್ಯಾಕರೆ ಕಬೂಲ ಇರದಿದ್ದರೂ, ಈಗಿದ್ದ ಕಾರಭಾರಿಗಳ ಕೈಯಲ್ಲಿ ಎಲ್ಲ ಅಧಿಕಾರವನ್ನು ಮುಂದುವರಿಸುವುದು ಕ್ಷೇಮವಲ್ಲವೆಂದು, ಅದರಲ್ಲಿಯೂ ಧಾರವಾಡದ ಕಚೇರಿಯ ಹೆಡ್ ಗುಮಾಸ್ತ ವೆಂಕಟರಾಯನೊಂದಿಗೆ ಸಂದೇಹಾಸ್ಪದ ಸ್ವಭಾವದ ಮಲ್ಲಪ್ಪನಂಥವನು ಜಂಟಿಕಾರಭಾರಿಯಾಗಿರುವಾಗ, ಇವರ ಆಡಳಿತ ಮುಂದುವರಿಸುವುದು ಅಪಾಯಕರ ವೆಂದು ಥ್ಯಾಕರೆ ಅಭಿಪ್ರಾಯಪಡುತ್ತಾನೆ."

ಈ ಪತ್ರಕ್ಕೆ ನ್ಯೂನ್‌ಹ್ಯಾಮ್ 1824 ರ ಸೆಪ್ಟೆಂಬರ್ 25 ರಂದು ಉತ್ತರಕೊಟ್ಟು, ಥ್ಯಾಕರೆ ಕೈಕೊಂಡ ಕ್ರಮಗಳಿಗೆ, ಗವ್ಹರ್ನರ್ – ಇನ್ ಕೌನ್ಸಿಲ್ ಅವರ ಮಂಜೂರಿಯಿರುವುದನ್ನು ತಿಳಿಸಿದನು. ಆದರೆ ನ್ಯೂನ್‌ಹ್ಯಾಮ್ ನ್ಯಾಯಪರ ಹಾಗೂ ಉದಾರನಿದ್ದಂತೆ ತೋರುತ್ತದೆ. ಕಿತ್ತೂರಿನ ವಿಷಯದಲ್ಲಿ ಅನ್ಯಾಯವೆಂದು ಕಾಣಬಹುದಾದ ಯಾವ ಕ್ರಮವನ್ನು ಕೈಕೊಳ್ಳಲು ಆತನು ಹಿಂಜರಿದನು. ಥ್ಯಾಕರೇ ಕೈಕೊಂಡ ಕ್ರಮಗಳಿಗೆ ಮನ್ನಣೆಯಿತ್ತರೂ ಕೂಡ, ಥ್ಯಾಕರೇನ ಅಭಿಪ್ರಾಯಗಳ ಬಗೆಗೆ ಅವನಿಗಿದ್ದ ಸಂದೇಹಗಳನ್ನು ಈ ಪತ್ರದಲ್ಲಿ ವ್ಯಕ್ತಪಡಿಸಿದನು. ನ್ಯೂನ್‌ಹ್ಯಾಮ್ ಪಟ್ಟ ಅಭಿಪ್ರಾಯ ಈ ರೀತಿಯಿದೆ:

"ಪತ್ರದಲ್ಲಿ ಉಲ್ಲೇಖಿಸಿದ ಇಡೀ ಸನದು ನೋಡಲು ಎದುರಿಗೆ ಇರದೇ ಇದ್ದದ್ದರಿಂದ, ಬ್ರಿಟಿಷ ಸರಕಾರದೊಂದಿಗೆ, ಕಿತ್ತೂರ ದೊರೆಯ ರಾಜಕೀಯ ಸಂಬಂಧದ ಬಗೆಗೆ ಗವ್ಹರ್ನರ್ – ಇನ್ – ಕೌನ್ಸಿಲ್ ಅವರಿಗೆ ಈ ಎಲ್ಲ ವಿಷಯಗಳ ಬಗ್ಗೆ ಸಂದೇಹವಿಲ್ಲದಂಥ ಪರಿಸ್ಥಿತಿಯಿಲ್ಲ. ಥ್ಯಾಕರೇ ಕಳುಹಿಸಿದ ಸನದಿನಲ್ಲಿ ಈ ದತ್ತಿಯ ರೀತಿ ಹಾಗೂ ಅದರ ಬಗ್ಗೆ ಉಪಯೋಗಿಸಲಾದ ಶಬ್ದಗಳನ್ನು ನೋಡಿದರೆ, ಕಿತ್ತೂರಕರ ಹಾಗೂ ಅವರ ವಂಶಜರು ವಂಶಪಾರಂಪರ್ಯವಾಗಿ ಕಿತ್ತೂರಿನ ರಾಜ್ಯಕ್ಕೆ ಬಾಧ್ಯಸ್ಥರು ಹಾಗೂ ಉಳಿದ ಜಹಗೀರದಾರರಿಗಿಂತ ಬೇರೆ ರೀತಿಯ ಸಂಬಂಧ ಪಡೆದವರು ಎಂದು ಗ್ರಹಿಸಬಹುದಾದರೂ, ಒಂದು ವೇಳೆ ಸನದು ಪಡೆದ ಕಿತ್ತೂರ ರಾಜಮನೆತನವೇ ಪೂರ್ತಿ ವಾರಸುದಾರರಿಲ್ಲದಂತೆ ಆದರೆ ಕಿತ್ತೂರ ರಾಜ್ಯ ಬ್ರಿಟಿಷರಿಗೆ ಸೇರಬಹುದೆಂಬುದಕ್ಕೆ ಸನದಿನಲ್ಲಿ ಯಾವ ಅಭ್ಯಂತರವು ಕಂಡುಬರಲಿಲ್ಲ.

"ಈ ತಿಳುವಳಿಕೆಯ ಮೇಲೆ ಕೆಳಗಿನ ಅಪ್ಪಣೆಗಳನ್ನು ವಿಧಿಸಲಾಗಿದೆ. ಆದರೆ ಈ ಅಪ್ಪಣೆಗಳನ್ನು ಕಾರ್ಯರೂಪದಲ್ಲಿ ತರುವ ಪೂರ್ವದಲ್ಲಿ ಸನದನ್ನು ನೀವೇ ಸ್ವತಃ ಪರೀಕ್ಷಿಸಿ ನೋಡಿ, ಈ ತಿಳುವಳಿಕೆ ಸರಿಯಾಗಿದೆಯೆಂಬುದನ್ನು ಖಚಿತಪಡಿಸಿಕೊಳ್ಳಬೇಕು.

"ಸನದಿನಲ್ಲಿ ದತ್ತಕ ತೆಗೆದುಕೊಳ್ಳುವ ಬಗ್ಗೆ ಇರುವ ನಮ್ಮ ನಿಯಮಗಳನ್ನು, ಕಿತ್ತೂರಿನ ವಿಷಯದಲ್ಲಿ ಸಡಿಲಿಸಿರುವಂಥ ಯಾವ ಲಕ್ಷಣಗಳೂ ಸನದಿನಲ್ಲಿ ಕಂಡುಬರದಿದ್ದರೆ, ಉಳಿದ ಜಹಗೀರದಾರರಿಗೆ ಈ ವಿಷಯದಲ್ಲಿ ಎಚ್ಚರಿಕೆಯಂತೆ ಪರಿಣಮಿಸಲು, ಕಿತ್ತೂರ ಅರಸರು ಮಾಡಿದ ತಪ್ಪುಗಳ ಬಗ್ಗೆ ಸಾರ್ವಜನಿಕವಾಗಿ ತಿಳಿಹೇಳಿ, ಈ ವಿಷಯದಲ್ಲಿ ಸರಕಾರ ಹಕ್ಕುಗಳು ಹಾಗೂ ಉದ್ದೇಶಗಳ ಬಗ್ಗೆ ಸ್ವಚ್ಛ ಹಾಗೂ ಸರಿಯಾದ ರೀತಿಯಲ್ಲಿ ಪ್ರಕಟಿಸುವುದು ಅವಶ್ಯವಾಗಿದೆ. ಪ್ರಾರಂಭದಲ್ಲಿ ನಾವು ಈ ವಿಷಯದಲ್ಲಿ ಬಿಗುವಾಗಿದ್ದು, ಹಿಂದುಗಡೆ ಈ ಅಪ್ಪಣೆಗಳನ್ನು ತಕ್ಕಮಟ್ಟಿಗೆ ಸಡಿಲುಗೊಳಿಸಬಹುದು.

"ಆದಕಾರಣ, ಸರಕಾರದ ಪರವಾನಿಗೆ ಇಲ್ಲದ ಈ ದತ್ತಕ, ಒಂದುವೇಳೆ ನಡೆದಿದ್ದರೂ ಸಹ, (ಅದು ನಡೆಯಿತೆಂಬುದಕ್ಕೆ ಸಾಕಷ್ಟು ಆಧಾರ ಅಥವಾ ಸಾಕ್ಷಿಗಳಿಲ್ಲ), ಸರಿಯಾದ ದತ್ತಕವೆಂದು ಬ್ರಿಟಿಷ್ ಸರಕಾರ ಪರಿಗಣಿಸುವುದಿಲ್ಲ ಎಂಬುದನ್ನು ನಿಚ್ಚಳವಾಗಿ ಪ್ರಕಟಿಸಬೇಕು. ಅದಾದನಂತರ ಥ್ಯಾಕರೆ, ಇಷ್ಟರಲ್ಲಿ ಮಾಡಿರದಿದ್ದರೆ, ಇಡೀ ದೇಸಗತಿಯನ್ನು ಕಬ್ಜಾ ತೆಗೆದುಕೊಳ್ಳಬೇಕು. ಆಮೇಲೆ ದತ್ತಕ ಪ್ರಸಂಗದ ಬಗ್ಗೆ ವಿಚಾರಣೆ ಕೈಕೊಳ್ಳಬೇಕು.

"ಈ ವಿಷಯದಲ್ಲಿ ಮೊಟ್ಟಮೊದಲಿಗೆ ನಿಶ್ಚಿತಗೊಳಿಸಿಕೊಳ್ಳಬೇಕಾದ ಸಂಗತಿಯೆಂದರೆ ದತ್ತಕ ತೆಗೆದುಕೊಳ್ಳಲ್ಪಟ್ಟ ವ್ಯಕ್ತಿ ದೇಸಾಯಿಗೆ ಹೇಗೆ ಸಂಬಂಧಿಕನಾಗಿದ್ದಾನೆಂಬುದು. ದತ್ತಕ ತೆಗೆದುಕೊಳ್ಳಲ್ಪಟ್ಟ ಮಗನು, ಟಿಪ್ಪುಸುಲ್ತಾನ್ ಕಿತ್ತೂರನ್ನು ವಶಪಡಿಸಿಕೊಳ್ಳುವ ಪೂರ್ವದಲ್ಲಿಯ ದೇಸಾಯಿಯ ಮನೆತನಕ್ಕೆ ಸಂಬಂಧಿಸಿದವನಿದ್ದರೆ, ದೇಸಾಯಿಗೆ ಅತಿ ಸಮೀಪದ ಸಂಬಂಧಿಕನೆಂಬುದು ಖಚಿತವಾದರೆ, ಒಂದು ವೇಳೆ ದತ್ತಕ ಸಮಾರಂಭ ನಡೆಯಲಿಲ್ಲವೆಂದು ಸಾಬೀತಾದರೂ, ದತ್ತಕ ಸಮಾರಂಭದ ಬಗ್ಗೆ ನಡೆಯಬೇಕಾದ ಕ್ರಮಗಳಲ್ಲಿ ಏನಾದರೂ ನ್ಯೂನತೆಗಳಿದ್ದರೂ ಅವುಗಳನ್ನು ಕ್ಷಮಿಸಿಬಿಡಬೇಕು. ಈ ವಿಷಯದಲ್ಲಿ ದೇಸಾಯಿ ದತ್ತಕ ತೆಗೆದುಕೊಳ್ಳುವ ಇಚ್ಛೆಯುಳ್ಳವನಾಗಿದ್ದನೆಂಬುದು ನಿಸ್ಚಿತವಾದರೆ, ಸಾಕು.

"ಅವನು ಹಳೇ ದೇಸಾಯರ ಸಮೀಪದ ಸಂಬಂಧಿಯೆಂಬುದು ನಿಶ್ಚಿತವಾದರೆ, ದತ್ತಕ ನಡೆಯಿತೋ ಇಲ್ಲವೋ ಅದನ್ನು ವಿಚಾರಿಸುವ ಕಾರಣವಿಲ್ಲ. ಅವನನ್ನು ಕಿತ್ತೂರ ಪಟ್ಟಾಧಿಕಾರಿಯೆಂದು, ಕೆಳಗಿನ ಕರಾರುಗಳ ಮೇಲೆ ಒಪ್ಪಿಕೊಂಡುಬಿಡಬಹುದು.

"ಒಂದು ವೇಳೆ, ದತ್ತಕ ಆದ ಹುಡುಗನು ದೇಸಾಯರ ಮನೆತನದ ಪೂರ್ವಜರ ವಂಶಜನಾಗಿರದಿದ್ದರೆ ಅಥವಾ ಹೆಣ್ಣು ಸಂತಾನದ ಮೂಲಕವೂ ವಂಶಜನಾಗಿರದಿದ್ದರೆ, ದತ್ತಕ ಸಮಾರಂಭ ಎಷ್ಟೇ ವಿಧಿಪೂರ್ವಕವಾಗಿ, ಕ್ರಮಬದ್ಧವಾಗಿ ನಡೆದಿದ್ದರೂ, ದತ್ತಕವನ್ನು ಒಪ್ಪಕೂಡದು – ಮತ್ತು ದೇಸಗತಿಯ ರದ್ದಾಯಿತೆಂದು ಪರಿಗಣಿಸಲ್ಪಡಬೇಕಲ್ಲದೆ ಈ ರಾಜ್ಯವು ಬ್ರಿಟಿಷ ರಾಜ್ಯಕ್ಕೆ ಸೇರಿದಂತೆ ಪರಿಗಣಿಸಬೇಕು ಹಾಗೂ ದೇಸಾಯಿಯ ಮನೆತನದ ಹೆಣ್ಣುಮಕ್ಕಳಿಗೆ ಮತ್ತು ದೇಸಾಯಿಯ ಉಳಿದ ಆಶ್ರಿತರಿಗೆ ಹಾಗೂ ಸೇವಕರಿಗೆ ಅವರ ಉಪಜೀವನಕ್ಕೆ ಸರಿಯಾದ ವ್ಯವಸ್ಥೆಯನ್ನು ಮಾಡಬೇಕು.

"ಈಗ ನಾನು ಜಹಗೀರನ್ನು ತಿರಿಗಿ ಒಪ್ಪಿಸುವ ಕರಾರುಗಳನ್ನು ನಮೂದಿಸುತ್ತೇನೆ. ಒಂದುವೇಳೆ ಇದುವರೆಗೆ ನಮಗೆ ಬಂದ ವರದಿಗಳಿಗೆ ವ್ಯತಿರಿಕ್ತವಾಗಿ, ದತ್ತಕ ತೆಗೆದುಕೊಳ್ಳಲ್ಪಟ್ಟ ಮಗನು, ದೇಸಾಯಿಯ ಸಮೀಪದ ಸಂಬಂಧಿಕನೆಂತಲೂ, ಒಂದುವೇಳೆ ಕಿತ್ತೂರ ಮನೆತನದವರು ದತ್ತಕ ತೆಗೆದುಕೊಂಡಿರುವುದು ಸತ್ಯವೆಂದು ಸಾಬೀತಾಗಿ ಮತ್ತು ಕಿತ್ತೂರ ಅರಸುಮನೆತನದವರು ದತ್ತಕಕ್ಕೆ ಪರವಾನಿಗೆ ಕೇಳಿದ್ದರೆ ಬ್ರಿಟಿಷ ಸರಕಾರ ಇಂಥ ಪರವಾನಿಗೆಯನ್ನು ಕೊಡುವ ಸಂಭವವಿತ್ತೆಂದು ಕಂಡುಬಂದರೆ, ದೇಸಗತಿಯನ್ನು ಕಿತ್ತೂರಿನ ಆಡಳಿತಕ್ಕೆ ಸನದಿನ ಕರಾರುಗಳಲ್ಲಿಯಾಗಲೀ, ಭಾಷೆಯಲ್ಲಾಗಲೀ ಯಾವ ಬದಲಾವಣೆಯಿಲ್ಲದೆ ಬಿಟ್ಟುಕೊಡಬೇಕು. ಹಳೆ ಸನದಿನಲ್ಲಿ ಯಾವುದಾದರು ವಿಷಯ ಕ್ಲಿಷ್ಟ ಅಥವಾ ಸಂದಿಗ್ಧವಾಗಿದ್ದರೆ, ಅದನ್ನು ಸ್ಪಷ್ಟಪಡಿಸಲು ಬೇಕಾದಷ್ಟು ಬದಲಾವಣೆಯನ್ನು ಮಾತ್ರ ಮಾಡಬಹುದು.

"ದತ್ತಕ ತೆಗೆದುಕೊಂಡ ಹುಡುಗನ ಸಂಬಂಧ ಕಿತ್ತೂರಿನ ರಾಜ ಮನೆತನಕ್ಕೆ, ನಿನ್ನ ಪತ್ರದ ಕೊನೆಯ ಪರಿಚ್ಛೇದದಲ್ಲಿ ಕಾಣಿಸಿದಂತೆ ಇದ್ದರೂ, ದತ್ತಕವು ಕಾಯಿದೆ ಬಾಹಿರವಾಗಿದ್ದರೆ

ಇಲ್ಲವೇ ದತ್ತಕ ಹುಡುಗ ಅಷ್ಟು ಸಮೀಪದ ರಕ್ತಸಂಬಂಧಿಕನಾಗಿರದಿದ್ದರೂ, ದತ್ತಕವು ಕಾಯಿದೇಶೀರ ಆಗಿರಬಹುದಾದರೆ, ಕೊನೆಗೆ ದೇಸಗತಿಯನ್ನು ಅವನಿಗೆ ಬಿಟ್ಟುಕೊಡಬೇಕು. ಆದರೆ ಹಾಗೆ ಮಾಡುವ ಪೂರ್ವದಲ್ಲಿ, ನಾಣ್ಯಶಾಲೆಯನ್ನು ಆರಂಭಿಸಲು ಅಥವಾ ಅದರಂಥ ಬೇರೆ ವಿಶೇಷಾಧಿಕಾರ ಒಪ್ಪುವ ಮೊದಲು ಅದಕ್ಕೆ ಬೇಕಾದ ಹೊಸ ಕರಾರುಗಳನ್ನು ಹಾಕಬೇಕು. ಹೀಗೆ ಮಾಡುವಾಗ ನಮ್ಮ ಸ್ವಾಧೀನದಲ್ಲಿರುವ ರಾಜ್ಯಗಳನ್ನು ಕ್ರೋಢೀಕರಿಸಿ ಭದ್ರಗೊಳಿಸಿಕೊಳ್ಳಲು ಬೇಕಾದ ಎಲ್ಲ ಶರತ್ತುಗಳನ್ನು ಹಾಕಬೇಕು.

"ದೇಸಾಯಿಯ ಖಾಸಗಿ ಆಸ್ತಿಯನ್ನು ಹಂಚುವಾಗ, ಹಿಂದೂ ಕಾಯಿದೆಯ ಉತ್ತರಾಧಿಕಾರದ ನಿಯಮಗಳನ್ವಯ ಹಂಚಬೇಕು. ಅದರಲ್ಲಿ ಏನಾದರೂ ಭಾಗವು ಸರಕಾರಕ್ಕೆ ಸಲ್ಲುವಂತಿದ್ದರೆ, ಸತ್ತವನ ಸಂಬಂಧಿಕರ ಎಲ್ಲರ ಹಕ್ಕುಗಳನ್ನು ಮೊದಲು ಮನ್ನಿಸಿ ಅವರೆಲ್ಲರಿಗೂ ಹಿಸ್ಸೆ ಸಿಗುವಂತೆ ನೋಡಿಕೊಳ್ಳಬೇಕು. ಈ ವಿಷಯವನ್ನು ಅವರ ಹಿಸ್ಸೆಯ ಬಗ್ಗೆ ಅತ್ಯಂತ ಔದಾರ್ಯದಿಂದ ವಿಚಾರಿಸಿಕೊಡಬೇಕು. ಅಲ್ಲಿಯವರೆಗೆ ಸರಕಾರವು ಏನನ್ನೂ ತೆಗೆದುಕೊಳ್ಳಬಾರದು."

ತಾನು ಕೈಕೊಂಡ ಕ್ರಮಗಳಿಗೆ ಒಪ್ಪಿಗೆಯಿತ್ತ ಈ ಪತ್ರ ಬಂದ ಮೇಲೆ ಥ್ಯಾಕರೆ ದಿನದಿನಕ್ಕೆ ಹೆಚ್ಚು ಕ್ರೂರ ಹಾಗೂ ಬಿಗುವಿನ ಭಾವನೆಯನ್ನು ತಳೆಯತೊಡಗಿದನು. ಅವನ 14 ನೆಯ ಸೆಪ್ಟೆಂಬರ 1824 ರ ಪತ್ರದಲ್ಲಿ ಕಾಣಿಸಿದಂತೆ, ಕಿತ್ತೂರಿನ ಆಡಳಿತವನ್ನು ಆತ ಇಬ್ಬರು ಮ್ಯಾನೇಜರರಿಗೆ ಒಪ್ಪಿಸಿದ್ದ. ಒಬ್ಬ ಸಂಸ್ಥಾನದ ಪ್ರತಿನಿಧಿಯೆಂದು, ಇನ್ನೊಬ್ಬನನ್ನು ಬ್ರಿಟಿಷ ಸರಕಾರದ ಪ್ರತಿನಿಧಿಯೆಂದು, ಅವರಿಗೆ ಸಂಸ್ಥಾನದ ಆಡಳಿತದ ಪೂರ್ಣ ಜವಾಬ್ದಾರಿ ಯನ್ನಲ್ಲದೆ ಖಜಾನೆಯ ಸಂರಕ್ಷಣೆಯ ಜವಾಬ್ದಾರಿಯನ್ನೂ ಒಪ್ಪಿಸಲಾಗಿತ್ತು. ಆದರೆ ವೆಂಕಟರಾಯನು ಮಲ್ಲಪ್ಪಶೆಟ್ಟಿಯ ವಿರುದ್ಧ ದುರುದ್ದೇಶಪೂರಿತವಾದ ಸುಳ್ಳು ಅಪವಾದ ಗಳನ್ನು ಹೊರಿಸತೊಡಗಿದನು. ಅವುಗಳಿಗೆ ಕಿವಿಗೊಟ್ಟು ಥ್ಯಾಕರೆ ಮಲ್ಲಪ್ಪಶೆಟ್ಟಿಯನ್ನು ಮ್ಯಾನೇಜರ ಹುದ್ದೆಯಿಂದ ತೆಗೆದುಹಾಕಿದನು. ತದನಂತರ ವೆಂಕಟರಾಯ ಸರ್ವಾಧಿಕಾರಿ ಯಂತೆ ವರ್ತಿಸತೊಡಗಿದನು. ಥ್ಯಾಕರೆ ಕಿತ್ತೂರಿನ ಸರದಾರನನ್ನು ಹಾಗೂ ಉಳಿದ ಅಧಿಕಾರಿಗಳನ್ನು ಬೆದರಿಸತೊಡಗಿದನು. ಅನೇಕ ಹಳ್ಳಿಗಳ ಲೆಕ್ಕಗಳನ್ನು ತಪಾಸು ಮಾಡಲು ಆತನು ಅಮಲ್ದಾರರನ್ನು ನೇಮಿಸಿದನು. ಇಂಥ ಬೆದರಿಕೆ ಅಪವಾದಗಳಿಗೆ ತುತ್ತಾದವರೆಂದರೆ ಕನ್ನೂರ ಮಲ್ಲಪ್ಪ, ಕಿತ್ತೂರ ಗುರುಶಾಂತಪ್ಪ, ಸರದಾರ ಮಲ್ಲಪ್ಪ, ನರಸಿಂಗರಾಮ ಮುಂತಾದವರು. ಅರಮನೆಯಲ್ಲಿಯ ಅನೇಕ ನೌಕರರನ್ನು, ರಾಜಮನೆತನದವರಿಗೆ ಕೇಳದೆ ಅಥವಾ ಅವರ ನಂಬಿಗಸ್ಥ ಮುಖಂಡರಿಗೆ ತಿಳಿಸದೆ ತೆಗೆದುಹಾಕಿದನು. ಕಿತ್ತೂರಿನ ಒಳ ಆಡಳಿತವನ್ನು ನೋಡಿಕೊಳ್ಳಲು ಮಾಮಲೇದಾರ ಹಾಗೂ ಇನ್ನೂ ಕೆಲವು ಅಧಿಕಾರಿಗಳನ್ನು ನೇಮಿಸಿದನು. ಕಿತ್ತೂರಿನ ಆಡಳಿತ ವಿಷಯದಲ್ಲಿ ಹಾವೇರಿ ವೆಂಕಟರಾಯನ ಲಿಖಿತ ಪರವಾನಿಗೆ ಇಲ್ಲದೆ ಏನನ್ನೂ ಮಾಡಕೂಡದೆಂದು ಆಜ್ಞೆ ಮಾಡಿದನು. ಕಿತ್ತೂರಿನ ಅಧಿಕಾರಿಗಳೆಲ್ಲರ ಮೇಲೆ ಹಾವೇರಿ ವೆಂಕಟರಾಯನಲ್ಲಿ ಪೂರ್ಣ ಅಧಿಕಾರ ಕೊಡಲಾಯಿತು.

ಅವರು ಅವನ ಮಾತನ್ನು ತೆಗೆದುಹಾಕಿದರೆ ಅವರ ಮೇಲೆ ಕಠಿಣ ಕ್ರಮ ಕೈಕೊಳ್ಳಲಾಗುವುದೆಂದು ಬೆದರಿಕೆ ಹಾಕಲಾಯಿತು. ಕಿತ್ತೂರಿನ ಖಜಾನೆ ಥ್ಯಾಕರೇ ಹಾಗೂ ಅವನ ಕೆಳಗಿನ ಸಹಾಯಕ ಅಧಿಕಾರಿಗಳ ಕೈಯಲ್ಲಿತ್ತು. ಖಜಾನೆಯನ್ನು ಕಾಯಲಿಕ್ಕೆ ಒಂದು ಸಿಪಾಯಿಗಳ ಪಡೆಯನ್ನೇ ಇಡಲಾಯಿತು. ಅದಕ್ಕೆ ಥ್ಯಾಕರೆ ಕೊಟ್ಟ ಕಾರಣವೆಂದರೆ – "ಖಜಾನೆಯಲ್ಲಿ 10 ಲಕ್ಷಕ್ಕಿಂತ ಹೆಚ್ಚಿನ ಸಂಪತ್ತಿದೆ. ದೇಸಾಯಿಯ ಕಾವಲುಗಾರರ ಮೇಲೆ ನಂಬಿ ಖಜಾನೆಯ ರಕ್ಷಣೆಯನ್ನು ಅವರಿಗೇ ಬಿಟ್ಟುಕೊಟ್ಟರೆ, ದರೋಡೆಕೋರರ ಹೆಸರಿನಲ್ಲಿ ಅವರೇ ಆ ಹಣವನ್ನು ದೋಚಿಕೊಂಡು ಹೋಗುವ ಸಾಧ್ಯತೆಯಿದೆ." ಖಜಾನೆಯ ರಕ್ಷಣೆಯ ನೆವಮಾಡಿ ಥ್ಯಾಕರೇ 30 ಜನ ಬ್ರಿಟಿಷ ಕಾವಲುಗಾರರನ್ನು ಕಿತ್ತೂರಿನ ಅರಮನೆಯ ಪೂರ್ವ ಹಾಗೂ ಪಶ್ಚಿಮ ಮುಖ್ಯ ಬಾಗಿಲುಗಳನ್ನು ಕಾಯಲೆಂದು ನೇಮಿಸಿದನು. ದೇಸಾಯಿಯ ಕಾವಲುಗಾರರ ಅವಶ್ಯವಿಲ್ಲವೆಂದು ಅವರನ್ನು ಅಲ್ಲಿಂದ ತೆಗೆಯಲಾಯಿತು. ಅವರನ್ನು ಅಲ್ಲಿ ನಿಲ್ಲಗೊಡದಂತೆ ಆಜ್ಞೆ ವಿಧಿಸಲಾಯಿತು. ಖಜಾನೆಗೆ ಏನಾದರೂ ಧಕ್ಕೆಯಾದರೆ ಅದಕ್ಕೆ ತಾವು ಜವಾಬ್ದಾರರೆಂದು ಕಿತ್ತೂರಿನ ಸೈನ್ಯ ಹಾಗೂ ಇತರ ಅಧಿಕಾರಿಗಳಿಂದ ಕರಾರುಪತ್ರ ಬರೆದುಕೊಡಬೇಕೆಂದು ಒತ್ತಾಯ ತರಲಾಯಿತು. ಥ್ಯಾಕರೇನ ಇವೆಲ್ಲ ದಬ್ಬಾಳಿಕೆಯ ಕ್ರಮಗಳಿಂದ ರಾಣಿ ಚೆನ್ನಮ್ಮ ಜರ್ಜರಿತಳಾದಳು. ಅದಕ್ಕಾಗಿ, ಕಿತ್ತೂರ ಸಂಸ್ಥಾನದ ವಕೀಲನಾದ ರಾಚಪ್ಪನನ್ನು ಹಾಗೂ ಲಿಂಗೋಪಂತ ವಕೀಲನನ್ನು ಮುಂಬಯಿಯಲ್ಲಿದ್ದ ಗವರ್ನರ ಮೌಂಟ ಸ್ಟುವರ್ಟ ಎಲ್‌ಫಿನ್ಸ್ಟನ್‌ನನ್ನು ಭೆಟ್ಟಿಯಾಗಿ, ಕಿತ್ತೂರ ರಾಜಮನೆತನದವರಿಗೆ ಕೊಡಲಾದ ಚಿತ್ರಹಿಂಸೆಯ ಬಗ್ಗೆ ತಿಳಿಸಿ, ತಕರಾರು ಮಾಡಲು ಕಳಿಸಿಕೊಟ್ಟಳು. ಅವರು 1824 ರ ಅಕ್ಟೋಬರ 8 ರಂದು ಎಲ್‌ಫಿನ್ಸ್ಟನ್‌ನನ್ನು ಭೆಟ್ಟಿಯಾಗಿ ಎಲ್ಲ ವಿಷಯ ತಿಳಿಸಿದರು. ಆದರೆ ಅವನಿಂದ ಈ ತಕರಾರಿಗೆ ಹೆಚ್ಚಿನ ಸಹಾನುಭೂತಿ ದೊರೆಯಲಿಲ್ಲ.

ರಾಜಮನೆತನದವರಲ್ಲಿಯೂ ತಪ್ಪು ತಿಳುವಳಿಕೆ ಹುಟ್ಟಿಸಿ ಅವರಲ್ಲಿಯೇ ಜಗಳ ಹುಟ್ಟಿಸುವ ಭೇದ ನೀತಿಯನ್ನು ಅನುಸರಿಸಲೂ ಥ್ಯಾಕರೆ ಯತ್ನಿಸಿದನು. ದೇಸಾಯಿಯ ಪತ್ನಿ ವಿಧವೆ ವೀರಮ್ಮನೆಡೆಗೆ ಆತನು ಗುಪ್ತಚಾರರನ್ನು ಕಳುಹಿಸಿ ಈ ದತ್ತಕವು ಅವಳಿಗೆ ಒಳ್ಳೆಯದನ್ನು ಮಾಡುವುದಿಲ್ಲ ಅದರಿಂದ ಅವಳು ಅನಾಥಳಾಗುವ ಸಂಭವವಿದೆಯೆಂದು ಮುಂತಾಗಿ ಹೇಳಿ ಅವಳ ಮನಸ್ಸನ್ನು ಕೆಡಿಸಲು ಯತ್ನಿಸಿದನು. ಆದರೆ, ರಾಜಮನೆತನದ ಎಲ್ಲರಿಗೂ ಗೊತ್ತಿದ್ದಂತೆ, ವೀರಮ್ಮನಿಗೂ ರಾಣಿ ಚೆನ್ನಮ್ಮನ ಘನೋದಾತ್ತವಾದ ವ್ಯಕ್ತಿತ್ವದ ಪರಿಚಯವಿದ್ದಿತು. ರುದ್ರಮ್ಮನ ಮಗ ಶಿವಲಿಂಗರುದ್ರ ಸರ್ಜನಿಗೆ ತನ್ನ ಮಗನನ್ನು ಅಂಗರಕ್ಷಕನೆಂದು ನೇಮಿಸಲು ಸ್ವತಃ ಚೆನ್ನಮ್ಮನೇ ಸೂಚಿಸಿದ್ದಳೆಂಬುದು ಕಿತ್ತೂರಿನ ರಾಜಮನೆತನದಲ್ಲಿ ಪ್ರತಿಯೊಬ್ಬರಿಗೂ ಗೊತ್ತಿದ್ದಿತು. ಆದರೆ ಆತನು ದುರ್ದೈವದಿಂದ ಬೇಗನೇ ತೀರಿಹೋದನು. ರಾಣಿ ಚೆನ್ನಮ್ಮನ ದೇಶಾಭಿಮಾನ, ಕಿತ್ತೂರಿನ ಜನತೆಯ ಬಗ್ಗೆ ಆಕೆಯಲ್ಲಿದ್ದ ಕಳಕಳಿ, ರಾಜ ಮನೆತನದ ಎಲ್ಲರ ಬಗ್ಗೆ ಆಕೆಯಿರಿಸಿಕೊಂಡ ಪ್ರೀತಿ, ವಿಶ್ವಾಸಗಳು ಕಿತ್ತೂರಿನಲ್ಲಿ ಮನೆಮಾತಾಗಿದ್ದವು. ಆದ್ದರಿಂದ ಥ್ಯಾಕರೇನ ನೀಚ ಕುತಂತ್ರಗಳು ಯಶಸ್ವಿಯಾಗಲಿಲ್ಲ.

ಚೆನ್ನಮ್ಮನಿಗೆ ಪರಿಸ್ಥಿತಿಯ ಪೂರ್ಣ ಪರಿಜ್ಞಾನವಿದ್ದಿತು. ಅದಕ್ಕಾಗಿ ಅವಳು ಅನುಕೂಲ ವೇಳೆಗಾಗಿ ಕಾಯ್ದಿದ್ದಳು. ಕಿತ್ತೂರಿನ ಕೋಟೆ ಹಾಗೂ ಅರಮನೆಗಳು ಬ್ರಿಟಿಷ ಕಾವಲುಗಾರರ ಹಾಗೂ ಸೈನಿಕರಿಂದ ಸುತ್ತುವರಿಯಲ್ಪಟ್ಟಿದ್ದ ಅರಮನೆಯಲ್ಲಿ ನಡೆದ ಸಂಗತಿಗಳನ್ನು ಕೂಡಲೇ ತಿಳಿಸಲು ಅರಮನೆ ಹಾಗೂ ಕೋಟೆಯ ತುಂಬೆಲ್ಲ ಗುಪ್ತಚಾರರನ್ನಿಡಲಾಯಿತು. ಕಿತ್ತೂರ ಸಂಸ್ಥಾನದ ಅಧಿಕಾರಿಗಳಾಗಲೀ, ಸರದಾರರಾಗಲೀ ರಾಣಿಯನ್ನು ಕಾಣದಂತೆ ನಿರ್ಬಂಧಿಸ ಲಾಯಿತು. ಕಿತ್ತೂರಿನ ಜನತೆಗೆ ರಾಣಿಯಬಗ್ಗೆ ಅಪಾರವಾದ ಪ್ರೇಮ - ವಿಶ್ವಾಸ. ರಾಜಮನೆತನದವರಿಗೆ ಅರಮನೆಯಲ್ಲಿ ಯಾವ ಮರ್ಯಾದೆ ಇಲ್ಲದಂತಾಯಿತು. ಅರಮನೆಯಲ್ಲಿಯ ಅವರ ಓಡಾಟವನ್ನು ಕೂಡ ಕಣ್ಣಲ್ಲಿ ಕಣ್ಣಿಟ್ಟು ನೋಡಲಾಗುತ್ತಿತ್ತು.

ಪರಿಸ್ಥಿತಿ ಸಹಿಸಲು ಅಸಾಧ್ಯವಾಗತೊಡಗಿತ್ತು. ರಾಜಮನೆತನದವರಿಗೆ ಇವೆಲ್ಲ ಹಿಂಸೆಗೊಳಿಸಿದರೂ ಅಷ್ಟಕ್ಕೆ ತೃಪ್ತನಾಗದ ಥ್ಯಾಕರೆ, ದತ್ತಕ ಮಗ ಶಿವಲಿಂಗಪ್ಪ ಕಿತ್ತೂರಿನಿಂದ ಕೂಡಲೇ ಹೊರಹೋಗಬೇಕೆಂದು ಆಜ್ಞೆ ಹೊರಡಿಸಿದ. ಈ ಕ್ರಮ ಕೈಕೊಳ್ಳಲಿಕ್ಕೆ ಒಂದು ದುರುದ್ದೇಶವೇ ಕಾರಣವಾಗಿತ್ತು. ಅದೆಂದರೆ ಶಿವಲಿಂಗಪ್ಪ ಕಿತ್ತೂರಿನಲ್ಲಿದ್ದರೆ ಸಂಸ್ಥಾನಕ್ಕೆ ಮತ್ತೆ ಸ್ವಾತಂತ್ರ್ಯ ದೊರಕಿಸುವುದು ಸಾಧ್ಯ ಎಂಬ ಆಶೆ ಜಾಗೃತವಾಗಿರದಂತೆ ಮಾಡುವುದೇ ಈ ಆಜ್ಞೆಯ ಉದ್ದೇಶವಾಗಿತ್ತು. ಈ ಆಜ್ಞೆಯಿಂದ ರಾಣಿ ಚೆನ್ನಮ್ಮ ತುಂಬ ಜರ್ಜರಿತಳಾದಳು. ರಾಜ್ಯದ ಉತ್ತರಾಧಿಕಾರಿಯು ಕಿತ್ತೂರಿನಲ್ಲಿ ಇರಲು ಸಾಧ್ಯವಿರದಿದ್ದರೆ, ತಾನು ಕೂಡ ಅಲ್ಲಿ ಇರಲಾರೆನೆಂದು ದೃಢ ನಿರ್ಧಾರ ಕೈಕೊಂಡಳು. ತಾನು ಹಾಗೂ ವೀರಮ್ಮ ಪುಣೆ ಹಾಗೂ ಮುಂಬಯಿಗೆ ಹೋಗಲು ಪರವಾನಿಗೆ ಕೊಡಬೇಕೆಂದು ಥ್ಯಾಕರೆಗೆ ವಿನಂತಿಸಿಕೊಂಡಳು. ಈ ವಿನಂತಿಯು ಒಂದು ವೇಳೆ ಮಾನ್ಯಮಾಡಲ್ಪಡದಿದ್ದರೆ ಬನಾರಸಿಗಾದರೂ ಹೋಗಲು ಒಪ್ಪಿಗೆ ನೀಡಬೇಕೆಂದು ಕೇಳಿಕೊಂಡಳು. ಮನವಿಗೆ ಥ್ಯಾಕರೆ "ಬೇಕಾದರೆ ರಾಣಿ ಚೆನ್ನಮ್ಮನೊಬ್ಬಳು ಮಾತ್ರ ಹೋಗಬಹುದು. ಅದಕ್ಕೆ ಬೇಕಾಗುವ ಖರ್ಚನ್ನು ತಾನು ಕೊಡಲು ಸಿದ್ಧ; ಆದರೆ ದೇಸಾಯಿ ವಿಧವೆಪತ್ನಿ ಮಾತ್ರ ಅವಳೊಡನೆ ಹೋಗಕೂಡದು. ಅವಳಿನ್ನೂ ಚಿಕ್ಕವಯಸ್ಸಿನವಳು. ಈ ವಿಷಯದಲ್ಲಿ ಅವರು ಪರವಾನಿಗೆ ಕೇಳುವ ಅವಶ್ಯಕತೆಯೇ ಇರಲಿಲ್ಲ. ತಮಗೆ ಬೇಕಾದರೆ ಹೋಗಬಹುದು" ಎಂದು ಸೊಕ್ಕಿನ ಉತ್ತರ ಕಳುಹಿಸಿದನು. ಆದರೆ ಶಿವಲಿಂಗಪ್ಪ ಕಿತ್ತೂರನ್ನು ಕೂಡಲೇ ಬಿಟ್ಟು ಹೋಗಬೇಕೆಂಬ ತನ್ನ ನಿರ್ಣಯವನ್ನು ಬದಲಿಸುವುದು ಅಸಾಧ್ಯವೆಂದು ತಿಳಿಸಿದನು. ಈ ಉದ್ಧಟತನವನ್ನು ಸಹಿಸಲಾಗದೆ 1824 ರ ಅಕ್ಟೋಬರ 11 ನೆಯ ದಿನಾಂಕ ರಾಣಿ ಚೆನ್ನಮ್ಮ ಹಾಗೂ ವೀರಮ್ಮ ಕೂಡಿಯೇ ಚಾಪ್ಲಿನ್‌ನಿಗೆ ಒಂದು ಪತ್ರ ಬರೆದರು. ಆ ಪತ್ರದ ಭಾಷಾಂತರ ಹೀಗಿದೆ:

"ರಾಚಪ್ಪನ ಮುಖಾಂತರ ಕಿತ್ತೂರಿನ ಸಂಸ್ಥಾನದ ಇತ್ತೀಚಿನ ವಿದ್ಯಮಾನಗಳ ಬಗೆಗೆ ನಾವು ಬರೆದು ತಿಳಿಸಿದೆವು. ಈ ಪತ್ರ ಮುಟ್ಟಿದ ಬಗ್ಗೆ ಇದುವರೆಗೆ ನಿಮ್ಮಿಂದ ತಿಳಿಯಲಿಲ್ಲ.

ಇಲ್ಲಿಯ ನಿಮ್ಮ ಸದ್ಗೃಹಸ್ಥನಿಂದ (ಥ್ಯಾಕರೇನ ಬಗ್ಗೆ) ಸರಕಾರಕ್ಕೆ ಇದುವರೆಗೆ ದೊರೆತ ಸಹಾನುಭೂತಿ, ಸಹಕಾರದ ವಿಷಯ ನಿಮಗೆ ತಿಳಿದೇ ಇದೆ. ಆತ ತನಗೆ ತಿಳಿದಂತೆ ವರ್ತಿಸುತ್ತ

ನಡೆದಿದ್ದಾನೆ. ಅವನ ವರ್ತನೆಯ ಬಗ್ಗೆ ಒಂದು ಚಕಾರವನ್ನು ಆಡದೇ ನಾವು ಸಹಿಸಿಕೊಂಡು ಇದ್ದೇವೆ. ನೀವು ಅರಿತಂತೆ, ನಮಗೆ ದೊರೆಯಬೇಕಾದ ವಿನಮ್ರ ಹಾಗೂ ಸಹಾನುಭೂತಿಯ ನಡುವಳಿಕೆ, ಈ ರಾಜಮನೆತನದವರಿಗೆ ಸಲ್ಲಬೇಕು. ಅದು ನಮಗೆ ಇದುವರೆಗೆ ದೊರೆಯುತ್ತಲೇ ಇತ್ತು. ನಮಗೆ ಸಲ್ಲಬೇಕಾದ ಈ ಗೌರವಕ್ಕೆ ವ್ಯತಿರಿಕ್ತವಾಗಿ ನಮ್ಮ ಕೂಡ ಮಿ.ಥ್ಯಾಕರೇ ಸಾಹೇಬ ಭೆಟ್ಟಿಯನ್ನು ಅಪೇಕ್ಷಿಸಿದ. ಸಂಸ್ಥಾನದ ಆಗುಹೋಗುಗಳು ಅವನ ಕೈಯಲ್ಲಿಯೇ ಇವೆ ಎಂಬುದನ್ನು ಅನುಲಕ್ಷಿಸಿ ನಾವು ಅದನ್ನೂ ಕೊಟ್ಟೆವು. ಖಜಾನೆಯನ್ನು ತೆಗೆದು, ಅದರಲ್ಲಿದ್ದ ಹಣವನ್ನೆಲ್ಲ ಎಣಿಸಿ, ಖಜಾನೆಗೆ ಬೀಗ ಹಾಕಿಸಿ ತನ್ನ ಮುದ್ರೆ ಒತ್ತಿಸಿದನು. ಸಂಸ್ಥಾನದ ಖರ್ಚಿನ ಬಾಬತ್ತು ದೊಡ್ಡದು.ಅನೇಕ ಜಂಗಮರು ದಿನನಿತ್ಯ ಇಲ್ಲಿಗೆ ಬರುತ್ತಾರೆ. ಅವರನ್ನು ಬರಮಾಡಿಕೊಳ್ಳಲು ಒಂದು ಸ್ಥಳವನ್ನೂ ನಿಗದಿಪಡಿಸಿಲ್ಲ.

"ನಾವು ಎಂದೂ ಹೊರಗೆ ಹೋದವರಲ್ಲ. ನಿಮ್ಮೊಡನೆ ಸ್ನೇಹ ಭಾವವನ್ನು ಉಳಿಸಿಕೊಳ್ಳುವ ಉದ್ದೇಶದಿಂದ ನಾವು ಥ್ಯಾಕರೇನಿಗೆ ಭೆಟ್ಟಿಯ ಅವಕಾಶವನ್ನು ಕೊಟ್ಟೆವು. ದೇವರು ನಮಗೆ ಕಷ್ಟ ಪರಿಸ್ಥಿತಿಯನ್ನು ತಂದಿದ್ದಾನೆ. ನಾವು ಇದುವರೆಗೆ ಎಲ್ಲವನ್ನು ತಾಳ್ಮೆಯಿಂದ ಸಹಿಸಿಕೊಂಡಿದ್ದೇನೆ. ಆದರೆ ನಾವು ಯಾವ ಅಡೆ-ತಡೆಗಳಿಲ್ಲದೆ ಸಂಸ್ಥಾನವನ್ನು ಮುಂದುವರಿಸಿಕೊಂಡು ಹೋಗಲು ನಿಮ್ಮೆಡೆಗೆ ಆಶಾ ಭಾವನೆಯಿಂದ ನೋಡುತ್ತಿದ್ದೇವೆ.

"ಸಾಹೇಬನು ಕುದುರೆ ಲಾಯಗಳ, ಪಾಲಖಾನೆಗಳ, ಸಿಲೇದಾರ, ಸೇಬುಂದಿಗಳ ಎಲ್ಲದರ ಲೆಕ್ಕ ತೆಗೆದುಕೊಳ್ಳುತ್ತಿದ್ದಾನೆ. ಪ್ರತಿಯೊಂದು ಸಣ್ಣ ವಿಷಯವನ್ನು ಕೂಡಾ ತೀಕ್ಷ್ಣವಾಗಿ ನೋಡಲಾಗುತ್ತಿದೆ. ನಮಗೆ ಬೇಕಾದದ್ದು ಯಾವುದೂ ನಮಗೆ ದೊರೆಯುವಂತಿಲ್ಲ. ಆದಕಾರಣ ನಾವು ಸಂಸ್ಥಾನದಲ್ಲಿ ಇದ್ದುಕೊಂಡು, ಜನರಿಗೆ ನಮ್ಮ ಮುಖತೋರಿಸುವುದು ಕೂಡ ಕಷ್ಟವಾಗಿದೆ. ಸಂಸ್ಥಾನದ ಕೀರ್ತಿಯನ್ನು ಕಾಯ್ದು, ಅದನ್ನು ಮುಂದುವರಿಸುವುದು ನಿಮ್ಮನ್ನೇ ಕೂಡಿದೆ. ನಾವು ಸಂಸ್ಥಾನದ ಉತ್ತರಾಧಿಕಾರಿಯಾಗಿ ಒಬ್ಬ "ಚಿರಂಜೀವ"ನನ್ನು ನೇಮಿಸಿದ್ದೇವೆ. ಅವನ ಹೆಸರಿನಲ್ಲಿಯೇ ರಾಜಮುದ್ರೆಯನ್ನು ಮಾಡಲಾಗಿದೆ. ಇದೀಗ ಹಠಾತ್ತನೇ ಅವನನ್ನು ದೂರಕಳಿಸಬೇಕೆಂದು ಆಜ್ಞಾಪಿಸಲಾಗಿದೆ. ಸದ್ಯ ಅವನನ್ನು ಸಂಸ್ಥಾನದಲ್ಲಿಯೇ ಇರಿಸಿಕೊಳ್ಳಲಾಗಿದೆ. ಅವನ ವಿಷಯವಾಗಿ ನಿಮ್ಮಿಂದ ಅಪ್ಪಣೆ ಪಡೆದುಕೊಳ್ಳುವ ಸಂದರ್ಭ ಒದಗಿಬಂದಿರಲಿಲ್ಲ.

"ಮಗು ಇಲ್ಲಿಯೇ ಇದ್ದಿತು. ಸಂಸ್ಥಾನದ ಪದ್ಧತಿಯ ಪ್ರಕಾರ ಏನು ಮಾಡಬೇಕಾಗಿತ್ತೋ ಅದನ್ನು ಮಾಡಲಾಯಿತು. ಪದ್ಧತಿಗೆ ವ್ಯತಿರಿಕ್ತವಾಗಿ ಏನನ್ನೂ ನಾವು ಮಾಡಿಲ್ಲ. ಸಂಸ್ಥಾನಕ್ಕೆ ಸಂಬಂಧಿಸಿದವರೆಲ್ಲರೂ ಕೂಡಿ ಮಾಡಿದ ಕಾರ್ಯವದು. ಆದ ಕಾರಣ ಅವನನ್ನು ಇಲ್ಲಿಂದ ಕಳಿಸುವುದು ಸಾಧ್ಯವಿಲ್ಲ. ಅವನನ್ನು ಇಲ್ಲಿಂದ ಕಳಿಸಿದರೆ, ಇಲ್ಲಿ ನಾವು ಇರುವುದೂ ಸೂಕ್ತವಲ್ಲ.

"ಇಲ್ಲಿ ನಮ್ಮ ಮೇಲೆ ನಡೆಯುವ ದಬ್ಬಾಳಿಕೆ ಅಸಹನೀಯವಾದದ್ದರಿಂದ, ನೀವು ನಮ್ಮ ಕಷ್ಟಗಳನ್ನು ನಿವಾರಿಸುವಿರೆಂಬ ಹಾಗೂ ನಮ್ಮ ಪ್ರತಿಷ್ಠೆಯನ್ನು ರಕ್ಷಿಸುವಿರೆಂಬ ಭರವಸೆಯಿಂದ ಥ್ಯಾಕರೆನನ್ನು ಭೆಟ್ಟಿಯಾಗಿ ನಮಗೆ ನಿಮ್ಮೆಡೆಗೆ ಬರಲು ಪರವಾನಿಗೆ ಕೇಳಲು

ನಮ್ಮ ವಕೀಲರನ್ನು ಕಳಿಸಿಕೊಟ್ಟೆವು. ಥ್ಯಾಕರೆ ಸಾಹೇಬನು ಖಜಾನೆಯನ್ನು ವಶಪಡಿಸಿಕೊಂಡು, ನಮ್ಮ ಕರಾರುಪತ್ರ ಹಾಗು ಸನದುಗಳನ್ನು ಸ್ವಾಧೀನಪಡಿಸಿಕೊಂಡು ತನ್ನ ಮಾಮಲೇದಾರನನ್ನು ಆಡಳಿತಕ್ಕಾಗಿ ನೇಮಿಸಿದ್ದರಿಂದ ನಾವು ಸಂಸ್ಥಾನದಲ್ಲಿ ಇರುವುದು ಅನವಶ್ಯಕವೆಂದು ತಿಳಿಸಲು ನಮ್ಮ ವಕೀಲರ ಮೂಲಕ ಹೇಳಿಕಳಿಸಿದ್ದೆವು. ಮೊದಲಿಗೆ ಥ್ಯಾಕರೆ ನಮಗಾಗಿ ಎಲ್ಲ ವ್ಯವಸ್ಥೆ ಸರಿಯಾಗಿ ಮಾಡುವೆನೆಂದು ತಿಳಿಸಿದ್ದನು. ಆದರೆ ನಡೆದ ಘಟನೆಗಳನ್ನು ನೊಡಿದಾಗ ಅವಕ್ಕೆ ಯಾವ ಅರ್ಥವೂ ಇಲ್ಲವೆಂದು ಮನಗಂಡು ನಾವು ನಮ್ಮ ಆಶೋತ್ತರಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ಪುಣೆ ಹಾಗೂ ಮುಂಬಯಿಗೆ ಹೋಗಲು ಪರವಾನಿಗೆ ಕೊಡಬೇಕೆಂದು ಕೇಳಿದೆವು. ಆ ಬೇಡಿಕೆ ನಿರಾಕರಿಸಿದ್ದಾದರೆ ನಾವು ಬನಾರಸಕ್ಕೆ ಹೋಗಬಯಸುವುದಾಗಿ ತಿಳಿಸಿದೆವು.

"ಈ ನಮ್ಮ ವಿನಂತಿಗೆ ನಮಗೆ ದೊರೆತ ಉತ್ತರವೆಂದರೆ, ನಾವು ಆಗಲೇ ಹೊರಡಲಣಿಯಾಗಿರುವುದರಿಂದ, ನಾವು ಅವನನ್ನು ಕೇಳುವುದು ಅನವಶ್ಯವಾಗಿತ್ತೆಂದೂ, ಬೇಕಾದರೆ ನಾವು ಹೋಗಬಹುದು ಎಂದು.

"ನಮ್ಮೊಡನೆ ಅವನು ಬಳಸುವ ಭಾಷೆ ಪ್ರತಿನಿತ್ಯ ಬದಲಾಗುತ್ತಲೇ ಇರುತ್ತದೆ. ನಮ್ಮ ಸಂಸ್ಥಾನದ ಸೇವಕರ ಮೇಲೆ ಥ್ಯಾಕರೇ ಸದಾ ತಪ್ಪು ಹೊರಿಸುತ್ತಲೇ ಇರುತ್ತಾನೆ. ಇವರೆಲ್ಲರೂ ಸಂಸ್ಥಾನದ ಕೆಲಸಮಾಡುತ್ತ ಇದುವರೆಗೆ ಸುಖವಾಗಿ ಬಾಳಿದ್ದಾರೆ. ಈಗ ಅವರು ಬೇರೆ ಕಡೆಗೆ ಕೆಲಸ ಹುಡುಕಿಕೊಂಡು ಹೋಗುವುದು ಹೇಗೆ ತಾನೇ ಸಾಧ್ಯ? ಅವರನ್ನು ನೇಮಿಸಿಕೊಂಡು ಇಷ್ಟು ವರ್ಷಗಳಾದ ನಂತರ ಅವರನ್ನು ಕೆಲಸದಿಂದ ತೆಗೆಯುವುದು ಸಾಧ್ಯವಿಲ್ಲ. ತಮ್ಮ ಕರ್ತವ್ಯಗಳನ್ನು ಸಹನೆ, ಶಾಂತಿಯಿಂದ ಇದುವರೆಗೆ ಮಾಡಿಕೊಂಡು ಬಂದ ಅವರೊಡನೆ ಕಠೋರವಾದ ಭಾಷೆಯನ್ನು ಬಳಸಲಾಗುತ್ತಿದೆ. ಅವರನ್ನು ಹೀಗೆ ಕೆಟ್ಟರೀತಿಯಿಂದ ನಡೆಯಿಸಿಕೊಳ್ಳುವುದು ಸರಿಯೇ?'

"ಇವೆಲ್ಲ ಸಂಗತಿಗಳನ್ನು ಬರೆದು ನಿಮಗೆ ನಾವು ಕಳಿಸಿರುವುದು ನಿಮಗೆ ಎಲ್ಲ ವಿಷಯ ತಿಳಿದಿರಬೇಕೆಂಬ ಉದ್ದೇಶದಿಂದ. ಥ್ಯಾಕರೇಗೆ ಸಂಸ್ಥಾನವನ್ನು ಮುಂದುವರಿಸಲು ನೀವು ಆಜ್ಞೆ ಮಾಡಿದರೆ ನಿಮಗೆ ಕೀರ್ತಿ ಲಭಿಸುವುದು. ಪರಕೀಯ ಸೈನ್ಯವನ್ನು ಕೋಟೆಯ ಎಲ್ಲ ಭಾಗಗಳಲ್ಲಿ ತಂದಿರಿಸುವುದನ್ನು ವಿಚಾರಿಸಲಾಗುತ್ತಿದೆಯೆಂದು ತಿಳಿಯುತ್ತಿದೆ. ಕಲಾದಗಿಯಿಂದ ಸೈನ್ಯ ಬರುವುದಿದೆಯೆಂಬ ವದಂತಿ ನಮಗೆ ಬಂದಿದೆ. ಹೊಸ ಸೇವಕರನ್ನು ನೇಮಿಸಲಾಗುತ್ತಿದೆ. ಒಟ್ಟಾರೆ ಸಂಸ್ಥಾನದ ಪೂರ್ತಿ ಆಡಳಿತವನ್ನು ಕೈಯಲ್ಲಿ ತೆಗೆದುಕೊಳ್ಳುವ ಉದ್ದೇಶದಿಂದಲೇ ಇವನ್ನೆಲ್ಲ ಮಾಡಲಾಗುತ್ತಿದೆ. ಕೋಟೆಯಲ್ಲಿ ಸೈನ್ಯವನ್ನು ಶೇಖರಿಸುವುದು, ಮಗುವನ್ನು ಕಿತ್ತೂರಿನಿಂದ ಹೊರಹಾಕುವುದು, ಇದಕ್ಕೆ ಏನಾದರೂ ಪ್ರತಿಭಟನೆ ಕಂಡುಬಂದರೆ ಅವುಗಳನ್ನು ಕಠೋರವಾಗಿ ಸದೆಬಡೆಯುವುದು ಇವೇ ಅವರು ಯೋಚಿಸುತ್ತಿರುವ ಕ್ರಮಗಳಾಗಿವೆ. ಈ ಸಂಗತಿಗಳನ್ನು ನಿಮ್ಮ ಅವಗಾಹನೆಗೆ ತಂದಿದ್ದೇವೆ.

"ಕೊನೆಯದಾಗಿ, ಸಂಸ್ಥಾನವನ್ನು ನಮ್ಮ ವಶಕ್ಕೆ ಕೊಡುವುದರ ಬಗ್ಗೆ ನಿಮ್ಮೆಡೆಗೆ ಆಶೆಯ ದೃಷ್ಟಿಯಿಂದ ನೋಡುತ್ತಿದ್ದೇವೆ. ನೀವು ಎಂದಿನಿಂದ ಸಂಸ್ಥಾನವನ್ನು ಸಂರಕ್ಷಿಸುತ್ತ ಬಂದಿದ್ದೀರಿ.

ಸಂಸ್ಥಾನವನ್ನು ನಮ್ಮ ವಶಕ್ಕೆ ಕೊಡುವುದರಿಂದ ನೀವು ಕೀರ್ತಿಗಳಿಸುವಿರಿ. ನಮಗೆ ಸಹಾಯ ಮಾಡುವವರು ನಿಮ್ಮನ್ನು ಬಿಟ್ಟು ಯಾರೂ ಇಲ್ಲ. ನಿಮ್ಮಲ್ಲಿ ನಂಬುಗೆಯಿಟ್ಟು ನಮ್ಮ ಮೇಲೆ ಎಸಗಿದ ಎಲ್ಲ ಅನ್ಯಾಯಗಳನ್ನು, ಇದುವರೆಗೆ ಸಹಿಸಿಕೊಂಡು ಬಂದಿದ್ದೇವೆ. ಉಳಿದೆಲ್ಲ ವಿಷಯಗಳನ್ನು ರಾಚಪ್ಪ ನಿಮಗೆ ತಿಳಿಸುವನು.''

ರಾಜಮನೆತನದ ಹೆಣ್ಣುಮಕ್ಕಳ ಈ ಮನವಿಯ ಬಗ್ಗೆ ಚಾಪ್ಲಿನ್ ಉದಾಸೀನನಾಗಿಯೇ ವರ್ತಿಸಿದನು. ಚಾಪ್ಲಿನ್ನಿಂದ ಉತ್ತರಕ್ಕಾಗಿ ರಾಣಿ ಚೆನ್ನಮ್ಮ ಸಮಾಧಾನದಿಂದ ಒಂದು ವಾರ ಕಾಯ್ದು ನೋಡಿದಳು. ಕೊನೆಗೆ ಬಂದ ಕುತ್ತನ್ನು ಧೈರ್ಯದಿಂದ ಎದುರಿಸಲು ನಿರ್ಧರಿಸಿದಳು. 18ನೆಯ ಅಕ್ಟೋಬರ 1824ರಂದು ಕಿತ್ತೂರಿನ ಸರದಾರರು ಹಾಗೂ ಉಳಿದ ಅಧಿಕಾರಿಗಳನ್ನು ಉದ್ದೇಶಿಸಿ ಅವಳು ಮಾತನಾಡಿದಳು. ಅಲ್ಲಿಯವರೆಗೆ ರಾಜಮನೆತನದವರಿಗೆ ಅವಮಾನ ಗೊಳಿಸಲು ಥ್ಯಾಕರೆ ಕೈಕೊಂಡ ಕ್ರಮಗಳನ್ನೆಲ್ಲ ಅವರಿಗೆ ತಿಳಿಯಪಡಿಸಿದಳು. ರಾಜಮನೆತನದವರು ಹಾಗೂ ಸಂಸ್ಥಾನದ ಅಧಿಕಾರಿಗಳನ್ನು ಥ್ಯಾಕರೆ ನಡೆಯಿಸಿಕೊಂಡ ರೀತಿಯಿಂದ ಅವಳು ಕೋಪತಪ್ತಳಾದಳು. ತನ್ನ ಧೀರೋದಾತ್ತ ನಿಲುಮೆಯ ಬಗ್ಗೆ ಆವೇಶಯುಕ್ತವಾಗಿ ಅವಳು ಹೇಳಿದ ಮಾತುಗಳಿವು:-

''ಕಿತ್ತೂರು ನಮ್ಮದು. ನಮ್ಮ ರಾಜ್ಯದ ಒಡೆಯರು ನಾವೇ. ನಾವು ಅವರಿಂದ ಪರವಾನಿಗೆ ತೆಗೆದುಕೊಳ್ಳಲಿಲ್ಲವೆಂದು, ದತ್ತಕವು ಕ್ರಮಬದ್ಧವಲ್ಲವೆಂದು ಬ್ರಿಟಿಷರು ಹೇಳುತ್ತಾರೆ. ದತ್ತಕ ಮಾಡಿಕೊಳ್ಳಲಿಕ್ಕೆ ಅವರಿಂದ ಪರವಾನಿಗೆ ಪಡೆದುಕೊಳ್ಳಬೇಕೆಂದು ಎಲ್ಲಿ ಹೇಳಿದೆ? ಪೊಲಿಟಿಕಲ್ ಏಜಂಟನಾದ ಥ್ಯಾಕರೆ, ತನ್ನ ಅಧಿಕಾರಮದದ ಅಮಲಿನಲ್ಲಿ ನಾವು ದತ್ತಕ ವಿಷಯದಲ್ಲಿ ಸುಳ್ಳು ಹೇಳಿದ್ದೇವೆಂದು ಹೇಳಿದ್ದಾನೆ. ಡಾ॥ ಬೆಲ್‌ನಂಥ, ಕಂಪನಿಯ ಕೇವಲ ಸಣ್ಣ ನೌಕರನ ಮಾತನ್ನು ಆತ ನಂಬಲು ಸಿದ್ಧ. ಆದರೆ ನಮ್ಮ ಮಾತನ್ನು ಆತ ನಂಬಲು ಸಿದ್ಧವಿಲ್ಲ. ವ್ಯಾಪಾರದ ನೆವ ಮಾಡಿಕೊಂಡು ಬ್ರಿಟಿಷರು ನಮ್ಮ ದೇಶಕ್ಕೆ ಬಂದು, ನಮ್ಮೊಳಗೇ ನಾವು ಬಡಿದಾಡುತ್ತಿರುವದನ್ನು ಕಂಡು ಅವರು ನಮ್ಮ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡು ನಮ್ಮಮೇಲೆ ಅಧಿಕಾರ ಚಲಾಯಿಸಲು ನೋಡುತ್ತಿದ್ದಾರೆ. ನಾವು ಅವರಿಗೆ ಕೈತುಂಬಾ ನಝರಾಣಾ ಹಣ ಕೊಡಬೇಕಂತೆ. ದೇಶದ ಈ ಭಾಗದಲ್ಲಿ ಉಳಿದ ರಾಜರು, ದೇಸಾಯರನ್ನು ಮೋಸದಿಂದ, ನೀಚತನದಿಂದ ಸದೆಬಡೆದು ಕೈವಶ ಮಾಡಿಕೊಂಡಿರಬಹುದು. ನಮಗೆ ಹಲವಾರು ಬಾರಿ ಪೇಶ್ವೆಯರು ದ್ರೋಹಬಗೆದಿರಬಹುದು. ಆದರೆ ಅವರು ನಮ್ಮವರೇ, ನಮ್ಮಬಂಧುಗಳು ಎಂಬುದನ್ನು ನಾವು ಮರೆಯಬಾರದು. ಅವರು ಒಂದಿಲ್ಲೊಂದು ದಿನ ತಮ್ಮ ತಪ್ಪುಗಳನ್ನು ತಿಳಿದುಕೊಂಡು ನಮ್ಮೊಡನೆ ಕೂಡಿಕೊಂಡು, ಈ ಪರಕೀಯರನ್ನು ಈ ಪವಿತ್ರಭೂಮಿಯಿಂದ ಹೊಡೆದೋಡಿಸುವ ಕಾರ್ಯದಲ್ಲಿ ನೆರವಾಗಬಹುದು. ಈ ಬ್ರಿಟಿಷರೇನು ನಮ್ಮ ಬಾಂಧವರೆ? ಅವರು ನಮ್ಮ ದೇಶದವರೇ? ಥ್ಯಾಕರೇ ಹಾಗೂ ಅವನ ಸ್ತುತಿ ಪಾಠಕರು ಕಿತ್ತೂರಿನಂಥ ಸಣ್ಣ ರಾಜ್ಯವನ್ನು ಕ್ಷಣಾರ್ಧದಲ್ಲಿ ಸದೆ ಬಡೆಯಬಹುದೆಂದು ಕನಸು ಕಾಣುತ್ತಿರಬಹುದು. ಅವರು ನಿಜವಾಗಿಯೂ ತಪ್ಪು ತಿಳುವಳಿಕೆಯಲ್ಲಿದ್ದಾರೆ. ಕಿತ್ತೂರಿನ

ಜನತೆ ತಮ್ಮ ಜೀವಕ್ಕಿಂತ ಸ್ವಾತಂತ್ರ್ಯವನ್ನು ಹೆಚ್ಚು ಪ್ರೀತಿಸುತ್ತಾರೆ ಎಂಬುದನ್ನು ಅವರು ಅರಿಯರು. ಸಾವಿರಾರು ಜನ ಸ್ವಾತಂತ್ರ್ಯ ಹೋರಾಟಗಾರರು ಸುರಿಸಿದ ರಕ್ತಸ್ನಾನದಿಂದ ಕಿತ್ತೂರಿನ ಭೂಮಿ ಪವಿತ್ರಗೊಳಿಸಲ್ಪಟ್ಟಿದೆಯೆಂಬುದನ್ನು ಅವರೇನು ಬಲ್ಲರು? ಅವರ ತ್ಯಾಗ ಬಲಿದಾನಗಳಿಂದ ಕಿತ್ತೂರಿನ ಸ್ವಾತಂತ್ರ್ಯದ ಪತಾಕೆ ಅಂದಿನಿಂದ ಇಂದಿನವರೆಗೆ ಆಕಾಶದಲ್ಲಿ ತಲೆಯೆತ್ತಿ ನಿಂತಿದೆ. ಕಿತ್ತೂರು ಸಣ್ಣ ಸಂಸ್ಥಾನವೇನೋ ನಿಜ. ಸಂಖ್ಯಾಬಲದ ದೃಷ್ಟಿಯಿಂದ, ಬ್ರಿಟಿಷರಿಗಿಂತ ನಮ್ಮ ಸೈನ್ಯ ಬಹಳ ಸಣ್ಣದು. ಆದರೆ ನಮ್ಮ ಸೈನಿಕರು ಬಾಡಿಗೆ ಸಿಪಾಯಿಗಳಲ್ಲ. ದೇಶಭಿಮಾನ, ಈ ಪವಿತ್ರಭೂಮಿಯ ಬಗ್ಗೆ ಅಪಾರವಾದ ಕಳಕಳಿ ಹಾಗೂ ಸ್ವಾತಂತ್ರ್ಯ ಪ್ರೇಮ ಇವು ಅವರ ನರನಾಡಿಗಳಲ್ಲಿ ಪ್ರವಹಿಸುತ್ತಿವೆ. ನಮ್ಮ ಒಬ್ಬೊಬ್ಬ ಸೈನಿಕ ಬ್ರಿಟಿಷರ 10 ಸೈನಿಕರಿಗೆ ಸಮಾನ. ಮಿ.ಥ್ಯಾಕರೆ ಮತ್ತು ಮಿ. ಚಾಪ್ಲಿನ್ ಅವರಿಗೆ ಎಂಥ ದುರ್ಧರ ಪ್ರಸಂಗ ಒದಗಿದರೂ ನಾವು ಬಾಗುವುದಿಲ್ಲ ಎಂದು ಸಾರಿ ಹೇಳೋಣ. ಒಬ್ಬ ಮನುಷ್ಯ ಬದುಕಿರುವವರೆಗು ಕಿತ್ತೂರು ಅವರೊಡನೆ ಹೋರಾಡುವದು. ಬ್ರಿಟಿಷರ ಗುಲಾಮರಾಗಿ ಬಾಳುವುದಕ್ಕಿಂತ ಸಾಯುವುದೇ ಮೇಲೆಂದು ಕಿತ್ತೂರಿನ ಜನ ಬಲ್ಲರು.''

ರಾಣಿ ಚೆನ್ನಮ್ಮನ ಈ ಸ್ಫೂರ್ತಿದಾಯಕ ಮಾತುಗಳು ಅಲ್ಲಿ ನೆರೆದ ಜನತೆಯ ಹಾಗೂ ಸೈನಿಕರ ಕಲಿತನವನ್ನು ಬಡಿದೆಬ್ಬಿಸಿದವು. ತತ್‌ಕ್ಷಣದಲ್ಲಿ ಕಿತ್ತೂರ ಸೈನಿಕರ ಖಡ್ಗಗಳು ಝುಳಪಿಸಿದವು. ಅವರೆಲ್ಲ ಒಕ್ಕೊರಲಿನಿಂದ ``ಕಿತ್ತೂರಿಗೆ ಜಯವಾಗಲಿ! ರಾಣಿ ಚೆನ್ನಮ್ಮನಿಗೆ ಜಯವಾಗಲಿ!!'' ಎಂದು ಉದ್ಘೋಷಿಸಿದರು. ಅವರ ಉದ್ಘೋಷದ ಹಾಗೂ ಕಹಳೆಯ ಮೊಳಗು ಕಿತ್ತೂರಿನ ಕೋಟೆಯಲ್ಲಿ ಕಿವಿ ಗಡಚಿಕ್ಕುವಂತೆ ಪ್ರತಿಧ್ವನಿಸಿದವು. ಬ್ರಿಟಿಷರ ವಿರುದ್ಧ ಯುದ್ಧದ ಕಹಳೆಯನ್ನು ಅಂದು ಊದಲಾಯಿತು.

# 6. ಅಮೋಘ ವಿಜಯ

ಅಂದು ಸಂಜೆ ತನ್ನ ನಂಬುಗೆಯ ಸರದಾರರು ಹಾಗೂ ಅಧಿಕಾರಿಗಳಿಗೆ ವಿದಾಯ ಹೇಳಿ, ಅರಮನೆಗೆ ಮರಳಿ ರಾಣಿ ಚೆನ್ನಮ್ಮ ಹರ್ಷಚಿತ್ತದಿಂದ ಹಾಯಾಗಿ ಮಲಗಿದಳು. ಅಂದು ರಾತ್ರಿ ಅವಳೊಂದು ಕನಸು ಕಂಡಳೆಂದು ಒಂದು ಆಖ್ಯಾಯಿಕೆಯಿದೆ. ಆ ಕನಸಿನಲ್ಲಿ ಆಕೆಯ ಗತಿಸಿದ ಪ್ರೀತಿಯ ಪತಿ ಮಲ್ಲಸರ್ಜ ಕಾಣಿಸಿಕೊಂಡು ಮಾತನಾಡಿದನು. ಕಿತ್ತೂರಿನ ಘನತೆ ಹಾಗೂ ಸ್ವಾತಂತ್ರ್ಯವನ್ನು ರಕ್ಷಿಸಲು ಆಕೆ ಧೀರೋದಾತ್ತವಾದ ಪಾತ್ರವನ್ನು ವಹಿಸಬೇಕಾದ ಸಮಯ ಸನ್ನಿಹಿತವಾಗಿದೆಯೆಂದು ಮಲ್ಲಸರ್ಜ ಆಕೆಗೆ ಹೇಳಿ, ಹುರಿದುಂಬಿಸಿದನು. ಸೈನಿಕರ ಉಡುಗೆಗಳನ್ನು ತೊಟ್ಟು, ಸ್ವತಃ ನೀನೇ ಬ್ರಿಟಿಷರ ವಿರುದ್ಧ ಕಿತ್ತೂರಿನ ಸೈನ್ಯದ ನಾಯಕತ್ವವಹಿಸಿ ಯುದ್ಧಮಾಡಬೇಕೆಂದು ಆತ ಆಕೆಗೆ ತಿಳಿಸಿದನು. ರಾಣಿ ಚೆನ್ನಮ್ಮ ಅವನ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುವುದಾಗಿ, ಪರಕೀಯ ಆಕ್ರಮಣಕಾರರ ವಿರುದ್ಧ ಯುದ್ಧದ ನಾಯಕತ್ವ ವಹಿಸಿಕೊಂಡು ಹೋರಾಡುವುದಾಗಿ ವಚನವನ್ನಿತ್ತಳು. ಮರುದಿನ ಬೆಳಗಿನಲ್ಲಿ ಎದ್ದಾಗ ಅವಳಿಗೆ ರಾತ್ರಿ ಕನಸಿನಲ್ಲಿ ಕಂಡದೆಲ್ಲ ನಿಚ್ಚಳವಾಗಿ ಕಣ್ಣು ಮುಂದೆ ಕಟ್ಟಿದಂತಿತ್ತು. ಅವಳು ಅವಸರದಿಂದ ಕಿತ್ತೂರಿನ ಕಲ್ಲುಮಠಕ್ಕೆ ಹೋಗಿ ಕನಸಿನಲ್ಲಿ ನಡೆದ ವಿಷಯಗಳನ್ನೆಲ್ಲ ತಿಳಿಸಿ, ತನ್ನ ದೃಢನಿರ್ಧಾರವನ್ನು ನಿವೇದಿಸಿ, ಸ್ವಾಮಿಗಳ ಆಶೀರ್ವಾದವನ್ನು ಪಡೆದುಕೊಂಡಳು. ಅರಮನೆಗೆ ಮರಳಿದೊಡನೆ, ಕಿತ್ತೂರಿನ ಸೈನ್ಯಬಲದ ಮುಖ್ಯ ಸೇನಾಧಿಕಾರಿಯಾದ ಸರದಾರ ಗುರುಸಿದ್ದಪ್ಪಹಾಗೂ ಉಳಿದ ಅಧಿಕಾರಿಗಳನ್ನು ಕರೆಯಕಳಿಸಿದಳು. ಅವರೊಡನೆ, ಬ್ರಿಟಿಷರೊಂದಿಗೆ ಹೋರಾಟದಲ್ಲಿ ತಾವು ಅನುಸರಿಸಬೇಕಾದ ಯುದ್ಧ ನೀತಿ, ಯುಕ್ತಿಗಳ ಬಗ್ಗೆ ದೀರ್ಘವಾಗಿ ಚರ್ಚಿಸಿದಳು.

ಬ್ರಿಟಿಷ ಸೈನ್ಯದ ಸಂಖ್ಯಾಬಲ ಹಾಗೂ ಅಧಿಕ ಆಯುಧ ಸಾಮಾಗ್ರಿಗಳ ಬಗ್ಗೆ ರಾಣಿ ಚೆನ್ನಮ್ಮನಿಗೆ ಪರಿಜ್ಞಾನವಿದ್ದಿತು. ಕೊಲ್ಲಾಪುರದ ರಾಜನು ಕಿತ್ತೂರಿನ ಈ ಕಠಿಣ ಪ್ರಸಂಗದಲ್ಲಿ ತಮ್ಮ ಸಹಾಯಕ್ಕೆ ಬರಬಹುದೆಂದು ಅವಳು ಆಶಿಸಿದ್ದಳು. ಆತನು ತನ್ನ ಸೈನ್ಯದ ಒಂದು ಭಾಗನ್ನು ಕೂಡಲೇ ಕಳಿಸಿಕೊಡಬೇಕೆಂದು ಬಿನ್ನವಿಸಲು, ಒಬ್ಬ ನಂಬಿಗೆಯ ಸರದಾರನನ್ನು ಕೊಲ್ಲಾಪುರದ ರಾಜನೆಡೆಗೆ ಅವಸರದಿಂದ ಕಳಿಸಿಕೊಡಲಾಯಿತು. ಕಿತ್ತೂರಿನ ಸಂಸ್ಥಾನದ ಎಲ್ಲ ಸರದಾರರು, ಸುಬೇದಾರರು, ಕಿಲ್ಲೇದಾರರು, ದಳವಾಯಿ ಹಾಗೂ ಚೌಬಾರಿಗಳಿಗೆ ಯುದ್ಧಕ್ರಮದ ವಿವರವಾದ ತಿಳುವಳಿಕೆ ನೀಡಲಾಯಿತು. ಯುದ್ಧ ಕಾಲದಲ್ಲಿ ಸೈನಿಕರಾಗಿ

ಹೋರಾಡುವ ಕರಾರಿನ ಮೇಲೆ ಜಮೀನು ಪಡೆದ, ಹಳ್ಳಿಹಳ್ಳಿಯಲ್ಲಿಯ ಶೇತ್ ಸನದಿಗಳಿಗೆ ಕಿತ್ತೂರಿಗೆ ಕೂಡಲೇ ಬರಲು ಹೇಳಿಕಳಿಸಲಾಯಿತು. ಕಿತ್ತೂರಿನ ಸುತ್ತಲಿದ್ದ ಎಂಟು ಹಳ್ಳಿಗಳಲ್ಲಿ ರಚಿತವಾದ ಗುಡ್ಡದ ಮೇಲಿನ ಕಾವಲು ಗೋಪುರಗಳಿಗೆ ಕಿಲ್ಲೇದಾರರು ಕುದುರೆಯೇರಿ ಧಾವಿಸಿದರು. ಕಿತ್ತೂರಿನೆಡೆಗೆ ಯಾವುದೇ ದಿಕ್ಕಿನಿಂದ ವೈರಿಪಡೆಗಳು ಪ್ರವೇಶಿಸುವುದನ್ನು ಕಂಡ ಕೂಡಲೇ ಕಿತ್ತೂರಿಗೆ ಸಂಕೇತಗಳನ್ನು ಕಳಿಸಿಕೊಡಲು ಅವರು ಸಿದ್ಧರಾದರು. ಕೋಟೆಯ ಪ್ರಾಕಾರಗಳನ್ನು ರಕ್ಷಿಸಲು ಅರಮನೆಯ ಪಶ್ಚಿಮ ಭಾಗದಲ್ಲಿರುವ ಕೆಮ್ಮನಮರಡಿ ಹಾಗೂ ಗಡಾದಮರಡಿಗಳ ಮೇಲೆ ಕಿಲ್ಲೇದಾರರ ಕಾವಲನ್ನಿಡಲಾಯಿತು. ಎತ್ತರದ ಗಡಾದಮರ ಡಿಯ ಹುಡೆಯ ಮೇಲಿಂದ 15-20 ಮೈಲುದೂರದವರೆಗಿನ ಸುತ್ತಲಿನ ಪ್ರದೇಶವನ್ನು ನಿಚ್ಚಳವಾಗಿ ನೋಡಲು ಸಾಧ್ಯವಾಗಿತ್ತು. ಆಗಿನ ಕಿತ್ತೂರಿನ ಸೈನಿಕರಲ್ಲಿ, 7,000 ಕಾಲಾಳುಗಳು, 2,000 ಕುದುರೆ ಸವಾರರು, 1,000 ಒಂಟೆಗಳು ಹಾಗೂ 50 ಆನೆಗಳೂ, ಎರಡು 24 ಪೌಂಡಿನ ಹಿತ್ತಾಳಿಯ ತೋಪುಗಳು ಮತ್ತು ಹೆಚ್ಚಿನ ಶಕ್ತಿಯ ಇತರ 14 ತೋಪುಗಳೂ ಇದ್ದವು. ಕಿತ್ತೂರಿನ ಸೈನಿಕರಲ್ಲಿ ಬಂದೂಕು, ಖಡ್ಗ; ಬಿಲ್ಲು – ಬಾಣ, ಭರ್ಜಿ ಹಾಗೂ ಚಪಗೊಡ್ಲಿಯಂಥ ಹಲವಾರು ಬಗೆಯ ಆಯುಧಗಳಿದ್ದವು. ಇದಲ್ಲದೆ ಯುದ್ಧಕಾಲದಲ್ಲಿ ಕರೆಯಿಸಿಕೊಳ್ಳಬಹುದಾದ ತರಬೇತಿ ಹೊಂದಿದ 6,000 ಶೇತ್ ಸನದಿಗಳೂ ಇದ್ದರು. ಇಡೀ ಸೈನ್ಯಕ್ಕೆ ಎಚ್ಚರಿಕೆಯಿಂದಿರಲು ಆಜ್ಞಾಪಿಸಿ, ಎಲ್ಲ ಆಯಕಟ್ಟಿನ ಸ್ಥಳಗಳಲ್ಲಿ ಸೈನ್ಯದ ಪಡೆಗಳನ್ನು ಇಡಲಾಯಿತು.

ಕಾವಲು ಗೋಪುರಗಳ ಕಿಲ್ಲೇದಾರ ಹಾಗೂ ದಳವಾಯಿಗಳಿಗೆ ಬ್ರಿಟಿಷ್ ಆಫೀಸರರ ಆಜ್ಞೆಗಳನ್ನು ಪರಿಪಾಲಿಸದಂತೆ ವಿಧಿಸಲಾಯಿತು. ಅವರು ಏನಾದರೂ ಆಜ್ಞಾಪಿಸಿದರೆ, ರಾಣಿ ಚೆನ್ನಮ್ಮನ ಆಜ್ಞೆಯ ಹೊರತು ಬೇರೆ ಯಾರ ಆಜ್ಞೆಯನ್ನು ಅವರು ಪಾಲಿಸುವುದಿಲ್ಲವೆಂದು ಸ್ಪಷ್ಟವಾಗಿ ಅವರಿಗೆ ಹೇಳಲು ಕಟ್ಟಾಜ್ಞೆ ವಿಧಿಸಲಾಯಿತು.

ಕೋಟೆಯ ಒಳಗೂ ಹೊರಗೂ ರಭಸದ ಚಟುವಟಿಕೆ ಕಂಡುಬರುತ್ತಿತ್ತು. ರಾಣಿ ಚೆನ್ನಮ್ಮನ ಸಂದೇಶಗಳನ್ನು ಹೊತ್ತು ಕಿತ್ತೂರಿನಿಂದ ಎಲ್ಲ ಕಡೆಗೆ ದೂತರು ರಭಸದಿಂದ ಧಾವಿಸುತ್ತಿದ್ದರು. ದ್ವಾರಬಾಗಿಲುಗಳನ್ನು ಕಾಯುತ್ತಿದ್ದ ಹಲವು ಬ್ರಿಟಿಷ್ ಸೈನಿಕರು ಅವರನ್ನು ತಡೆಗಟ್ಟಲು ಯತ್ನಿಸಿದರು. ರಾಣಿ ಚೆನ್ನಮ್ಮನ ದೂತರು, ಅವರು ಚೆನ್ನಮ್ಮ ರಾಣಿಯ ಆಜ್ಞೆಯನ್ನು ಪಾಲಿಸುವರೆಂತಲೂ ಅವರನ್ನು ಯಾರೂ ತಡೆಗಟ್ಟಲಾರರೆಂದೂ ಸ್ಪಷ್ಟವಾಗಿ ಹೇಳಿ, ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ಈ ಆಶ್ಚರ್ಯಕರ ಪ್ರತಿಭಟನೆಯ ಧಕ್ಕೆಯಿಂದ ಚೇತರಿಸಿಕೊಂಡು, ಬ್ರಿಟಿಷ್ ಸೈನಿಕರು ಧಾರವಾಡಕ್ಕೆ ದೂತರನ್ನು ಕಳುಹಿಸಿ, ಕಿತ್ತೂರಿನ ಜನತೆ ಬಂಡಾಯವೇಳುವ ಮನಸ್ಥಿತಿಯಲ್ಲಿದ್ದಾರೆಂತಲೂ, ಯಾವುದೇ ವೇಳೆಗೆ ತೊಂದರೆ ಉಂಟಾಗಬಹುದೆಂದೂ ಹೇಳಿಕಳಿಸಿದರು. ಈ ಸಂದೇಶ ಥ್ಯಾಕರೆಗೆ ಅಕ್ಟೋಬರ 19ರಂದು ತಲುಪಿತು. ಅಷ್ಟರಲ್ಲಿ ಅವನಿಗೆ 5ನೆಯ ನೇಟಿವ್ಹ ಇನ್‌ಫೆಂಟ್ರಿ ಸೈನ್ಯದ ಒಂದು ಶಾಶ್ವತ ವಿಭಾಗದ ಬ್ರಿಟಿಷ ಪಡೆಯು ಕಲಾದಗಿಯಿಂದ ಬೆಳಗಾವಿಗೆ ಹೊರಟಿದೆಯೆಂಬ ವಿಷಯ ಗುಪ್ತಚಾರರ ಮುಖಾಂತರ ತಿಳಿದುಬಂದಿತ್ತು. ಈ ಪಡೆಯಲ್ಲಿ 500 ಕಾಲಾಳುಗಳು. 100

ಕುದುರೆ ಸವಾರರು ಇದ್ದರು. ಆತನು ಕೂಡಲೇ ಈ ಪಡೆಯು ತಮ್ಮ ದಾರಿಯನ್ನು ಬದಲಿಸಿ ಕಿತ್ತೂರಿಗೆ ಬರಲು ಜರೂರು ಸಂದೇಶ ಕಳುಹಿಸಿಕೊಟ್ಟನು. ಕಿತ್ತೂರಿನಲ್ಲಿ ದಂಗೆಯೇಳುವ ಸಂಭವವಿದೆಯೆಂಬುದನ್ನು ಆತನು ಹೇಳಿಕಳಿಸಿದ್ದನು. 1824 ನೆಯ ಅಕ್ಟೋಬರ 20 ರಂದು ಮುಂಜಾವು ಈ ಪಡೆ ಕಿತ್ತೂರನ್ನು ತಲುಪಿತು.

ಅಷ್ಟರಲ್ಲಿ ಥ್ಯಾಕರೆ ಧಾರವಾಡದಲ್ಲಿ ತನ್ನ ಹತ್ತಿರವಿದ್ದ ಸೈನ್ಯ ಹಾಗೂ ತನ್ನೊಡನೆ ಕೆಲಸಮಾಡುತ್ತಿದ್ದ ಹಲವು ಅಧಿಕಾರಿಗಳೊಂದಿಗೆ ಕಿತ್ತೂರನ್ನು ತಲುಪಿದ್ದನು. ಕಿತ್ತೂರಿನ ಹೊರಭಾಗದಲ್ಲಿ ಬ್ರಿಟಿಷ್ ಸೈನ್ಯ ಠಾಣೆ ಹಾಕಿದ್ದನ್ನು ಕಂಡೊಡನೆ, ಕಿತ್ತೂರಿನ ರಾಣಿ ಹಾಗೂ ಪ್ರಜೆಗಳು ಹೆದರಿ, ಅವರಿಗೆ ಶರಣಾಗತರಾಗುವರೆಂದು ಆತ ಭಾವಿಸಿದ್ದನು. ದಂಗೆಯನ್ನು ಕ್ಷಣಾರ್ಧದಲ್ಲಿ ತಾನು ಹತ್ತಿಕ್ಕಬಲ್ಲನೆಂಬ ಅಚಲವಾದ ಭರವಸೆ ಅವನಿಗಿದ್ದಿತು. ಕಾದಾಡುವ ಸೈನಿಕ ಪಡೆಯ ವಸತಿಗೆ, ಕೆಮ್ಮನಮರಡಿಯ ಪೂರ್ವಭಾಗದಲ್ಲಿ ಡೇರೆಗಳನ್ನು ನಿರ್ಮಿಸಲು ಹಾಗೂ ಸ್ವಲ್ಪ ದೂರದಲ್ಲಿ ಕೆಮ್ಮನಮರಡಿಯ ಪಶ್ಚಿಮಭಾಗದ ಇಳಿಜಾರಿನಲ್ಲಿ ಈ ಸೈನ್ಯದೊಡನೆ ಬಂದ ಅಧಿಕಾರಿಗಳ ಮನೆಯವರು ಹಾಗೂ ಮಕ್ಕಳಿಗೆ ಡೇರೆಗಳನ್ನು ನಿರ್ಮಿಸಲು ಆತನು ಆಜ್ಞಾಪಿಸಿದನು. 1824 ರ ಅಕ್ಟೋಬರ 20ರಂದು ಬ್ರಿಟಿಷ್ ಸೈನಿಕರು ಈ ನಿವೇಶನಗಳನ್ನು ನಿರ್ಮಿಸುವ ಕಾರ್ಯದಲ್ಲಿ ನಿರತರಾಗಿದ್ದರು.

ಅಕ್ಟೋಬರ 21ರ ಮುಂಜಾನೆ ಥ್ಯಾಕರೆ, ಸ್ಟೀವನ್ಸನ್ ಮತ್ತು ಇಲಿಯಟ್‌ರನ್ನು, ಕಿತ್ತೂರಿನ ಎಲ್ಲ ಪ್ರಮುಖರು ಹಾಗೂ ಮುಖ್ಯ ಅಧಿಕಾರಿಗಳಿಂದ ಕಿತ್ತೂರ ಖಜಾನೆಯ ಸುರಕ್ಷಿತತೆಗೆ ಬದ್ಧರಾಗುವ, ಅದಕ್ಕೆ ತಪ್ಪಿದರೆ ಜುಲ್ಮಾನೆ ಕೊಡುವ ಕರಾರು ಪತ್ರಕ್ಕೆ ಸಹಿ ಮಾಡಿಸಿಕೊಂಡು ಬರಲು, ಕಿತ್ತೂರ ಕೋಟೆಗೆ ಕಳುಹಿಸಿಕೊಟ್ಟನು. ಅವನ ಆಜ್ಞೆಯ ಪ್ರಕಾರ ಅವರು ಗುರುಸಿದ್ದಪ್ಪ ಮತ್ತು ಇತರ ಕಿತ್ತೂರಿನ ಪ್ರಮುಖ ಅಧಿಕಾರಿಗಳನ್ನು ಭೆಟ್ಟಿಯಾಗಿ, ಥ್ಯಾಕರೇನ ಆಜ್ಞೆಯನ್ವಯ ಕರಾರುಪತ್ರಕ್ಕೆ ಸಹಿ ಹಾಕಲು ಕೇಳಿದರು. ಕಿತ್ತೂರಿನಲ್ಲಿ ವಾತಾವರಣ ಸಂಪೂರ್ಣ ಬದಲಿಯಾಗಿತ್ತೆಂಬುದೂ ಹಾಗೂ ಜನರು ಪ್ರತಿಭಟಿಸುವ ಸ್ಥಿತಿಯಲ್ಲಿದ್ದರೆಂ ಬುದೂ ಅವರಿಗೆ ತಿಳಿದಿರಲಿಲ್ಲ. ಏಜಂಟನ ಆಜ್ಞೆಯನ್ನು ಅವರೆಲ್ಲರೂ ಧಿಃಕರಿಸಿದರು. ಇಂಥ ಯಾವ ಕರಾರಪತ್ರಕ್ಕಾಗಲೀ, ಕಾಗದಕ್ಕಾಗಲೀ ರಾಣಿ ಚೆನ್ನಮ್ಮನ ಒಪ್ಪಿಗೆಯಿಲ್ಲದೆ ಅವರು ಸಹಿ ಮಾಡುವುದಿಲ್ಲವೆಂದು ತಿಳಿಸಿದರು. ಥ್ಯಾಕರೇ ಕೋಪೋದ್ರಿಕ್ತನಾದನು. ಆತನು ಕೂಡಲೇ ಕುದುರೆ ಸವಾರರ ಪಡೆಯ ಕಮಾಂಡರನನ್ನು ಕರೆಕಳುಹಿಸಿದನು. ಕೂಡಲೇ ಅವನು ತನ್ನ ಸವಾರರನ್ನು ಕೋಟೆಯೊಳಗೆ ನುಗ್ಗಿಸಿ ದೇಸಾಯಿಯ ಸೇನಾಧಿಕಾರಿಗಳನ್ನು ಸೆರೆಹಿಡಿದು ತರಲು ಆಜ್ಞಾಪಿಸಿದನು. 100 ಜನ ಕುದುರೆ ಸವಾರರ ಪಡೆ ಅದಾಗಿತ್ತು. ಈ ಕುದುರೆಯ ಸೈನ್ಯ ಕೋಟೆಯಲ್ಲಿ ನುಗ್ಗಿದೊಡನೆ, ತನ್ನ ಸೈನ್ಯವನ್ನು ತಯಾರಿಯಲ್ಲಿಯೇ ಇಟ್ಟಿದ್ದ ಸರದಾರ ಗುರುಸಿದ್ದಪ್ಪ ಆಕ್ರಮಣಕಾರರನ್ನು ಪ್ರತಿಭಟಿಸಿ, ಹಿಮ್ಮೆಟ್ಟಿಸಲು ತನ್ನ ಸೈನ್ಯಕ್ಕೆ ಆಜ್ಞೆಯಿತ್ತನು. ಕಿತ್ತೂರಿನ ಸೈನ್ಯ ಒಮ್ಮೆಲೇ ಅಪ್ಪಳಿಸಿ ಬ್ರಿಟಿಷ್ ಸೈನ್ಯವನ್ನು ಬಲಹೀನಗೊಳಿಸಿ ಹಿಮ್ಮೆಟ್ಟಿಸಿತು.

ಇಷ್ಟರಲ್ಲಿ ಕಿತ್ತೂರಿನ ಸೈನಿಕರು ಕೋಟೆಯ ಮಹಾದ್ವಾರಗಳನ್ನೆಲ್ಲ ಬಂದು ಮಾಡಿದ್ದರು. ಸೋತು ಕಂಗೆಟ್ಟು ಓಡಿಹೋಗಲೆತ್ನಿಸುತ್ತಿದ್ದ ಬ್ರಿಟಿಷ್ ಅಶ್ವಸೇನೆ, ಸಣ್ಣ ಮಾರ್ಗವೊಂದರ

ಮುಖಾಂತರ ಹೊರಹೋಗಲೆತ್ನಿಸಿತು. ರಾಣಿ ಚೆನ್ನಮ್ಮನ ಸೈನಿಕರು ಅವರನ್ನೆಲ್ಲ ಕೋಟೆಯಿಂದ ಹೊರಗೋಡಿಸಲು ಬೆನ್ನಟ್ಟಿ ಹಲವರನ್ನು ಕೊಂದರು. ಉಳಿದವರು ತಪ್ಪಿಸಿಕೊಂಡು ಕೆಮ್ಮನಮರಡಿಯ ತಮ್ಮ ಠಾಣೆಗೆ ತಲುಪಬೇಕಾದರೆ ಸಾಕುಬೇಕಾಯಿತು.

ಅವರಲ್ಲಿ ಕೆಲವರು ಕಿತ್ತೂರಿನ ಮನೆಗಳಲ್ಲಿ ಅಡಗಿಕೊಂಡಿದ್ದರು. ಉಳಿದವರು ಕೆಮ್ಮನಮರಡಿಯ ಡೇರೆಗಳಲ್ಲಿ ಅವಿತುಕೊಂಡಿದ್ದರು. ಬೆನ್ನಟ್ಟಿದ ಸೈನಿಕರು ಕಿತ್ತೂರಿನ ಮನೆಗಳಲ್ಲಿ ಹಾಗೂ ಅ ಡೇರೆಗಳಲ್ಲಿ ಅವಿತುಕೊಂಡ 40 ಜನರನ್ನು ಹಿಡಿದು ಅರಮನೆಗೆ ತಂದರು. ಹೀಗೆ ತಂದವರಲ್ಲಿ ಬ್ರಿಟಿಷ ಕ್ಯಾಂಪಿನ 12 ಸಣ್ಣ ಮಕ್ಕಳೂ ಹಾಗೂ ಕೆಲವರು ಹೆಣ್ಣುಮಕ್ಕಳೂ ಇದ್ದರು. ಇವರೆಲ್ಲರನ್ನೂ ಅರನಮನೆಗೆ ತಂದು ರಾಣಿ ಚೆನ್ನಮ್ಮನ ಮುಂದೆ ನಿಲ್ಲಿಸಲಾಯಿತು. ಆಗ ರಾಣಿ ಚೆನ್ನಮ್ಮ ಸೈನಿಕರನ್ನು ಮಾತ್ರ ಬಂಧಿಸಬೇಕೆಂದು ಆಜ್ಞಾಪಿಸಿದಳು. ಹೆಣ್ಣು ಮಕ್ಕಳು ಹಾಗೂ ಎಳೆಯ ಮಕ್ಕಳನ್ನು ಬಂಧಿಸಿದ್ದಕ್ಕಾಗಿ ತನ್ನ ಸೈನಿಕರನ್ನು ಬೈದಳು. ಅವರ ಬಗ್ಗೆ ಅವಳ ಮನದಲ್ಲಿ ಗೌರವ ಪ್ರೀತಿಗಳು ಮಾತ್ರ ಇದ್ದವು. ಅವರನ್ನು ಕಂಡೊಡನೆ ರಾಣಿ ಚೆನ್ನಮ್ಮ ತನ್ನ ಸಿಂಹಾಸನದಿಂದ ಇಳಿದು ಬಂದು, ಮಕ್ಕಳ ಗಲ್ಲಗಳನ್ನು ಮುಟ್ಟಿ ಪ್ರೀತಿಯಿಂದ ಮಾತನಾಡಿಸಿ 'ಹೆದರಬೇಡಿ' ಎಂದು ಮೈದಡವಿ ಅಪ್ಪಿದಳು. ಅವರಿಗೆ ಯಾವ ಅಪಾಯವೂ ಇಲ್ಲವೆಂದು ಭರವಸೆಯಿತ್ತಳು. ಅವಳ ಪ್ರೀತಿಯ ಮಾತು ಹಾಗೂ ಔದಾರ್ಯದ ನಡತೆಯಿಂದ ಅವರ ಹೆದರಿಕೆ ದೂರಾಗಿ ಅವರು ಹಾಯಾಗಿ ನಿಟ್ಟುಸಿರೆಳೆದರು. ಅವಳ ಆಜ್ಞೆಯ ಮೇರೆಗೆ ಅವರನ್ನು ಅರಮನೆಯಲ್ಲಿ ಕರೆದೊಯ್ದು ಊಟ ಉಪಚಾರ ಮಾಡಿಸಲಾಯಿತು. ಅರಮನೆಯ ಅತಿಥಿ ಗೃಹದಲ್ಲಿ ಅವರಿಗೆ ಆತಿಥ್ಯ ನೀಡಲಾಯಿತು. ಕಿತ್ತೂರಿನ ಅರಮನೆಯಲ್ಲಿ ಅತಿಥಿಗಳಿಗೆ ಕೊಡುವ ಪರಂಪರಾಗತ ಆತಿಥ್ಯದಿಂದ ಅವರನ್ನು ತಣಿಸಲಾಯಿತು.

ಆಮೇಲೆ ಕಿತ್ತೂರಿನ ಹೊರಭಾಗದಲ್ಲಿ ಬೀಡುಬಿಟ್ಟ ಬ್ರಿಟಿಷ ಅಧಿಕಾರಿಗಳಿಗೆ ಅವರ ಹೆಣ್ಣುಮಕ್ಕಳು ಹಾಗೂ ಹುಡುಗರು ಸುರಕ್ಷಿತರಾಗಿದ್ದಾರೆ, ಅವರನ್ನು ಬೇಕಾದಾಗ ಬಂದು ಕರೆದುಕೊಂಡು ಹೋಗಬಹುದೆಂದು ಹೇಳಿ ಕಳಿಸಿದಳು. ರಾಣಿ ಚೆನ್ನಮ್ಮನ ಈ ಔದಾರ್ಯದ ನಡುವಳಿಕೆಯ ಬಗ್ಗೆ ಕೇಳಿದಾಗ ಥ್ಯಾಕರೇನ ಮನಸ್ಸಿನಲ್ಲಿ ಅತೀವ ಆಶ್ಚರ್ಯವೂ, ರಾಣಿ ಚೆನ್ನಮ್ಮನ ಬಗ್ಗೆ ಅಪಾರವಾದ ಗೌರವವೂ ಉಂಟಾದವು. ಅವನಿಗೆ ಈ ಉದಾತ್ತ ಸ್ವಭಾವದ ರಾಣಿ ಚೆನ್ನಮ್ಮನನ್ನು ಪುನಃ ಭೇಟಿಯಾಗಿ ಅನೇಕ ವಿಷಯಗಳನ್ನು ಚರ್ಚಿಸಬೇಕೆಂದೆನಿಸಿತು. ರಾಣಿ ಚೆನ್ನಮ್ಮನಿಗೆ ಪೂರ್ತಿ ಹನ್ನೊಂದು ಹಳ್ಳಿಗಳ ಇನಾಮನ್ನು ಕೊಟ್ಟು ಅವಳೊಡನೆ ಒಪ್ಪಂದಮಾಡಿಕೊಳ್ಳಬೇಕೆಂದು ಥ್ಯಾಕರೆ ಬಯಸಿದ್ದನೆಂದು ಹೇಳಲಾಗುತ್ತದೆ. ಥ್ಯಾಕರೇನ ಸಂದೇಶವನ್ನು ರಾಣಿ ಚೆನ್ನಮ್ಮನಿಗೆ ಮುಟ್ಟಿಸಲಾಯಿತು. ರಾಣಿ ಚೆನ್ನಮ್ಮ ಅದನ್ನು ಅತ್ಯಂತ ತಾತ್ಸಾರದಿಂದ ತಿರಸ್ಕರಿಸಿದಳು. ಅವಳಿಗೆ ಥ್ಯಾಕರೇನನ್ನು ಭೆಟ್ಟಿಯಾಗಲು ಮನಸ್ಸಿರಲಿಲ್ಲ. ತನಗೆ ಆರೋಗ್ಯವೂ ಸರಿಯಲ್ಲವೆಂತಲೂ, ಅವನನ್ನು ಭೇಟಿಯಾಗುವ ಸ್ಥಿತಿಯಲ್ಲಿ ತಾನಿಲ್ಲವೆಂದೂ ಹೇಳಿ ಕಳಿಸಿದಳು. ರಾಣಿಯು ಅವನನ್ನು ಮರುದಿವಸ ಭೆಟ್ಟಿಯಾಗ

ಬಹುದೆಂದು, ತನ್ನ ಭೆಟ್ಟಿಯನ್ನು ಒಂದು ದಿನದ ಮಟ್ಟಿಗೆ ಮುಂದೂಡಿದನು. ಅಂದು ರಾತ್ರಿ ರಾಣಿ ಚೆನ್ನಮ್ಮ ಸರದಾರ ಗುರುಸಿದ್ದಪ್ಪ ಹಾಗೂ ಇತರ ಉನ್ನತ ಅಧಿಕಾರಿಗಳನ್ನು ಅರಮನೆಗೆ ಬರಮಾಡಿಕೊಂಡು ಸುದೀರ್ಘವಾಗಿ ಚರ್ಚೆ ನಡಿಸಿದಳು. ತದನಂತರ, ಬ್ರಿಟಿಷರ ಅಧೀನಕ್ಕೆ ಕಿತ್ತೂರನ್ನು ಒಳಪಡಿಸಬೇಕೆಂಬ ಉದ್ದೇಶದಿಂದ, ಕಿತ್ತೂರಿನ ಜನತೆಯನ್ನು ಹೆದರಿಸಿ ಅಧೀನಗೊಳಿಸಲು, ಆಗಲೇ ಕಿತ್ತೂರಿನ ಮಗ್ಗಲಿಗೆ ಸೈನ್ಯ ಪಡೆಯನ್ನು ತಂದು ನಿಲ್ಲಿಸಿದ ಥ್ಯಾಕರೇನನ್ನು ರಾಣಿ ಚೆನ್ನಮ್ಮ ಭೆಟ್ಟಿಯಾಗುವುದರಲ್ಲಿ ಯಾವ ಸಾರ್ಥಕ್ಯವೂ ಇಲ್ಲವೆಂದು ಒಮ್ಮತದ ನಿರ್ಣಯಕ್ಕೆ ಬಂದರು.

ಮರುದಿವಸ ಮುಂಜಾನೆ ರಾಣಿ ಚೆನ್ನಮ್ಮನನ್ನು ಭಟ್ಟಿಯಾಗುವ ಉದ್ದೇಶದಿಂದ, ಥ್ಯಾಕರೆ ಕೋಟೆಯಲ್ಲಿಯ ಕಚೇರಿಯ ಬಳಿಗೆ ಹೋದನು. ಅಲ್ಲಿದ್ದ ಯಾವ ಅಧಿಕಾರಿ, ಸಿಪಾಯಿಯಾಗಲೀ ಅಥವಾ ಓಡಾಡುತ್ತಿದ್ದ ರಾಜಮನೆತನದವರಾಗಲೀ ಅವನೊಡನೆ ಮಾತನಾಡಲಿಲ್ಲ. ಆತ ತನ್ನನ್ನು ರಾಣಿ ಚೆನ್ನಮ್ಮನೆಡೆಗೆ ಕರೆದೊಯ್ಯಬೇಕೆಂದು ಕೇಳಿದಾಗ ಯಾರೂ ಬರಲು ಸಿದ್ಧರಿರಲಿಲ್ಲ. ಆತನು ಅವರಲ್ಲಿ ಅನೇಕರನ್ನು ತನ್ನೊಡನೆ ಬರಲು ಎಷ್ಟೋಸಲ ಕೇಳಿದನು. ಅವರು ಯಾರೂ ಬರಲು ಸಿದ್ಧರಿರಲಿಲ್ಲ. ಅಂದು ಮಹಾನವಮಿ. ಅರಮನೆಯಲ್ಲಿ ಹಬ್ಬದ ಆಚರಣೆಗಾಗಿ ಸಂಭ್ರಮದ ತಯಾರಿ ನಡೆದಿತ್ತು. ಕಿತ್ತೂರಿನ ಸರದಾರರು, ಸುಬೇದಾರರು, ಊರಿನ ಪ್ರಮುಖರು ಮತ್ತು ಸುತ್ತಲಿನ ಹಳ್ಳಿಗಳ ಅನೇಕ ಶೇತ್ ಸನದಿಗಳು ಬಹುಸಂಖ್ಯೆಯಲ್ಲಿ ಅರಮನೆಯ ಸಭಾಗೃಹದಲ್ಲಿ ಕಿಕ್ಕಿರಿದು ನೆರೆದಿದ್ದರು. ಅರಮನೆಗೆ ಸಾಲಿಟ್ಟಂತೆ ಜನ ಬರ ಹೋಗುವದನ್ನು ಥ್ಯಾಕರೆ ಕಣ್ಣಾರೆ ಕಾಣುತ್ತಿದ್ದ. ಆದರೆ ಅವನನ್ನು ಮಾತನಾಡಿಸುವವರು ಯಾರೂ ಇರಲಿಲ್ಲ. ಆತ ಸಿಡಿಕಿನಿಂದ ಕಿಡಿಕಾರುತ್ತ, ತಮ್ಮ ಠಾಣೆಗೆ ಹಿಂದಿರುಗಿದನು. ತಾನು ಮುಂದೆ ಯಾವ ಕ್ರಮ ಕೈಕೊಳ್ಳಬೇಕೆಂದು ಆತ ತೀವ್ರ ವಿವಂಚನೆಯೊಳಗಾಗಿದ್ದನು.

ಅಂದು ಸಂಜೆ ತನ್ನ ದೂತನ ಸಂಗಡ ಸರದಾರ ಗುರುಸಿದ್ದಪ್ಪ ಹಾಗೂ ಇನ್ನೂ ಹಲುವು ಉನ್ನತ ಅಧಿಕಾರಿಗಳಿಗೆ ಕೂಡಲೇ ತನ್ನನ್ನು ಬಂದು ಕಾಣಲು ಹೇಳಿಕಳಿಸಿದನು. ತಮ್ಮನ್ನು ಇದುವರೆಗೆ ತಮಗೆ ಸಲ್ಲಬೇಕಾದ ಗೌರವದಿಂದ ಥ್ಯಾಕರೇ ಕಂಡಿಲ್ಲ. ಆದಕಾರಣ ಅವರಿಗೆ ಅವನನ್ನು ಭೆಟ್ಟಿಯಾಗಲು ಇಚ್ಛಿಸುವುದಿಲ್ಲವೆಂದು ತಿಳಿಸಿ, ಅವನನ್ನು ಭೆಟ್ಟಿಯಾಗಲು ನಿರಾಕರಿಸಿದರು. ದೂತನಿಂದ ಅವರು ಅವನನ್ನು ಭೆಟ್ಟಿಯಾಗಲು ನಿರಾಕರಿಸಿದ್ದನ್ನು ಕೇಳಿ ಸಿಟ್ಟಿನಿಂದ ತಪ್ತನಾಗಿ ತನ್ನೊಡನೆ ಬಂದ ಬಂದೂಕಧಾರಿ ಸೈನಿಕರ ಕಮಾಂಡರನಾದ ಕ್ಯಾಪ್ಟನ್ ಬ್ಲ್ಯಾಕ್‌ನನ್ನು ಕರೆದು, ಕೋಟೆಯ ದ್ವಾರಬಾಗಿಲದೆಡೆಗೆ ತೋಫಿನ ಗಾಡಿಗಳನ್ನು ಚಲಿಸಲು ಆಜ್ಞಾಪಿಸಿದನು. ಅವನಾಜ್ಞೆಯಂತೆ ಎರಡು ತೋಪಿನ ಗಾಡಿಗಳನ್ನು ಕೋಟೆಯ ದ್ವಾರಬಾಗಿಲಿನ ಎದುರಿಗೆ ಒಯ್ದು ನಿಲ್ಲಿಸಲಾಯಿತು. ಆಗಲೇ ಸಂಜೆಗತ್ತಲು ಮುಸುಕುತ್ತಿದ್ದಿತು. ಥ್ಯಾಕರೆ ಈ ಅವಮಾನಕರ ಘಟನೆಗಳಿಂದ ಅತ್ಯಂತ ಕೋಪತಪ್ತ ನಾಗಿದ್ದನು. ಥ್ಯಾಕರೆ ರಾಣಿ ಚೆನ್ನಮ್ಮನಿಗೆ ಮುಂಜಾನೆಯಷ್ಟರಲ್ಲಿ ಶರಣಾಗತರಾಗಿ ರಾಜಿ

ಮಾಡಿಕೊಳ್ಳದಿದ್ದರೆ ಅಪಾಯ ಕಾದಿದೆಯೆಂದು ಕೊನೆಯ ಎಚ್ಚರಿಕೆಯನ್ನು ಕೊಟ್ಟನು. ಬೆಳಗು ಹರಿಯುವಷ್ಟರಲ್ಲಿ ಕಿತ್ತೂರ ಸೈನ್ಯ ಶರಣಾಗತ ಆಗದಿದ್ದರೆ, ಪೂರ್ಣ ಸೇಡುತೀರಿಸಿಕೊಳ್ಳಲು ಆಗಲೇ ಆತನು ನಿರ್ಧರಿಸಿದ್ದಂತೆ ತೋರಿತು.

ಮರುದಿನ ಮುಂಜಾನೆ, ಅಂದರೆ 1824ರ ಅಕ್ಟೋಬರ 23ರಂದು, ಬ್ರಿಟಿಷ್ ಸೈನ್ಯದ ಮುಖ್ಯಾಧಿಕಾರಿ ಕೋಟೆಯ ಮಹಾದ್ವಾರದಲ್ಲಿ ಕಾವಲಿದ್ದ ಸೈನಿಕರನ್ನು ಬದಲಾಯಿಸಲು, ಸೈನಿಕರನ್ನು ಕರೆದೊಯ್ದನು. ಆತನು ಅಲ್ಲಿ ಕಂಡದ್ದೇನು? ಕೋಟೆಯ ಹೊರಬಾಗಿಲುಗಳು ಮುಚ್ಚಿದ್ದವು. ಬ್ರಿಟಿಷ್ ಕಾವಲುಗಾರರನ್ನು ಒಳಗೆ ಬಿಡಲು ರಾಣಿ ಚೆನ್ನಮ್ಮನ ಕಾವಲುಗಾರರು ನಿರಾಕರಿಸಿದರು. ಥ್ಯಾಕರೆ ತನ್ನ ದೂತರನ್ನು ಕಳಿಸಿ, ಕೋಟೆಯ ಬಾಗಿಲು ತೆರೆದು ಕಾವಲುಗಾರರನ್ನು ಒಳಗೆ ಬಿಟ್ಟು ಅವರು ಕಾವಲು ಮಾಡಲು ಅವಕಾಶ ಕೊಡಬೇಕೆಂದು ಹಲವಾರುಸಲ ಹೇಳಿ ಕಳಿಸಿದನು. ಅದಕ್ಕೆ ರಾಣಿ ಚೆನ್ನಮ್ಮನ ಕಡೆಯವರು ನಿರ್ಭಯದಿಂದ ನಿರಾಕರಿಸಿದರು. ಸಿಟ್ಟಿನಿಂದ ವಿಭ್ರಾಂತನಾದ ಥ್ಯಾಕರೆ ಇನ್ನುಳಿದ ಎರಡೂ ತೋಫಿನ ಗಾಡಿಗಳನ್ನು ಮಹಾದ್ವಾರಕ್ಕೆ ತರಲು ಕ್ಯಾಪ್ಟನ್ ಬ್ಲ್ಯಾಕನಿಗೆ ಆಜ್ಞಾಪಿಸಿದನು. ಅದರಂತೆ ತೋಫಿನ ಗಾಡಿಗಳನ್ನು ತಂದು ನಿಲ್ಲಿಸಲಾಯಿತು. ಬೇಕಾದಾಗ ಬ್ರಿಟಿಷ್ ಸೈನ್ಯಾಧಿಕಾರಿಗಳು, ಕೋಟೆಯ ಬಾಗಿಲನ್ನು ತೋಫಿನಿಂದ ಒಡೆಯಲು ಸಾಧ್ಯವಾಗುವಂತೆ ಎಲ್ಲ ಸನ್ನಾಹ ಮಾಡಿಕೊಳ್ಳಲಾಯಿತು.

ಅಷ್ಟರಲ್ಲಿ ಥ್ಯಾಕರೇನಿಗೆ, ಕೋಟೆಯಲ್ಲಿ ಸುಮಾರು 2,000 ಸೈನ್ಯ ಭರ್ತಿಯಾಗಿ ತಯಾರಿಯಲ್ಲಿ ನಿಂತಿರುವುದಾಗಿಯೂ ಮತ್ತು ಪ್ರತಿಕ್ಷಣ ಹೆಚ್ಚು ಹೆಚ್ಚು ಸೈನಿಕರು ಒಳಗೆ ಬರುತ್ತಲೇ ಇರುವ ವಿಷಯ ತಿಳಿದಿತ್ತು. ಆದಕಾರಣ ತನ್ನ ಕುದುರೆ ಸವಾರ ವಿಭಾಗ, ಬಂದೂಕ ಹಾಗೂ ತೋಪಿನ ವಿಭಾಗ ಹಾಗೂ ಕಾಲಾಳುಗಳ ವಿಭಾಗಗಳನ್ನು ಕೋಟೆಯ ಮಹಾದ್ವಾರದ ಎದುರುಗಡೆಗೆ ಮುಂದುವರಿಸಲು ಆಜ್ಞೆಯಿತ್ತನು. ಆಮೇಲೆ ಕಿತ್ತೂರ ಸೈನ್ಯದ ಪ್ರಧಾನಾಧಿಕಾರಿಯಾದ ಸರದಾರ ಗುರುಸಿದ್ದಪ್ಪನಿಗೆ ದೂತನ ಮುಖಾಂತರ ಕೋಟೆಯ ಬಾಗಿಲುಗಳನ್ನು ತೆರೆಯಲು ಕೊನೆಯ ಬಾರಿಗೆಯೆಂದು ಹೇಳಿ ಕಳಿಸಿದನು. ಕೂಡಲೇ ಸರದಾರ ಗುರುಸಿದ್ಧಪ್ಪ ಕೋಟೆಯ ದ್ವಾರದೆದುರು ನಿಲ್ಲಿಸಿದ ಬ್ರಿಟಿಷ್ ಸೈನ್ಯವನ್ನು ಸುರಕ್ಷಿತವಾದ ದೂರಕ್ಕೆ ಹಿಂದೆ ಸರಿಸದ ವಿನಹ ಕೋಟೆಯ ಬಾಗಿಲುಗಳನ್ನು ತೆರೆಯುವುದುದಿಲ್ಲ ಎಂದು ಹೇಳಿ ಕಳಿಸಿದನು. ಥ್ಯಾಕರೆ – ''ಒಂದು ಘಡಿ (24 ಮಿನಿಟುಗಳು) ಯಲ್ಲಿ ಕೋಟೆಯ ಬಾಗಿಲು ತೆರೆಯದಿದ್ದರೆ ಬಾಗಿಲನ್ನು ತೋಫಿನಿಂದ ಒಡೆದು ತೆಗೆಯಲಾಗುವುದು'' ಎಂದು ಕೊನೆಯ ಎಚ್ಚರಿಕೆ ಕೊಟ್ಟನು. ಈ ಬೆದರಿಕೆಗೂ ಯಾವುದೇ ಪ್ರತಿಕ್ರಿಯೆ ಕಂಡುಬರಲಿಲ್ಲ. ಥ್ಯಾಕರೆ ಕ್ಯಾಪ್ಟನ್ ಬ್ಲ್ಯಾಕ್ ಹಾಗೂ ಮಿ.ಡೆಯ್‌ಟನ್ ಅವರಿಗೆ ಕೋಟೆಯ ಬಾಗಿಲಿನ ಎದುರಿನ ತೋಫಿನ ಹಿಂದೆ ನಿಂತು ಆಜ್ಞೆ ವಿಧಿಸಿದೊಡನೆಯೇ ತೋಪುಗಳನ್ನು ಹಾರಿಸಲು ಅಣಿಗೊಳಿಸಿದನು. ಮಿ.ಸಿವೆಲ್‌ನ ತನ್ನ ಸೈನ್ಯದೊಡನೆ ಕೆಲವೇ ಹೆಜ್ಜೆಗಳ ದೂರದಲ್ಲಿ ಸಂಜ್ಞೆ ಮಾಡಿದೊಡನೆಯೇ ಕೋಟೆಯ ಮೇಲೆ ಹಲ್ಲೆ ಮಾಡಲು

ಸುಸಜ್ಜಿತವಾಗಿ ನಿಂತುಕೊಂಡನು. ಈ ಕ್ಷಣಗಳು ಗಂಭೀರವಾದ ಕ್ಷಣಗಳಾಗಿದ್ದವು. ಬ್ರಿಟಿಷ್ ಸೈನಿಕರು ಕೋಟೆಯ ಬಾಗಿಲು ತೆರೆಯುವುದೋ ಇಲ್ಲವೋ ಎಂದು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದರು. 24ನಿಮಿಷ ತೀರುವುದಕ್ಕೆ ಒಂದು ಕ್ಷಣ ಮಾತ್ರ ಮುಂಚೆ, ಕೋಟೆಯ ಬಾಗಿಲುಗಳು ಒಳಗೆ ತೆಗೆಯುವುದರ ಬದಲು ಹೊರಗೆ ತೆಗೆದವು. ಕಿತ್ತೂರಿನ ಸೈನಿಕರ ಕುದುರೆಗಳು ಮಿಂಚಿನ ವೇಗದಿಂದ ರಭಸದಿಂದ ಹೊರನುಗ್ಗಿ ಅಲ್ಲಿ ನಿಂತಿದ್ದ ಬ್ರಿಟಿಷ್ ಸೈನ್ಯದ ಮೇಲೆ ಅಪ್ಪಳಿಸಿದವು.

ಕಿತ್ತೂರಿನ ಸೈನಿಕರು ಬ್ರಿಟಿಷ್ ಸೈನ್ಯವನ್ನು ಎರಡು ಕಡೆಯಿಂದ ಅಟ್ಟಿಕೊಂಡು ಬಂದರು. ಒಂದು ಸೈನ್ಯ ಕೋಟೆಯ ಬಾಗಿಲಿನಿಂದ ಸೈನ್ಯದ ಮೇಲೆ ಬಿದ್ದರೆ, ಇನ್ನೊಂದು ಸೈನ್ಯ ಕೋಟೆಯ ಮಗ್ಗಲಿನಿಂದ ಬ್ರಿಟಿಷ್ ಸೈನ್ಯದ ಮೇಲೆ ದಾಳಿ ಮಾಡಿತು. ಕೋಟೆಯ ಬಾಗಿಲಿನಿಂದ ಮಾಡಿದ ದಾಳಿಯ ಮುಖಂಡತ್ವವನ್ನು ಸರದಾರ ಗುರುಸಿದ್ದಪ್ಪ ವಹಿಸಿಕೊಂಡಿದ್ದನು. ಇನ್ನೊಂದು ಸೈನ್ಯಕ್ಕೆ ರಾಣಿ ಚೆನ್ನಮ್ಮ ಕೋಟೆಯ ಮೇಲ್ಭಾಗದಲ್ಲಿ ಕುದುರೆಯೇರಿ ದಿಗ್ದರ್ಶನ ಮಾಡುತ್ತಿದ್ದಳು. ತನ್ನ ತೆಳುವಾದ ನಡಕ್ಕೆ ಬಂಗಾರದ ಬಣ್ಣ ಪಟ್ಟಿಯಲ್ಲಿ ತೂಗುಬಿಟ್ಟ ಖಡ್ಗದ ಕವಚ, ಎಡಗೈಯಲ್ಲಿ ಹಿಡಿದ ಕುದುರೆಯ ಲಗಾಮು, ಬಲಗೈಯಲ್ಲಿ ಝಳಪಿಸುವ ಹಿರಿದ ಖಡ್ಗ. ಕಾಲಲ್ಲಿ ರಿಕಾಪುಗಳನ್ನು ಮೀಟಿ ಒತ್ತಿ ಕುದುರೆಯ ಮೇಲೆ ಎದೆ ಸೆಟಸಿ ಕುಳಿತು ಕುದುರೆಯನ್ನು ಕೋಟೆಯ ದಿನ್ನೆಯ ಮೇಲೆ ನಡೆಸುತ್ತ, ತನ್ನ ತೆರೆದ ಖಡ್ಗದಿಂದ ಸೈನಿಕರಿಗೆ ಅವರು ಹೋಗುವ ದಿಕ್ಕುಗಳನ್ನು ಸಂಜ್ಞೆಯಿಂದ ತೋರುತ್ತ, ಮುನ್ನುಗ್ಗುತ್ತಿದ್ದ ರಾಣಿ ಚೆನ್ನಮ್ಮ, ಶೌರ್ಯ ಹಾಗೂ ಛಲದ ಎರಕಹೊಯ್ದ ಪ್ರತಿರೂಪದಂತೆ ಕಂಗೊಳಿಸುತ್ತಿದ್ದಳು. ಚೆನ್ನಮ್ಮನ ಸೈನಿಕರು ಮಿಂಚಿನವೇಗದಿಂದ ದಾಳಿ ಎಸಗಿ, ಎದುರಿಗೆ ಸಿಕ್ಕ ಎಲ್ಲ ಬ್ರಿಟಿಷ ಸೈನಿಕರ ರುಂಡಗಳನ್ನು ತುಂಡರಿಸಿದರು. ತೋಫಿಗೆ ಅಷ್ಟರಲ್ಲಿ ಬೆಂಕಿ ಇಡಲಿದ್ದ ಕ್ಯಾಪ್ಟನ್ ಬ್ಲ್ಯಾಕ್ ಹಾಗೂ ಲೆ.ಡೆಯಟನ್ ಅವರಿಂದ ತೋಫುಗಳನ್ನು ಅವರು ವಶಪಡಿಸಿಕೊಂಡರು. ರೊಚ್ಚಿಗೆದ್ದಿದ್ದ ಕಿತ್ತೂರ ಸೈನಿಕರು ಅವರ ರುಂಡಗಳನ್ನು ಕತ್ತರಿಸಿ ಅವರ ದೇಹಗಳನ್ನು ಚೂರು ಚೂರಾಗಿ ಕತ್ತರಿಸಿದರು. ರಾಣಿ ಚೆನ್ನಮ್ಮನ ಸೈನಿಕರು ಇದಾದ ನಂತರ ಬ್ರಿಟಿಷ್ ಕುದುರೆ ಸವಾರರ ಸೈನ್ಯದ ಮೇಲೆ ದಾಳಿಮಾಡಿದರು. ಬ್ರಿಟಿಷ್ ಸೈನ್ಯ ಕಿತ್ತೂರಿನ ಸೈನ್ಯದ ಈ ತ್ವರಿತಕ್ರಮ, ಧೈರ್ಯ ಹಾಗೂ ಪರಾಕ್ರಮದ ಆಘಾತದಿಂದ ದಿಗ್ಭ್ರಮೆಗೊಂಡಿತು. ಕಿತ್ತೂರಿನ ಸೈನಿಕರು ಚದುರಿದ ಬ್ರಿಟಿಷ್ ಸೈನ್ಯ ಪಡೆಯಲ್ಲಿ ನುಗ್ಗಿ ಕೈಗೆ ಸಿಕ್ಕ ಬ್ರಿಟಿಷ್ ಸೈನಿಕರನ್ನು ಖಡ್ಗಗಳಿಂದ ಕತ್ತರಿಸಿದರು. ಈಟಿಗಳಿಂದ ಇರಿದು ಕೊಂದರು. ಕಿತ್ತೂರಿನ ಕೋಟೆಯ ಗೋಡೆಗಳ ಮೇಲೆ ರಾಣಿ ಚೆನ್ನಮ್ಮ ಕುದುರೆಯ ಮೇಲೆ ಖಡ್ಗಧಾರಿಯಾಗಿ ಕುಳಿತುಕೊಂಡು, ಸೈನ್ಯಗಳ ಚಲನವಲನಕ್ಕೆ ಆದೇಶ ನೀಡುತ್ತಿದ್ದಳು. ಅವಳ ಮಗ್ಗಲಿಗೆ ಅವಳ ಅಂಗರಕ್ಷಕನಾದ ಅಮಟೂರಿನ ಸಾಧುನವರ ಬಾಳಪ್ಪ ಇದ್ದನು. ಅವಳ ಸ್ವಲ್ಪ ದೂರದಲ್ಲಿ ನಾಲ್ಕೂ ಬದಿಯಲ್ಲಿ ನಾಲ್ವರು ಬಂದೂಕುಧಾರಿಗಳಾದ ಕುದುರೆ ಸವಾರರಾದ ಸೈನಿಕರು ಅವಳ ರಕ್ಷಣೆಗಾಗಿ ಪಹರೆ ಮಾಡುತ್ತಿದ್ದರು. ರಾಣಿ ಚೆನ್ನಮ್ಮನ ಮೇಲೆ ಯಾವುದೇ ಅನಿರೀಕ್ಷಿತ ಆಘಾತವನ್ನು ಎದುರಿಸಲು ಅವರು ಸುಸಜ್ಜಿತರಾಗಿದ್ದರು. ಕಿತ್ತೂರಿನ ಆಘಾತ ಇಷ್ಟೊಂದು ಅನಿರೀಕ್ಷಿತ

ಹಾಗೂ ತ್ವರಿತವಾಗಿದ್ದುದರಿಂದ, ಬ್ರಿಟಿಷ್ ಸೈನಿಕರಿಗೆ ಅದರಿಂದ ಚೇತರಿಸಿಕೊಳ್ಳಲು ಅವಕಾಶವೇ ಇರಲಿಲ್ಲ. ಅನೇಕರು ರಾಣಿ ಚೆನ್ನಮ್ಮನ ಸೈನಿಕರಿಂದ ಇರಿದು ಕೊಲ್ಲಲ್ಪಟ್ಟಿದ್ದರು. ಗಾಬರಿಯಾಗಿ ದಿಕ್ಕುಗಾಣದಂತಾದ ಬ್ರಿಟಿಷ್ ಸೈನಿಕರು ಪಲಾಯನ ಹೇಳಿದರು. ಇದನ್ನು ಕಂಡು ಎಲ್ಲ ಕಡೆಗೆ ಹಾಹಾಕಾರವೆದ್ದಿತು. ದೂರದಿಂದ ಈ ದಿಕ್ಕೆಟ್ಟು ಓಡುವ ಬ್ರಿಟಿಷ್ ಸೈನಿಕರನ್ನು ಕಂಡು ಥ್ಯಾಕರೆ ತನ್ನ ಕುದುರೆಯ ಮೇಲೆ ಜಿಗಿದು ಕೋಟೆಯ ಕಡೆಗೆ ಮುನ್ನುಗ್ಗಿದನು. ಶೂರನೂ, ಚಾಣಾಕ್ಷನೂ ಆದ ಸಾಧುನವರ ಬಾಳಪ್ಪ, ಥ್ಯಾಕರೆ ಕುದುರೆಯೇರಿ ರಾಣಿ ಚೆನ್ನಮ್ಮನಿದ್ದೆಡೆಗೆ ಬರುತ್ತಿರುವದನ್ನು ಕಂಡನು. ಆತನು ಆಕೆಯ ಮಗ್ಗಲಿನಲ್ಲಿಯೇ ನಿಂತಿದ್ದನು. ಕೂಡಲೇ ಥ್ಯಾಕರೆನೆಡೆಗೆ ಗುರಿಯಿಟ್ಟು ಗುಂಡು ಹಾರಿಸಿದನು. ಅವನು ಎಂದೂ ಗುರಿ ತಪ್ಪಿದವನಲ್ಲ. ಅವನ ಗುಂಡು ಥ್ಯಾಕರೇನ ಎದೆಯಲ್ಲಿ ನಟ್ಟಿತು. ಥ್ಯಾಕರೆ ಕುದುರೆಯ ಮೇಲಿಂದ ಉರುಳಿದನು. ಹಲವು ಸೈನಿಕರು ಅವನ ಸುತ್ತಲೂ ಮುತ್ತಿಕೊಂಡು ಅವನ ದೇಹವನ್ನು ಕತ್ತರಿಸಿದರು. ರಾಮ ಹಸಬಿಯೆಂಬ ನಿಗ್ರೋಸೈನಿಕ, ಅವನ ರುಂಡನ್ನು ಕತ್ತರಿಸಿ, ತನ್ನ ಭರ್ಜಿಯ ತುದಿಗೆ ಅದನ್ನು ಸಿಕ್ಕಿಸಿಕೊಂಡು, ಎಲ್ಲರಿಗೂ ಕಾಣುವಂತೆ ಎತ್ತಿ ಹಿಡಿದು, "ಥ್ಯಾಕರೆ ಸತ್ತ, ಥ್ಯಾಕರೆ ಸತ್ತ" ಎಂದು ಚೀರುತ್ತ, ಕುಣಿಯುತ್ತ ರಣರಂಗದ ಸುತ್ತಲೂ ಓಡಾಡತೊಡಗಿದನು. ಬ್ರಿಟಿಷ್ ಸೈನಿಕರು ಭಯವಿಹ್ವಲರಾಗಿ ಸಿಕ್ಕಸಿಕ್ಕಡೆಗೆ ಓಡತೊಡಗಿದರು. ಈ ಹೋರಾಟದಲ್ಲಿ ಆಗಲೇ ಸುಮಾರು 80 ಜನ ಸೈನಿಕರು ಕೊಲ್ಲಲ್ಪಟ್ಟಿದ್ದರು. ಇನ್ನು ಕೆಲವರು ಗಾಯಗೊಂಡಿದ್ದರು. ಸೈನ್ಯ ಪಡೆಯ ಒಬ್ಬ ಸಾರ್ಜಂಟನನ್ನೊಳಗೊಂಡು ಬ್ರಿಟಿಷ್ ನೇಟಿವ್ಹ ಇನಫಂಟ್ರಿಯ 40 ಜನ ಸೈನಿಕರು ಕಿತ್ತೂರಿನ ಸೆರೆಯಾಳಾದರು. ಉಳಿದೆಲ್ಲ ಸೈನ್ಯ ಹಿಂದೆಗೆದು ಓಡಿಹೋಯಿತು. ಕಲೆಕ್ಟರ ಹಾಗೂ ಪೊಲಿಟಿಕಲ್ ಏಜೆಂಟ ಯುದ್ಧದಲ್ಲಿ ಸತ್ತನಷ್ಟೇ ಅಲ್ಲ, ಅವನೊಂದಿಗೆ ಸೈನ್ಯಾಧಿಕಾರಿಯಾದ ಕ್ಯಾಪ್ಟನ್ ಬ್ಲ್ಯಾಕ್, ಲೆಫ್ಟನಂಟ ಡೆಯಟನ್, ಮದ್ರಾಸ ಕುದುರೆ ದಳದ ಲೆಫ್ಟನಂಟ ಸಿವೆಲ್ ಅವರೂ ಕೊಲ್ಲಲ್ಪಟ್ಟರು.

ಬ್ರಿಟಿಷರ ವಿರುದ್ಧ ನಿಶ್ಚಿತವಾದ ಮಹಾವಿಜಯವನ್ನು ಸಂಪಾದಿಸಿ, ಬ್ರಿಟಿಷರನ್ನು ಕಿತ್ತೂರಿನ ಗಡಿಗಳಾಚೆ ಹೊಡದೋಡಿಸಿ, ಕಿತ್ತೂರಿನ ಸೈನ್ಯ ಕಿತ್ತೂರಿಗೆ ತ್ವರಿತವಾಗಿ ತಿರಿಗಿ ಬಂದಿತು. ಕಿತ್ತೂರಿನಲ್ಲಿಯ ದ್ರೋಹಿಗಳನ್ನು ಸದೆಬಡೆಯುವ ಕಾರ್ಯ ಇನ್ನೂ ಉಳಿದಿದ್ದಿತು. ತಮ್ಮ ಕೀಳ್ತರದ ಸಣ್ಣ ಸ್ವಾರ್ಥಸಾಧನೆಗಾಗಿ ಕಿತ್ತೂರಿನ ಸ್ವಾತಂತ್ರ್ಯವನ್ನು ಕೂಡ ಮಾರಿಕೊಳ್ಳಲು ಹೇಸದ ಈ ದ್ರೋಹಿಗಳನ್ನು ಕೊನೆಗೊಳಿಸಲು ಅವರು ಕಾತರರಾಗಿದ್ದರು. ದಿವಾನ್ ಕನ್ನೂರ ಮಲ್ಲಪ್ಪ, ಕನ್ನೂರ ವೀರಪ್ಪ ಮತ್ತು ಸರದಾರ ಮಲ್ಲಪ್ಪ ಇವರೇ ಈ ನೀಚ ದ್ರೋಹಿಗಳಾಗಿದ್ದರು. ಅಡಗಿಕೊಂಡಿದ್ದ ಈ ಮೂವರನ್ನೂ ಹುಡುಕಿ ಕೋಟೆಗೆ ಎಳೆದು ತರಲಾಯಿತು. ಅಲ್ಲಿ ಅವರನ್ನು ಆನೆಯ ಕಾಲಲ್ಲಿ ತುಳಿಸಲಾಯಿತು. ಆ ದೃಶ್ಯ ಹೃದಯವಿದ್ರಾವಕವಾಗಿತ್ತು.

ಇಷ್ಟರಲ್ಲಿ ಧಾರವಾಡದ ಹಾಗೂ ಬೆಳಗಾವಿಯ ಆಫೀಸು ಹಾಗೂ ಸೈನ್ಯ ಪಡೆಗಳಲ್ಲಿ ದುಡಿಯುತ್ತಿದ್ದ ಹಲವು ಬ್ರಿಟಿಷ್ ಆಫೀಸರರು ಹಾಗೂ ಸೈನಿಕರು ಕಿತ್ತೂರಿನ ಮನೆಗಳಲ್ಲಿ, ಖಾಸಗಿ ಕಟ್ಟಡಗಳಲ್ಲಿ ಅಡಗಿಕೊಂಡಿರುವರೆಂಬ ಸುದ್ದಿ ಕಿತ್ತೂರಿನ ಸೈನಿಕರಿಗೆ ಮುಟ್ಟಿತ್ತು. ರಾಣಿ

ಚೆನ್ನಮ್ಮನ ಸೈನಿಕರು ಮನೆಮನೆ ಹುಡುಕಿ ಅವರನ್ನು ಪತ್ತೆಹಚ್ಚಿ ಹೊರಗೆ ಎಳೆತಂದರು. ಅವರಲ್ಲಿ ಪ್ರಮುಖರಾದವರೆಂದರೆ, ಥ್ಯಾಕರೇನ ರಾಜಕೀಯ ಸಹಾಯಕ ಸಲಹೆಗಾರರಾದ ಮಿ.ಎ.ಆರ್. ಸ್ಟಿವನ್ಸನ್ ಮತ್ತು ಮಿ.ಇಲಿಯಟ್ ಹಾಗೂ ಶಿರಸ್ತದಾರನಾದ ಶ್ರೀನಿವಾಸರಾವ ಅವರೂ ಇದ್ದರು. ಅವರನ್ನು ಬಂಧಿಸಿ ರಾಣಿ ಚೆನ್ನಮ್ಮನ ಸಮ್ಮುಖದಲ್ಲಿ ತರಲಾಯಿತು. ರೊಚ್ಚಿಗೆದ್ದಿದ್ದ ಸೈನ್ಯಾಧಿಕಾರಿಗಳು ಅವರನ್ನು ಫಾಶಿ ಹಾಕಲು ಪರವಾನಿಗೆ ಕೇಳಿದರು. ಅದು ನ್ಯಾಯನಿಷ್ಠುರರಾದ ರಾಣಿ ಚೆನ್ನಮ್ಮ ಹಾಗೂ ಸರದಾರ ಗುರುಸಿದ್ದಪ್ಪ ಈರ್ವರಿಗೂ ಒಪ್ಪಿತವಾಗಲಿಲ್ಲ. ಅವರಿಗೆ ಶಾಂತರಾಗಿರಲು ಬುದ್ಧಿ ಹೇಳಿದರು. ಸೆರೆ ಸಿಕ್ಕವರಲ್ಲಿ ಅನೇಕರು ಸರಕಾರಿ ನೌಕರರಿರುವುದರಿಂದ, ಅವರು ಮಾಡಿದರೆನ್ನಲಾದ ಅಪರಾಧಗಳ ಬಗ್ಗೆ ಯೋಗ್ಯ ವಿಚಾರಣೆಯಾದನಂತರ, ಅಪರಾಧ ಸಾಬೀತಾದರೆ ಮಾತ್ರ ಅವರಿಗೆ, ಸಕಾಲದಲ್ಲಿ ಶಿಕ್ಷೆ ವಿಧಿಸಬಹುದು. ಅಲ್ಲಿಯವರೆಗೆ ಅವರನ್ನು ಕೇವಲ ಬಂದಿಗಳೆಂದು ಇಡಬಹುದು. ರಾಣಿ ಚೆನ್ನಮ್ಮನ ಈ ಸಕಾಲಿಕವಾದ ಎಚ್ಚರಿಕೆಯಿಲ್ಲದಿದ್ದರೆ ಉದ್ರಿಕ್ತರಾದ ರಾಣಿ ಚೆನ್ನಮ್ಮನ ಸೈನಿಕರು ಅವರನ್ನು ಕೊಂದು ಬಿಡುತ್ತಿದ್ದರು.

ಅಂದು ರಾತ್ರಿ ಕಿತ್ತೂರಿನಲ್ಲಿ ವಿಜಯೋತ್ಸವ ಸಂಭ್ರಮ. ಅರಮನೆಯಲ್ಲಿ, ಕೋಟೆಯಲ್ಲಿ ಮತ್ತು ಊರಿನಲ್ಲಿ ವಿಜಯೋತ್ಸವಗಳು ಭರ್ಜರಿಯಾಗಿ ನಡೆದವು. ಕೋಟೆಯ ಗೋಡೆಗಳಮೇಲೆ ಸಾಲುದೀಪಗಳು ಕಂಡುಬಂದವು. ವಿಜಯೋತ್ಸವದ ಸಂಕೇತವಾಗಿ ಕಹಳೆಗಳು ಮೊಳಗಿ, ಕೋಟೆಯ ಗೋಡೆಗಳಿಂದ ಪ್ರತಿಧ್ವನಿಸಿ, ಸುತ್ತಲಿನ ಹಸಿರು ಭೂಮಿಯ ಶಾಂತತೆಯನ್ನು ಕದಡಿ ದೂರದವರೆಗೆ ಕೇಳಿಬಂದವು. ಪ್ರಬಲರಾದ ಬ್ರಿಟಿಷರ ವಿರುದ್ಧ ಕಿತ್ತೂರಿನ ಶೂರ ಸೈನಿಕರು ವಿಜಯ ಸಂಪಾದಿಸಿ, ಬ್ರಿಟಿಷರನ್ನು ಪೂರ್ತಿ ಸದೆಬಡೆದಿದ್ದರು. ಅದು ಕರ್ನಾಟಕದ ಮಾತ್ರವಲ್ಲ, ಇಡೀ ಭಾರತದ ಸ್ವಾತಂತ್ರ್ಯ ಸಮರದ ಇತಿಹಾಸದಲ್ಲಿ ಅತ್ಯಂತ ಜ್ವಾಜ್ಯಲ್ಯಮಾನವಾದ ಒಂದು ಅಧ್ಯಾಯ.

# 7. ಕಿತ್ತೂರಿನ ಎರಡನೆಯ ಯುದ್ಧ ಹಾಗೂ ಸೋಲು

1824 ರ ಅಕ್ಟೋಬರ 23ರಂದು ನಡೆದ ಕಿತ್ತೂರಿನ ಯುದ್ಧದಲ್ಲಿ ರಾಣಿ ಚೆನ್ನಮ್ಮನು ಬ್ರಿಟಿಷರನ್ನು ಸಂಪೂರ್ಣವಾಗಿ ಸದೆಬಡಿದು ಅವಮಾನಗೊಳಿಸಿದ್ದಳು. ಕಿತ್ತೂರಿನ ರಣರಂಗದಿಂದ ಓಡಿಬಂದ ಹಲವು ಅಧಿಕಾರಿಗಳು ಧಾರವಾಡ ಮುಟ್ಟಿದ ಕೂಡಲೇ ಧಾರವಾಡದಲ್ಲಿಯ ಬ್ರಿಟಿಷ್ ಅಧಿಕಾರಿಗಳಿಗೆ ಕಿತ್ತೂರಿನಲ್ಲಿ, ಬ್ರಿಟಿಷ್ ಸೈನ್ಯದ ಅವಮಾನಕರ ಸೋಲಿನ ಸುದ್ದಿಯನ್ನು ತಿಳಿಸಿದ್ದರು. ಧಾರವಾಡದಲ್ಲಿಯ ಬ್ರಿಟಿಷ್ ಪಾಳೆಯದಲ್ಲಿ ಹಲವಾರು ಸೈನಿಕ (ಮಿಲಿಟರಿ) ಹಾಗು ನಾಗರಿಕ (ಸಿವಿಲಿಯನ್) ಅಧಿಕಾರಿಗಳಿದ್ದರು. ಈ ಸೋಲಿನ ಸುದ್ದಿ ಅವರಿಗೆ ಏಕಕಾಲಕ್ಕೆ ಆಶ್ಚರ್ಯ ಹಾಗೂ ಅಪನಂಬಿಕೆಯನ್ನುಂಟುಮಾಡಿತು. ವಿನಾಶಹೊಂದಿದ ಕುದುರೆದಳದ ಯುರೋಪಿಯನ್ ಆಫೀಸರನಾದ ಡಾ.ಟರ್ನಬುಲ್ ಅಂದು ಸಂಜೆ 6 ಗಂಟೆಗೆ ಧಾರವಾಡ ತಲುಪಿದನು. ಆತನು ಅಲ್ಲಿಯ ಸಿವಿಲಿಯನ್ ಆಫೀಸರನಾದ ಮಸ್‌ಗ್ರೇವ್ಹ ಹ್ಯಾರಿಸ್ ಎಂಬವನಿಗೆ ಈ ದುಃಖವಾರ್ತೆಯನ್ನು ಮುಟ್ಟಿಸಿದನು. ಹ್ಯಾರಿಸ್ ಧಾರವಾಡದಲ್ಲಿದ್ದ ಮುಖ್ಯ ಸೈನ್ಯಾಧಿಕಾರಿಯಾದ ಲೆ. ಕ. ಡಬ್ಲ್ಯೂ. ಡುರಾಂಡನಿಗೆ ಈ ಸುದ್ದಿಯನ್ನು ತಿಳಿಸಲು ಚೀಟಿಯೊಂದನ್ನು ಕಳುಹಿಸಿದನು. ಆ ಚೀಟಿಯಲ್ಲಿ ಹೀಗೆ ಬರೆಯಲಾಗಿತ್ತು:

ಸರ್,

ದಿವಂಗತನಾದ ಕಿತ್ತೂರ ರಾಜನ ಸೈನಿಕರ ಹಾಗೂ ನಮ್ಮ ಪೊಲಿಟಿಕಲ್ ಏಜಂಟ ಥ್ಯಾಕರೆ ಕಳುಹಿಸಿಕೊಟ್ಟ ನಮ್ಮ ಕುದುರೆ ದಳದವರ ನಡುವೆ ಕಿತ್ತೂರಿನಲ್ಲಿ ಯುದ್ಧ ನಡೆಯಿತೆಂದು ತಿಳಿಯುತ್ತದೆ. ಕಿತ್ತೂರ ರಣರಂಗದಿಂದ ಇದೀಗ ಇಲ್ಲಿಗೆ ಬಂದಿರುವ, ಕುದುರೆ ದಳದ ಡಾ.ಟರ್ನ್‌ಬುಲ್ – 'ನಮ್ಮ ಸೈನ್ಯವೆಲ್ಲ ನುಚ್ಚುನೂರಾಗಿದೆ, ಅನೇಕ ಸಿವ್ಹಿಲ್ ಹಾಗೂ ಮಿಲಿಟರಿ ಅಧಿಕಾರಿಗಳು ಗಾಯಗೊಂಡಿದ್ದು, ಹಲವರು ಕೊಲ್ಲಲ್ಪಟ್ಟಿದ್ದಾರೆ' ಎಂದು ಸುದ್ದಿ ತಂದಿದ್ದಾನೆ. ಮಿ.ಥ್ಯಾಕರೆ ಬೆಳಗಾವದಲ್ಲಿದ್ದ ಕರ್ನಲ್ ಪಿಯರ್ಸನ್ ಅವರಿಗೆ ಇದರ ಬಗ್ಗೆ ಸುದ್ದಿ ತಿಳಿಸಿದ್ದಾನೆಂದು ತಿಳಿಯುತ್ತದೆ. ಧಾರವಾಡದಲ್ಲಿ ಕಮಾಂಡಿಂಗ ಆಫೀಸರರಾದ ನಿಮಗೆ ಈ ವಿಷಯ ತಿಳಿದಿರಬೇಕೆಂಬ ಉದ್ದೇಶದಿಂದ, ನೀವು ಅವಶ್ಯ ಸೂಕ್ತಕ್ರಮ ಕೈಕೊಳ್ಳಲು ಇದು ಸಹಾಯವಾಗಬಲ್ಲದೆಂಬ ದೃಷ್ಟಿಯಿಂದ ಈ ಸುದ್ದಿಯನ್ನು ನಿಮಗೆ ತಿಳಿಸುತ್ತಿದ್ದೇನೆ.

ಸಹಿ

ಧಾರವಾಡ — ಮಸ್‌ಗ್ರೇವ್ಹ ಹ್ಯಾರಿಸ್

ಅಕ್ಟೋಬರ 23, 1824 — ಸಿವ್ಹಿಲ್ ಸರ್ವಿಸ್

ಅದಾದ ಒಂದು ತಾಸಿನನಂತರ ಮತ್ತೊಬ್ಬ ಸೈನಿಕನು ಥ್ಯಾಕರೇನ ಮರಣದ ಸುದ್ದಿಯನ್ನು ತಂದನು. ಧಾರವಾಡದ ಅಸಿಸ್ಟೆಂಟ್ ಕಲೆಕ್ಟರನಾಗಿದ್ದ ಮಿ.ವಾಕರ ಫುಲರ್‌ಟನ್, ಈ ಸುದ್ದಿಯಿಂದ ಎಷ್ಟೊಂದು ಗಾಬರಿಯಾದನೆಂದರೆ, ಆತನು ತತ್‌ಕ್ಷಣಕ್ಕೆ ಬೆಳಗಾವಿಗೆ ಒಬ್ಬ ದೂತನನ್ನು ಕಳುಹಿಸಿದನು. ಅವನೊಡನೆ ಅವನು ಕಳುಹಿಸಿದ ಸಂದೇಶ ಹೀಗೆ:

ಅಪ್ಪಣೆ

ಧಾವಿಸಿರಿ.....ಧಾವಿಸಿರಿ

ಬೆಳಗಾವಿಯಲ್ಲಿದ್ದ ಯಾವುದೇ ಆಫೀಸರ ಇರಲಿ

ಕೂಡಲೇ ಧಾವಿಸಿರಿ

ತ್ವರಿತವಾಗಿ ಅತ್ಯಂತ ತ್ವರಿತವಾಗಿ...

ಸರ್/ಸರ್ಸ್,

ದೇವರನ್ನು ಸ್ಮರಿಸಿ – ತಕ್ಷಣ, ಎಷ್ಟೂ ವಿಲಂಬವಿಲ್ಲದೆ ಕಿತ್ತೂರಿಗೆ ಸೈನ್ಯವನ್ನು ಕಳಿಸಿರಿ.

ನಮ್ಮ ಸೈನ್ಯಪಡೆ ನುಚ್ಚುನೂರಾಗಿದೆ. ಥ್ಯಾಕರೆ ಕೊಲ್ಲಲ್ಪಟ್ಟಿರುವನೆಂದು ಕೇಳಿಬರುತ್ತದೆ. ಕ್ಯಾಪ್ಟನ್ ಬ್ಲ್ಯಾಕ್‌ನನ್ನು ತುಂಡರಿಸಲಾಗಿದೆ – ಸಿವಿಲ್ ಇಷ್ಟರಲ್ಲಿ ಸಾಯಲಿದ್ದಾನೆ. ಡೇಟನ್ ಕೊಲ್ಲಲ್ಪಟ್ಟಿದ್ದಾನೆ – ಥ್ಯಾಕರೇನ ಇಬ್ಬರು ಸಹಾಯಕರಾದ ಇಲಿಯಟ್ ಮತ್ತು ಸ್ಟೀವನ್ಸನ್‌ರ ಗತಿ ಏನಾಗಿದೆ ಸುದ್ದಿಯಿಲ್ಲ – ದೇವರನ್ನು ಸ್ಮರಿಸಿ ಕೂಡಲೇ ಕಳುಹಿಸಿಕೊಡಿ; ಇಲ್ಲಿರುವ ನಿಮ್ಮ ತುಂಡು ಸೈನ್ಯ ಯಾವುದಕ್ಕೂ ಬಾರದು. ಇಲ್ಲಿ ಈಗ ಉಳಿದಿರುವ ನಮ್ಮ ಸೈನ್ಯ 100 ಜನರದು ಮಾತ್ರ.

ನಿಮ್ಮ

ಧಾರವಾಡ ಸಹಿ. ವಾಕರ ಫುಲರ್ಟನ್

ರಾತ್ರಿ 8 ಘಂಟೆ, 23 ನೆಯ ದಿನಾಂಕ ಅಸಿಸ್ಟೆಂಟ್ ಕಲೆಕ್ಟರ

ಧಾರವಾಡದ ಸಿವಿಲ್ ಹಾಗೂ ಮಿಲಿಟರಿ ಆಫೀಸರರಿಗೆ ಈ ಸುದ್ದಿಯ ಅಘಾತದಿಂದ ದಿಗ್ಭ್ರಮೆಯಾದಂತಾಗಿತ್ತು. ಅವರು ತಮ್ಮ ಎಲ್ಲ ಮಿಲಿಟರಿ ಠಾಣೆಗಳಿಗೂ ಸೈನ್ಯ ಕಳಿಸಿಕೊಡಲು ಸಂದೇಶ ಕಳಿಸತೊಡಗಿದರು. ಮರುದಿನ ಮುಂಜಾನೆ ಲೆಫ್ಟನಂಟ ಕರ್ನಲ್ ಡುರಾಂಡ ಬಳ್ಳಾರಿಯಲ್ಲಿದ್ದ ಆಫೀಸರ ಕಮಾಂಡಿಂಗ ಅವನಿಗೆ ಕಿತ್ತೂರಿನಲ್ಲಿ ನಡೆದ ಯುದ್ಧ ಹಾಗೂ ಥ್ಯಾಕರೇನ ಮರಣದ ಬಗ್ಗೆ ಸುದ್ದಿ ಕಳುಹಿಸಿದ. ಬಂಡೆದ್ದ ಕಿತ್ತೂರಿನ ಸೈನಿಕರು ಧಾರವಾಡಕ್ಕೆ ದೌಡು ಬರುವರೆಂದು ತಾನು ಕೇಳಿದ ಸುದ್ದಿಯ ಬಗ್ಗೆಯೂ ಆತನಿಗೆ ತಿಳಿಸಿದ.

ಇಷ್ಟರಲ್ಲಿ ಹಲವು ಬ್ರಿಟಿಷ್ ಸೈನಿಕರು, ಥ್ಯಾಕರೆ, ಕ್ಯಾಪ್ಟನ್ ಬ್ಲಾಕ್, ಲೆಫ್ಟನಂಟ ಸಿವೆಲ್, ಲೆಫ್ಟನಂಟ ಡೇಟನ್ ಅವರ ಮೃತದೇಹಗಳನ್ನು ಧಾರವಾಡಕ್ಕೆ ಹೊತ್ತುಕೊಂಡು ಒಯ್ದಿದ್ದರು. ಧಾರವಾಡದಲ್ಲಿಯ ಯುರೋಪಿಯನ್ ಶ್ಮಶಾನದಲ್ಲಿ ಅವರ ದೇಹಗಳನ್ನು ಹುಗಿಯಲಾಯಿತು.

ಈ ಸಮಯದಲ್ಲಿ ಕಿತ್ತೂರಿನಲ್ಲಿ, ಕಿತ್ತೂರಿನ ಸರದಾರರು, ಸೈನಿಕರು ಹಾಗೂ ಊರಿನ ಜನರು ವಿಜಯೋತ್ಸವವನ್ನು ಸಂಭ್ರಮದಿಂದ ಆಚರಿಸುತ್ತಿದ್ದರು. ವೈರಿಯನ್ನು ಸದೆಬಡಿಯ

ಲಾಗಿತ್ತು. ಆಂತರಿಕ ವೈರಿಗಳನ್ನು ಕೊನೆಗೊಳಿಸಲಾಗಿತ್ತು. ಎಲ್ಲ ಕಡೆಗೆ ಸಂತಸದ, ಸಂಭ್ರಮದ ವಾತಾವರಣವಿತ್ತು. ಅಂದು ರಾತ್ರಿ ರಾಣಿ ಚೆನ್ನಮ್ಮ ತನ್ನ ಸೈನಿಕರಿಗೆ ವಿದಾಯ ಹೇಳಿದ ನಂತರ, ತನ್ನ ನಂಬಿಗೆಯ ಸಹಾಯಕರೂ, ಸೈನ್ಯಾಧಿಕಾರಿಗಳೂ ಆದ ಸರದಾರ ಗುರುಸಿದ್ದಪ್ಪ, ಸಂಗೊಳ್ಳಿ ರಾಯಣ್ಣ, ಅವರಾದಿ ವೀರಪ್ಪ, ಸರದಾರ ಹಿಮ್ಮತಸಿಂಗ, ಶ್ರೀ ನರಸಿಂಗರಾವ ಮತ್ತು ಇತರರೊಡನೆ ಚೌಕಿಮಠಕ್ಕೆ ಭೇಟಿಯಿತ್ತಳು. ಚೌಕಿಮಠದ ಪೂಜ್ಯಶ್ರೀಗಳಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿದನಂತರ ಅವರು ಚೌಕೀಮಠದ ಗುಪ್ತ ಕೊಠಡಿಯಲ್ಲಿ, ತಾವು ತೆಗೆದುಕೊಳ್ಳಬೇಕಾದ ಮುಂದಿನ ಕಾರ್ಯಗಳ ಬಗೆಗೆ ಸುದೀರ್ಘವಾದ ಚರ್ಚೆ ನಡೆಸಿದರು.

ಅವರಿಗೆ ಕಿತ್ತೂರಿನಲ್ಲಿ ಇದುವರೆಗೆ ನಡೆದ ಎಲ್ಲ ಘಟನೆಗಳ ಬಗೆಗೆ ತಿಳಿಯ ಪಡಿಸಿದಳು. ಬೆಳಗಾವಿಯಿಂದ ಕಿತ್ತೂರಿಗೆ ಸೈನ್ಯವನ್ನು ಕಳುಹಿಸಿಕೊಡಲು ಕೇಳುವ ಸಂದೇಶದೊಂದಿಗೆ ಧಾರವಾಡದ ಸೈನಿಕದೂತನೊಬ್ಬ ಧಾರವಾಡದಿಂದ ಬೆಳಗಾವಿಗೆ ಕಳಿಸಲ್ಪಟ್ಟಿರುವನೆಂಬ ಸುದ್ದಿ ತನಗೆ ತಲುಪಿರುವುದಾಗಿ ಅವಳು ನೆರೆದ ಸಭೆಗೆ ಹೇಳಿದಳು. ಬೆಳಗಾವಿ ಅವರ ಮಿಲಿಟರಿಯ ಮುಖ್ಯ ಸ್ಥಳವಾಗಿತ್ತು. ಕಿತ್ತೂರಿನ ಸೋಲಿನ ನಂತರ ಬ್ರಿಟಿಷರು ಸುಮ್ಮನೆ ಕೂತುಕೊಳ್ಳಲಾರರೆಂಬುದು ಅವಳಿಗೆ ಗೊತ್ತಿತ್ತು. ಅವರು ಕಿತ್ತೂರಿನ ಮೇಲೆ ಬೀಳಲು ಎಲ್ಲ ಕಡೆಯಿಂದ ಸೈನ್ಯ ಸಲಕರಣೆ ಮಾಡುತ್ತಿರಬಹುದೆಂದು ಅವಳು ಊಹಿಸಿದ್ದಳು. ಅವಳಿಗೆ ಕಿತ್ತೂರಿನ ಶಕ್ತಿಯ ಪರಿಜ್ಞಾನವಿದ್ದಂತೆ, ಯಾವ ದೃಷ್ಟಿಯಲ್ಲಿ ಅದು ಬಲಹೀನವೆಂಬುದನ್ನೂ ಆಕೆ ಅರಿತಿದ್ದಳು. ಕೇವಲ ಕಿತ್ತೂರಿನ ಸೈನ್ಯದಿಂದ – ಬ್ರಿಟಿಷರು ತಮ್ಮ ಎಲ್ಲ ಸೈನ್ಯ ಬಲವನ್ನು ಕಲೆಹಾಕಿದರೆ – ಆ ಸೈನ್ಯದ ವಿರುದ್ಧ ಹೋರಾಡುವದು ಅಸಾಧ್ಯವೆಂಬುದನ್ನು ಆಕೆ ಅರಿತಿದ್ದಳು. ಸಂಖ್ಯೆ, ಆಯುಧ ಸಂಗ್ರಹ, ತಂತ್ರಗಾರಿಕೆ ಎಲ್ಲ ದೃಷ್ಟಿಯಿಂದ ಬ್ರಿಟಿಷ್ ಸೈನ್ಯ ಹೆಚ್ಚು ಬಲಶಾಲಿಯಾಗಿರುವುದೆಂಬುದನ್ನು ಅವಳು ಅರಿತಿದ್ದಳು. ಅವಳು ನಾಲ್ಕು ದಿನಗಳ ಹಿಂದೆ ಕೊಲ್ಲಾಪುರದ ರಾಜನೆಡೆಗೆ ಕೂಡಲೇ ಸೈನ್ಯ ಸಹಾಯ ಕೋರಿ ದೂತನನ್ನು ಕಳುಹಿದ್ದಳು. ಅವನಿಂದ ಇದುವರೆಗೆ ಉತ್ತರ ಬಂದಿರಲಿಲ್ಲ.

ತನ್ನ ಸೈನಿಕರು ಮಿ.ಸ್ಟೀವನ್ಸನ್ ಹಾಗೂ ಮಿ. ವಾಕರ ಫುಲರ್‌ಟನ್‌ನ್ನೊಳಗೊಂಡ 40 ಜನ ಬ್ರಿಟಿಷರನ್ನು ಸೆರೆಹಿಡಿದು ತಂದಿರುವ ವಿಷಯವನ್ನು ಸ್ವಾಮಿಗಳವರಿಗೆ ನಿವೇದಿಸಿದಳು. ಬಹಳ ಸುದೀರ್ಘವಾದ ಚರ್ಚೆ, ವಿಚಾರ ವಿನಿಮಯದ ನಂತರ ಅವರೆಲ್ಲರೂ ಒಂದು ನಿರ್ಣಯಕ್ಕೆ ಬಂದರು. ಹಿಂದಿನಂತೆ ಕಿತ್ತೂರಿಗೆ ಆಂತರಿಕ ಆಡಳಿತ ಸ್ವಾತಂತ್ರ್ಯವನ್ನು ಕೊಡುವಂತೆ ಒಪ್ಪಿಸಲು ಬ್ರಿಟಿಷರ ಮನವೊಲಿಸಿ, ಅವರೊಡನೆ ಒಂದು ಒಪ್ಪಂದಕ್ಕಾಗಿ ತಮ್ಮ ಯತ್ನಗಳನ್ನು ಆಸಕ್ತಿಯಿಂದ ಮುಂದುವರಿಸಬೇಕೆಂದು ಅವರೆಲ್ಲರೂ ಒಪ್ಪಿಕೊಂಡು ಆ ರೀತಿ ನಿರ್ಣಯ ತೆಗೆದುಕೊಂಡರು. ಅದಕ್ಕಾಗಿ ಬ್ರಿಟಿಷ್ ಆಫೀಸರನ್ನು ಭೆಟ್ಟಿಯಾಗಿ, ಸಂಸ್ಥಾನವನ್ನು ಬಿಟ್ಟುಕೊಡಲು ಅವರ ಮನವೊಲಿಸುವುದಕ್ಕಾಗಿ ಸಂಸ್ಥಾನದ ಒಬ್ಬ ವಕೀಲನನ್ನು ಕಳಿಸಿಕೊಡಲು ನಿರ್ಣಯಿಸಲಾಯಿತು. ಇದಲ್ಲದೆ ಸ್ಟೀವನ್ಸನ್ ಹಾಗೂ ಇಲಿಯಟ್‌ರನ್ನು, ಸಾಧ್ಯವಾದರೆ ಸ್ನೇಹದೂತರಂತೆ, ಕೊನೆಗೆ ಅನಿರ್ವಾಹ ಪ್ರಸಂಗದಲ್ಲಿ ಜೀವ ಒತ್ತೆಯಾಳಿನಂತೆ

ಉಪಯೋಗಿಸಿಕೊಳ್ಳಬೇಕೆಂದು ನಿರ್ಧರಿಸಲಾಯಿತು. ಈ ಉದ್ದೇಶಕ್ಕಾಗಿ ಸ್ಟೀವನ್ಸನ್ ಮತ್ತು ಇಲಿಯಟ್ ಈರ್ವರೂ ಆಫೀಸರರನ್ನು ಅತ್ಯಂತ ಸೌಹಾರ್ದತೆ ಮತ್ತು ಪ್ರೀತಿವಿಶ್ವಾಸಗಳಿಂದ ಕಾಣುವುದು ಅವಶ್ಯವಾಗಿತ್ತು. ಹಾಗೆ ಮಾಡಿದಾಗ ಮಾತ್ರ ಅವರ ಸಹಾಯದಿಂದ ಬ್ರಿಟಿಷ್ ಅಧಿಕಾರಿಗಳೊಂದಿಗೆ ಒಳ್ಳೆ ಅನುಕೂಲ ಕರಾರುಗಳಿಗಾಗಿ, ಹಾಗೂ ಕಿತ್ತೂರಿನ ಆಂತರಿಕ ಸ್ವಾತಂತ್ರ್ಯಕ್ಕಾಗಿ ಮಾತುಕತೆ ನಡೆಸಲು ಸಾಧ್ಯವಿತ್ತು. ಈ ಪ್ರಯತ್ನಗಳು ಅಸಫಲವಾದರೆ, ಬ್ರಿಟಿಷರ ವಿರುದ್ಧ ಹೋರಾಡಲು ಹಿಂದೆಮುಂದೆ ನೋಡಬಾರದೆಂತಲೂ ಹಾಗೂ ಎಂಥ ದುರ್ಧರಪ್ರಸಂಗ ಒದಗಿದರೂ ಅದಕ್ಕೆ ತಾವು ಬದ್ಧಕಂಕಣರಾಗಬೇಕೆಂದು ದೃಢನಿರ್ಧಾರ ಕೈಕೊಳ್ಳಲಾಯಿತು. ಕೊಲ್ಹಾಪುರದ ರಾಜನು ತಮ್ಮ ಈ ಮಹಾಸಾಹಸದಲ್ಲಿ ಸಹಾಯಹಸ್ತ ನೀಡುವನೆಂಬ ಭರವಸೆಯು ರಾಣಿ ಚೆನ್ನಮ್ಮನಿಗೆ ಬಹಳವಾಗಿತ್ತು. ಇದು ದಕ್ಷಿಣದ ಉಳಿದೆಲ್ಲ ದೇಶಭಿಮಾನಿಗಳಾದ ಸಂಸ್ಥಾನದ ಮುಖ್ಯಸ್ಥರಿಗೆ ಸ್ಫೂರ್ತಿಯನ್ನಿತ್ತು ಅವರೆಲ್ಲರೂ ಬ್ರಿಟಿಷರ ವಿರುದ್ಧ ಎದ್ದ ಈ ದಂಗೆಯಲ್ಲಿ ಪಾಲುಗೊಳ್ಳುವರೆಂಬ ಭರವಸೆ ಅವಳಿಗಿತ್ತು.

ಅಂದು ರಾತ್ರಿ ಚೌಕೀಮಠದಿಂದ ಮರಳಿದನಂತರ ಸರದಾರ ಗುರುಸಿದ್ದಪ್ಪ, ಅವರಾದಿ ವೀರಪ್ಪ ಮತ್ತು ಸರದಾರ ಹಿಮ್ಮತಸಿಂಗ ಅವರು ಕಿತ್ತೂರ ಜೇಲಿನಲ್ಲಿ ಸ್ಟೀವನ್ಸನ್ ಹಾಗೂ ಇಲಿಯಟ್‌ರನ್ನು ಭೇಟಿಯಾದರು. ಅವರನ್ನು ಮರ್ಯಾದೆ, ಪ್ರೀತಿ, ವಿಶ್ವಾಸಗಳಿಂದ ಕಾಣುವುದಾಗಿ ಆಶ್ವಾಸನವಿತ್ತರು. ಇದಲ್ಲದೆ ಅವರಿಗೆ ತಾವು ಮುಂಬಯಿಯ ಗವರ್ನರನಾದ ಮೌಂಟಸ್ಟುವರ್ಟ ಎಲ್‌ಫಿನ್ಸ್ಟನ್ ಅವರಿಗೆ ಕಿತ್ತೂರ ಸಂಸ್ಥಾನಕ್ಕೆ ಆಂತರಿಕ ಸ್ವಾತಂತ್ರ್ಯ ಮರಳಿ ನೀಡಲು ಮನವಿ ಸಲ್ಲಿಸಿದ್ದಾಗಿಯೂ ಹಾಗೂ ಥ್ಯಾಕರೆ ಕಿತ್ತೂರಿನ ರಾಜಮನೆತನದವರಿಗೆ ಕೊಟ್ಟ ಚಿತ್ರಹಿಂಸೆ ಹಾಗೂ ಮಾಡಿದ ಅಪಮಾನ ಕೃತ್ಯಗಳ ಬಗ್ಗೆ ವಿವರವಾಗಿ ತಿಳಿಸಿರುವುದಾಗಿಯೂ ಹೇಳಿದರು. ಎಲ್‌ಫಿನ್ಸ್ಟನ್‌ನಿಂದ ಆ ಮನವಿಗೆ ಉತ್ತರ ಬರುವವರೆಗೆ ಅವರಿಗೆ ಯಾವ ತರಹದ ಅಪಾಯವನ್ನು ತಾವು ಮಾಡುವುದಿಲ್ಲವೆಂಬ ಭರವಸೆಯನ್ನಿತ್ತರು. ಇದಲ್ಲದೆ, ಕಿತ್ತೂರಿನ ವಿದ್ಯಮಾನಗಳ ಬಗೆಗೆ ಬ್ರಿಟಿಷ್ ಅಧಿಕಾರಿಗಳಿಗೆ ನಿಜವಾದ ಕಲ್ಪನೆ ತರಲು ಸಹಾಯವಾಗಲು ತಾವು ಬಯಸಿದರೆ ಕಿತ್ತೂರಿನಲ್ಲಿ ನಡೆದ ವಿದ್ಯಮಾನಗಳ ಬಗೆಗೆ, ತಮ್ಮ ಸಹೋದ್ಯೋಗಿಗಳಿಗೂ, ಮೇಲಿನ ಅಧಿಕಾರಿಗಳಿಗೂ, ಸಂದೇಶಗಳನ್ನು ಕಳಿಸಿಕೊಡಲು ಅನುಕೂಲತೆಗಳನ್ನು ಕಲ್ಪಿಸಿಕೊಡುವುದಾಗಿ ಭರವಸೆಯಿತ್ತರು. ಈ ಭರವಸೆಗಳಿಗೆ ರಾಣಿ ಚೆನ್ನಮ್ಮನ ಒಪ್ಪಿಗೆ ಹಾಗೂ ಮನ್ನಣೆಯಿದೆಯೆಂದು ಅವರಿಗೆ ಹೇಳಲಾಯಿತು. ಇಷ್ಟೇ ಅಲ್ಲದೆ, ಒಂದು ವೇಳೆ ನೀಡಿದ ಸ್ನೇಹಹಸ್ತ, ತಮ್ಮ ಬಲಹೀನತೆಯ ಸಂಕೇತವೆಂದು ಭಾವಿಸಿ, ಅವುಗಳನ್ನು ಉದಾಸೀನದಿಂದ ಕಂಡರೆ, ಬ್ರಿಟಿಷರು ತಮ್ಮ ಮಿಲಿಟರಿ ಶಕ್ತಿಯಿಂದ ಕಿತ್ತೂರನ್ನು ಆಕ್ರಮಿಸಿಲು ಯತ್ನಿಸಿದರೆ, ತಮ್ಮ ಜೀವಕ್ಕಿಂತ ಸ್ವಾತಂತ್ರ್ಯವನ್ನು ಹೆಚ್ಚಾಗಿ ಪ್ರೀತಿಸುವ ಕಿತ್ತೂರಿನ ಜನತೆ ಯಾವ ಮಟ್ಟಿಗೂ ಹೋಗಲು ಸಿದ್ಧರೆಂಬ ಎಚ್ಚರಿಕೆ ನೀಡಿದರು. ಕೊನೆಗೆ ಕಿತ್ತೂರು ಶರಣಾಗತರಾಗುವ ಸಂದರ್ಭ ಒದಗಿದರೆ, ಮೊದಲು ಸ್ಟೀವನ್ಸನ್ ಹಾಗೂ ಇಲಿಯಟ್‌ರನ್ನು ಕೊಂದು, ಆಮೇಲೆ ತಮ್ಮ

ಹೆಣ್ಣುಮಕ್ಕಳನ್ನು ಕೊಲ್ಲುವದಾಗಿಯೂ, ಅವರು ಎಚ್ಚರಿಸಿದರು. ರಾಣಿ ಚೆನ್ನಮ್ಮನ ಗೌರವ ರಕ್ಷಣೆಗೆ ತಾವು ಅತ್ಯಂತ ಹೆಚ್ಚಿಗೆ ಮಹತ್ವ ಕೊಡುವುದರಿಂದ ಅವಳಿಗೆ ಆಗಬಹುದಾದ ಅವಮಾನವನ್ನು ತಪ್ಪಿಸಲು ಅವಳನ್ನು ಕೂಡ ಕೊಂದು, ಆಮೇಲೆ ಉಳಿದ ಕಿತ್ತೂರಿನ ಜನ ಬ್ರಿಟಿಷರ ವಿರುದ್ಧ ಹೋರಾಡುತ್ತ ಪ್ರಾಣ ಬಿಡುವುದಾಗಿ ಅವರು ಹೇಳಿದರು. ಬ್ರಿಟಿಷರ ಗುಲಾಮರಾಗಿ ಜೀವಿಸುವುದಕ್ಕಿಂತ, ಕಿತ್ತೂರಿನ ಜನತೆ ಮರಣವನ್ನೇ ಅಪ್ಪಿಕೊಂಡಾರು ಎಂದು ಅವರಿಗೆ ಸ್ಪಷ್ಟಪಡಿಸಿದರು.

ಮರುದಿವಸ ಮುಂಜಾನೆ ಅಂದರೆ 1824 ಅಕ್ಟೋಬರ 24 ರಂದು, ಈ ಈರ್ವರೂ ಕೈದಿಗಳು ಪುಣೆಯಲ್ಲಿದ್ದ ಡೆಕ್ಕನ್‌ದ ಕಮಿಶನರನಾದ ಮಿ.ಚಾಪ್ಲಿನ್‌ಗೆ ಅಕ್ಟೋಬರ 23 ರಂದು ಕಿತ್ತೂರಿನಲ್ಲಿ ನಡೆದ ಎಲ್ಲ ಘಟನೆಗಳ ಬಗ್ಗೆ ಎಲ್ಲ ವಿಷಯಗಳನ್ನು ತಿಳಿಯಪಡಿಸಿ ಬರೆದ ಪತ್ರದ ಪೂರ್ತಿಪಾಠ ಇಂತಿದೆ:

ಜೆ.ಎ.ಆರ್. ಸ್ಟೀವನ್ಸನ್ ಎಸ್ಕ್ವಾಯರ 24 ಅಕ್ಟೋಬರ, 1824

ಗೆ,

ಡಬ್ಲ್ಯೂ. ಚಾಪ್ಲಿನ್

ಕಮಿಶನರ ಇನ್ ಡೆಕ್ಕನ್

ಸರ್,

ಥ್ಯಾಕರೇನ ಮರಣದ ಬಗ್ಗೆ ನಿಮಗೆ ತಿಳಿಸುವುದು ನನ್ನ ಅತ್ಯಂತ ವಿಷಾದದ ಕರ್ತವ್ಯವಾಗಿದೆ. ಕಿತ್ತೂರಿನ ಕೋಟೆಯ ಬಾಗಿಲಿಗೆ ಹೊರಟಾಗ ಅವನನ್ನು ಗುಂಡಿಕ್ಕಿ ಕೊಲ್ಲಲಾಯಿತು. ಕಿತ್ತೂರಿನ ಸರದಾರರು ಹಲವು ದಿವಸಗಳಿಂದ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸುತ್ತಲೇ ಇದ್ದು, ಕೊನೆಗೆ ನನ್ನ ಎಲ್ಲ ಆದೇಶಗಳನ್ನು ಉಲ್ಲಂಘಿಸತೊಡಗಿದರು. ಕೊನೆಗೆ ಬಾಗಿಲುಗಳನ್ನು ಹಾಕಿ ಒಳಗೆ ಯಾರನ್ನೂ ಬರಗೊಡದಂತೆ ನಿರ್ಬಂಧಿಸಿದರು. ಖಜಾನೆಯ ಸುರಕ್ಷಿತತೆಗಾಗಿ, ಕೆಲವು ಜನ ಸಿಪಾಯರ ಕಾವಲು ಹಾಗೂ ಕೆಲವು ತೋಫುಗಳನ್ನು ಕೋಟೆಯ ಮುಂದೆ ಇಡುವುದು ಅವಶ್ಯವೆಂದು ಕಂಡುಬಂದದ್ದರಿಂದ ಥ್ಯಾಕರೆ ಹಾಗೆ ಮಾಡಿದ್ದನು. ಆದರೆ ಮದ್ರಾಸ ಫಿರಂಗಿಯ ಕ್ಯಾಪ್ಟನ್ ಬ್ಲ್ಯಾಕ್ ಕಾವಲಿನ ಸಿಪಾಯರನ್ನು ಬದಲಾಯಿಸಲು ಹೋದಾಗ ಅವನನ್ನು ನಿರ್ಬಂಧಿಸಿದೊಡನೆ, ಥ್ಯಾಕರೆ 24 ನಿಮಿಷದಲ್ಲಿ ಕೋಟೆಯ ಬಾಗಿಲು ತೆರೆಯದಿದ್ದರೆ ಅವುಗಳನ್ನು ತೋಫಿನಿಂದ ಒಡೆಧು ತೆಗೆಯಲಾಗುವುದೆಂದು ಸರದಾರರಿಗೆ ಎಚ್ಚರಿಕೆ ಕೊಟ್ಟನು.

ಕೋಟೆಯ ಬಾಗಿಲು ತೆರೆಯದ್ದರಿಂದ ಮತ್ತು ಯಾವ ವ್ಯಕ್ತಿಯೂ ಉತ್ತರ ಕೊಡಲು ಹೊರಬರದ್ದರಿಂದ, ಕ್ಯಾಪ್ಟನ್ ಬ್ಲಾಕ್, ಕ್ಯಾಪ್ಟನ್ ಸಿವೆಲ್ ಹಾಗೂ ಲೆಫ್ಟನಂಟ್ ಡೇಟನ್ ಅವರು ಕೋಟೆಯ ಬಾಗಿಲನ್ನು ತೋಫಿನಿಂದ ಒಡೆದು ತೆಗೆಯಲು ಮುಂದಾದರು. ನನ್ನ ದುಃಖದ ಕಥೆಯನ್ನು ಸ್ವಲ್ಪದರಲ್ಲಿ ಹೇಳಬೇಕೆಂದರೆ – ಕೋಟೆಯಲ್ಲಿದ್ದ ಕಿತ್ತೂರಿನ ಸೈನಿಕರು ಮಿಂಚಿನ ವೇಗದಿಂದ ದಾಳಿಮಾಡಿ, ತೋಫುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು, ತಮ್ಮ

ದಾರಿಯಲ್ಲಿ ಸಿಕ್ಕ ಎಲ್ಲರನ್ನೂ ಖಡ್ಗದಿಂದ ಇರಿದು ಕೊಂದರು. ಇದೇ ಹೊತ್ತಿಗೆ, ದುರದೃಷ್ಟದಿಂದ ಥ್ಯಾಕರೆ ಈ ಸ್ಥಳದಲ್ಲಿ ಕಾಣಿಸಿಕೊಂಡನು. ಅವನನ್ನು ಗುಂಡಿಕ್ಕಿ ಕೊಲ್ಲಲಾಯಿತು. ಅವನೊಂದಿಗಿದ್ದ ಮೂವರು ಸೇನಾಧಿಕಾರಿಗಳೂ ಸತ್ತಂತೆ ನಮಗೆ ಭಾಸವಾಗುತ್ತದೆ. ನಾನು ಹಾಗು ಇಲಿಯಟ್ ತಪ್ಪಿಸಿಕೊಳ್ಳಲು ಯತ್ನಿಸಿದೆವು. ಆದರೆ ಸ್ವಲ್ಪ ಸಮಯದಲ್ಲಿ ಅವರಿಗೆ ಸೆರೆಸಿಕ್ಕೆವು. ಬಹಳ ಕಷ್ಟದಿಂದ ನಮ್ಮ ಜೀವ ಉಳಿಸಿಕೊಂಡು ಬದುಕಿದ್ದೇವೆ. ಆದರೆ ಈಗ ನಾವು ಬಂದಿಗಳಾಗಿದ್ದೇವೆ. ಅವರಿಗೆ ಮುಂಬಯಿಯಿಂದ ತಮ್ಮ ಪತ್ರಕ್ಕೆ ಉತ್ತರ ಬರುವವರೆಗೆ ನಮ್ಮನ್ನು ಬಂಧನದಿಂದ ಮುಕ್ತಗೊಳಿಸಲು ನಿರಾಕರಿಸಿದ್ದಾರೆ. ನಾವು ನಮ್ಮ ಜೀವಗಳು ಸುರಕ್ಷಿತವೆಂದು ಹೇಳಲಿಕ್ಕೆ ಬಾರದು. ಯಾಕಂದರೆ ಒಮ್ಮೆ ಅವರ ರಕ್ತ ಬಿಸಿಯಾದರೆ, ಅವರು ಯಾರ ಮಾತನ್ನೂ ಕೇಳುವ ಮನಸ್ಥಿತಿಯಲ್ಲಿರುವುದಿಲ್ಲ. ಅವರ ಪತ್ರಕ್ಕೆ –ಮುಂಬಯಿಯ ಉತ್ತರ ಅವರ ಮನಸ್ಸಿನ ವಿರುದ್ಧವಾಗಿದ್ದರೆ, ಅವರ ಸಹಕಾರದ ಆಶ್ವಾಸನೆಗಳನ್ನು ನಂಬಬಹುದೆಂದು ನಮಗನಿಸುವುದಿಲ್ಲ. ಅವರನ್ನು ಸದೆಬಡೆಯಲು ಯತ್ನಿಸಿದರೆ, ಅವರು ಮೊದಲು ತಮ್ಮ ಹೆಣ್ಣುಮಕ್ಕಳನ್ನು ಕೊಂದು ಆಮೇಲೆ ತಾವೂ ಸಾಯುವುದಾಗಿ ಹೇಳುತ್ತಿದ್ದಾರೆ.

ಈ ಅವಸರದ ಬರವಣಿಗೆಗಾಗಿ ಕ್ಷಮಿಸಿರಿ. ನಾನು ಸೀಸಕಡ್ಡಿಯಿಂದ ಬರೆಯುತ್ತಿದ್ದೇನೆ.

ಕಿತ್ತೂರು ನಿಮ್ಮ

24 ಅಕ್ಟೋಬರ, 1824 ಸ ಹಿ. ಜೆ . ಎ. ಆರ್. ಸ್ಟೀವ ನ್ಸನ್

ಮಿ. ಸ್ಟೀವನ್ಸನ್ ಮತ್ತು ಮಿ. ಇಲಿಯಟ್‌ರಷ್ಟೇ ಅಲ್ಲದೆ, ಶ್ರೀನಿವಾಸರಾವ ಎಂಬ ಹೆಸರಿನ ಒಬ್ಬ ಶಿರಸ್ತದಾರ ಮತ್ತು ಒಬ್ಬ ಯುರೋಪಿಯನ್ ಫಿರಂಗಿಯ ಸೈನ್ಯಾಧಿಕಾರಿ ಸುಮಾರು 30-40 ಸಿಪಾಯಿಗಳು ಹಾಗೂ ಸ್ಥಳೀಯ ಅಶ್ವಸೈನಿಕರೊಂದಿಗೆ ಇಲ್ಲಿ ಬಂದಿಗಳಾಗಿದ್ದಾರೆ. ಈಗಿನ ಬಂಡಾಯದ ಮುಖಂಡ ದಿ॥ ಮಲ್ಲಸರ್ಜ ದೇಸಾಯರ ಪತ್ನಿ ವಿಧವೆ ಚೆನ್ನಮ್ಮನ ಹೆಸರಿನಲ್ಲಿ ಅಧಿಕಾರ ಚಲಾಯಿಸುವ ಸರದಾರ ಗುರುಸಿದ್ದಪ್ಪ. ಮೊನ್ನೆ ತೀರಿದ ದೇಸಾಯಿಯ ವಿಧವೆ ಪತ್ನಿ ಚೆನ್ನಮ್ಮ ರಾಜ್ಯದ ಉತ್ತರಾಧಿಕಾರಕ್ಕೆ ಹೆಚ್ಚಿನ ಹಕ್ಕು ಪಡೆದವಳಾಗಿದ್ದಾಳೆ. ಇಷ್ಟು ದೀರ್ಘಕ್ಕೆ ಇದುವರೆಗೆ ಹೋರಾಡಿದ ಆತನು ಹಾಗೂ ಆತನ ಬೆಂಬಲಿಗರು ಈಗ ಹಂಗುದೊರೆದು ನಿಂತಿದ್ದಾರೆ. ತಮ್ಮ ಪ್ರಸ್ತಾಪಕ್ಕೆ ಸರಕಾರ ಒಪ್ಪದಿದ್ದರೆ, ಸರಕಾರದ ವಿರುದ್ಧ ಕೊನೆಯವರೆಗೂ ಹೋರಾಡುವ ಮಾತನ್ನಾಡುತ್ತಿದ್ದಾರೆ. ಸರಕಾರ ಈಗಾಗಲೇ ಕೊನೆಯ ನಿರ್ಣಯ ಕೈಕೊಳ್ಳುವಂತಿದ್ದರೆ, ನಾವು ಬಂಧನದಲ್ಲಿರುವುದನ್ನು ಉಪಯೋಗಿಸಿಕೊಂಡು ನಮ್ಮ ಜೀವ ಅವರ ಕೈಯಲ್ಲಿದೆಯೆಂಬ ಹೆದರಿಕೆಯಿಂದ ತಮಗೆ ಅನುಕೂಲವಾಗುವ ಕರಾರುಗಳನ್ನು ಒಪ್ಪಿಸಿಕೊಳ್ಳಬೇಕೆಂಬ ಹವಣಿಕೆಯಿಂದ, ನನ್ನನ್ನು ಹಾಗೂ ಸ್ಟೀವನ್ಸನ್‌ನನ್ನು ತಮ್ಮ ಪತ್ರಕ್ಕೆ ಉತ್ತರ ಬರುವವರೆಗೆ ಬಂಧನದಲ್ಲಿಡಲು ಅವರು ನಿರ್ಧರಿಸಿದ್ದಾರೆ. ಅವರು ಕೊನೆಯವರೆಗೂ ಹೋರಾಡುವರು ಹಾಗೂ ನಮ್ಮಿಬ್ಬರ ಮೇಲೆ ಸೇಡು ತೀರಿಸಿಕೊಳ್ಳುವ ರೆಂಬುದರ ಬಗ್ಗೆ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಗುರುಸಿದ್ದಪ್ಪ ಬಹಳ ಬುದ್ಧಿಗೇಡಿ ಹಾಗೂ

ಹಟಮಾರಿ ಮನುಷ್ಯ. ಆತ ಈಗ ಎಲ್ಲ ಕಡೆಯಿಂದ ಶೇತ್ ಸನದಿಗಳನ್ನು ಶೇಖರಿಸುತ್ತಿದ್ದಾನೆ. ಈಗ ಕೋಟೆಯಲ್ಲಿ 5,000 ಕ್ಕೂ ಹೆಚ್ಚು ಸೈನಿಕರು ಇದ್ದಾರೆ.

ಸಹಿ.
ಇಲಿಯಟ್

ರಾಣಿ ಚೆನ್ನಮ್ಮ ಅಕ್ಟೋಬರ 24ರ ಮುಂಜಾನೆ, ಮೊದಲೇ ವಿಚಾರಿಸಿದಂತೆ, ಮುಗುಟಖಾನ ಹುಬ್ಬಳ್ಳಿಯ ಹತ್ತಿರದ, ಮಲ್ಲಪ್ರಭಾ ನದಿಯ ದಂಡೆಯ ಮೇಲಿನ ಹರಗೋಲುಗಳನ್ನು ಕಾಯಲು ತನ್ನ ಸಣ್ಣ ಸೈನ್ಯವನ್ನು ಕಳಿಸಿದಳು. ಸೈನ್ಯಕ್ಕೆ ಬ್ರಿಟಿಷ್ ಸೈನ್ಯ ನದಿಯನ್ನು ದಾಟದಂತೆ ಪ್ರತಿಕೂಲ ಒಡ್ಡಿ, ಸಾಧ್ಯವಾದಷ್ಟು ಸಮಯ ಅವರನ್ನು ನದಿ ದಾಟದಂತೆ ತಡೆಹಿಡಿಯಲು ಆಜ್ಞಾಪಿಸಲಾಗಿತ್ತು. ನದಿಯ ದಂಡೆಯ ಮೇಲಿನ ಎಲ್ಲ ನಾವೆಗಳನ್ನು ಮುಳುಗಿಸಿ ಬಿಡಲು ಅವಳು ಅಜ್ಞಾಪಿಸಿದ್ದಳು. ಕಿತ್ತೂರಿನ ಕಡೆಗೆ ಬ್ರಿಟಿಷ್ ಸೈನ್ಯ ಬರದಂತೆ ಈ ಮುನ್ನೆಚ್ಚರಿಕೆ ಕೈಕೊಳ್ಳಲಾಗಿತ್ತು. ಮುಗಟಖಾನ ಹುಬ್ಬಳ್ಳಿಯಿಂದ ಕಿತ್ತೂರಿನ ವರೆಗಿನ ಮುಖ್ಯ ರಸ್ತೆಯನ್ನು ಸತತ ಪಹರೆ ಮಾಡುತ್ತ ಕಾಯಲು ಒಂದು ಸಣ್ಣ ಸೈನ್ಯವನ್ನು ಕಳುಹಲಾಗಿತ್ತು.

ಇದಾದನಂತರ, ಅವಳು ಶ್ರೀನಿವಾಸರಾವ ವಕೀಲನನ್ನು ಬ್ರಿಟಿಷ್ ಆಫೀಸರರೊಂದಿಗೆ ಏನಾದರೂ ಸಮಾಧಾನಕರವಾದ ಒಪ್ಪಂದಕ್ಕೆ ಬರುವ ಸಾಧ್ಯತೆಯ ಬಗ್ಗೆ ಮಾತುಕತೆ ನಡೆಸಲು ಕಳುಹಿಸಿಕೊಟ್ಟಳು.

ಈ ಘಟನೆಗಳಿಂದ ಡೆಕ್ಕನ್‌ದ ಕಮಿಶನರನಾದ ಮಿ.ಚಾಪ್ಲಿನ್‌ತೀವ್ರ ವಿವಂಚನೆಗೆ ಒಳಗಾಗಿದ್ದನು. ಧೂರ್ತನೂ, ಯಾವುದಕ್ಕೂ ಹೇಸದವನೂ ಆದ ಈತನು ಕಿತ್ತೂರನ್ನು ಕಬಳಿಸುವ ದುಷ್ಟ ಯತ್ನಗಳಿಗೆ ಪಿತೂರಿಯಾಗಿದ್ದನು. ಅಂದಿನ ಬ್ರಿಟಿಷ್ ಸಾಮ್ರಾಜ್ಯಶಾಹಿಯ ನೌಕರಶಾಹಿಯ ಪ್ರತಿನಿಧಿಯ ಒಂದು ಮಾದರಿಯಾಗಿದ್ದನು. ಅವನ ಗರ್ವ, ಯುದ್ಧದಲ್ಲಿ ಅಜೇಯರಾದ, ಮಹಾ ಬಲಶಾಲಿಯಾದ ಬ್ರಿಟಿಷ್ ಚಕ್ರಾಧಿಪತ್ಯದ ನಂಬಿಗೆಯ ಸೇವಕನ ಅಭಿಮಾನ, ಬ್ರಿಟಿಷರ ಹೀನಾಯಮಾನವಾದ ಸೋಲಿನಿಂದ ಭಂಗಗೊಂಡು ನುಚ್ಚು ನೂರಾಗಿದ್ದವು. ಈ ನುಚ್ಚುನೂರಾದ ಗರ್ವ ಕ್ರೂರ ಸೇಡಾಗಿ ಮಾರ್ಪಟ್ಟಿತು.

ರಾಣಿ ಚೆನ್ನಮ್ಮ ಯುದ್ಧವನ್ನು ಮುಂದೂಡಿ, ಸಮಾಧಾನಕರವಾದ ಒಪ್ಪಂದಕ್ಕೆ ಬರುವ ಸಾಧ್ಯತೆಗಳನ್ನು ಪರಿಶೋಧಿಸಲು ಇಚ್ಛಿಸುತ್ತಿದ್ದ ವಿಚಾರ ಅವನಿಗೆ ತಿಳಿದಿತ್ತು. ಬಹಳ ಧೂರ್ತನಾದ ಚಾಪ್ಲಿನ್ ಮೋಸದ ರೀತಿಯನ್ನು ಅನುಸರಿಸಲು ನಿರ್ಧರಿಸಿದಂತೆ ತೋರುತ್ತದೆ. ಆತ ಮಿ.ಆರ್. ಈಡನ್‌ನನ್ನು ಹಂಗಾಮಿ ಪೊಲಿಟಿಕಲ್ ಏಜೆಂಟ ಎಂದು ನೇಮಿಸಿ, ಆತನ ಮುಖ್ಯ ಕಾರ್ಯಾಲಯ ಬೆಳಗಾವಿಯಲ್ಲಿರುವಂತೆ ಮಾಡಿ, ಮಿ. ಮುನ್ರೋನನ್ನು ಧಾರವಾಡದ ಹಂಗಾಮಿ ಕಲೆಕ್ಟನರೆಂದು ನಿಯಮಿಸಿದನು. ರಾಣಿ ಚೆನ್ನಮ್ಮನ ಪ್ರತಿನಿಧಿಗಳೊಂದಿಗೆ ಸಂಧಾನದ ಮಾತುಕತೆ ನಡೆಸಲು ಮಿ.ಈಡನ್‌ನಿಗೆ ಅಧಿಕಾರ ವಹಿಸಿಕೊಟ್ಟನು.

ಇತ್ತ ಸಂಧಾನದ ಮಾತುಕತೆ ನಡೆದಾಗ ಅವನ ತಿಳುವಳಿಕೆ ಮತ್ತು ಒಪ್ಪಿಗೆಯಂತೆ ಬ್ರಿಟಿಷ್ ಮಿಲಿಟರಿ ಆಫೀಸರರು ಎಲ್ಲ ಕಡೆಗಳಿಂದ ಕಿತ್ತೂರಿನ ಕಡೆಗೆ ಸೈನ್ಯಗಳನ್ನು ಕಳಿಸಲು ತಯಾರಿ ನಡೆಸಿದ್ದರು. ಬೆಳಗಾವಿಯಲ್ಲಿದ್ದ ಹೆಡ್‌ಕ್ವಾರ್ಟರ್ಸ್ ಫೀಲ್ಡ್‌ಫೋರ್ಸ್ ದುಳಬದ ಕಮಾಂಡರನಾದ ಕರ್ನಲ್ ಪಿಯರ್ಸ್ ಪುಣೆಯಲ್ಲಿದ್ದ ಸೈನ್ಯದ ಕ್ವಾರ್ಟರ ಮಾಸ್ಟರ ಜನರಲ್ ಅವರಿಗೆ ಬರೆದ ಅಕ್ಟೋಬರ 25 ನೆಯ ತಾರೀಖಿನ ಪತ್ರದಲ್ಲಿ ಕಿತ್ತೂರಿನ ಬಂಡಾಯವನ್ನು ಹತ್ತಿಕ್ಕಲು ತಾನು ಕೈಕೊಂಡ ಕ್ರಮಗಳ ಬಗ್ಗೆ ತಿಳಿಸಿ, ಅದರಲ್ಲಿ ಕಿತ್ತೂರಿನೆಡೆಗೆ ಕಳುಹಿಸಿದ ಸೈನ್ಯದ ಬಗ್ಗೆ ವಿವಿರವಾದ ಮಾಹಿತಿಯನ್ನು ಕೊಟ್ಟನು. ಅವನ ಪತ್ರದ ಭಾಗ ಇಂತಿದೆ–

"ಈ ಹೊತ್ತು ಮುಂಜಾನೆ – ಕಿತ್ತೂರಿನಲ್ಲಿಯ ಕ್ಯಾಪ್ಟನ್ ಬ್ಲ್ಯಾಕನ ಸೈನ್ಯವನ್ನು ಕೂಡಿಕೊಳ್ಳಲು ಅಶ್ವದಳದ ಮತ್ತು ದೇಶೀ ಕಾಲ್ದಳದ 5ನೆಯ ರೆಜಿಮೆಂಟಿನ ಪಡೆಯೊಂದನ್ನು ಥ್ಯಾಕರೇನೊಡನೆ ಕಳಿಸಿಕೊಡಲಾಗಿದೆ. ಅದರ ವಿವಿರ ಕೆಳಗಿನಂತಿದೆ.

4ನೆಯ ಶಾಶ್ವತಸೈನ್ಯದ ಒಂದು ಲಘುಫಿರಂಗಿಯದಳ.

49 ನೆಯ ಶಾಶ್ವತ ಸೈನ್ಯದ ದೇಶೀಕಾಲಾಳುಗಳ ಎರಡು ಪಡೆಗಳು.

ಬೃಹತ್ ಫಿರಂಗಿಗಳ ಬೆಂಬಲದ ಒಂದು ಪಡೆ.

ಹೀಜ್ ಮೆಜಿಸ್ಟಿಯ 46ನೆಯ ಕಾಲ್ದಳದ ಒಂದು ಪಡೆ.

" 'ಸಶಸ್ತ್ರ ಹೊಂದಿದ ಕಾಲ್ದಳದ ಪಡೆ' ಈಗ ಸನ್ನದ್ಧಗೊಳ್ಳುತ್ತಲಿದೆ. ನನಗೆ ಪ್ರಧಾನ ಕಲೆಕ್ಟರನಿಂದ ಕಿತ್ತೂರಿನಲ್ಲಿ ಎಲ್ಲವೂ ಶಾಂತವಾಗಿದೆಯೆಂಬ ಮತ್ತು ಇನ್ನು ಹೆಚ್ಚಿನ ಸೈನ್ಯದ ಅವಶ್ಯಕತೆಯಿಲ್ಲವೆಂಬ ಖಚಿತವಾದ ಸೂಚನೆ ಬರದಿದ್ದರೆ ಈ ಪಡೆಯು ಕಿತ್ತೂರಿನ ಕಡೆಗೆ ಧಾವಿಸುತ್ತದೆ.

"ಸಧ್ಯಕ್ಕೆ ಭಾರದ ಯಂತ್ರಾಯುಧಗಳಲ್ಲಿ ನೋವಿಟ್ಝರ್ ಮತ್ತು ಮಾರ್ಟರ್‌ಗಳಿಗೆ ಪರಿಮಿತಗೊಳಿಸಲಾಗಿದೆ. ಇದಕ್ಕೆ ಮುಖ್ಯ ಕಾರಣವೆಂದರೆ, ನಮಗೆ ದೊರೆತ ಭಾರ ಎಳೆಯುವ ಕಾಡುದನಗಳಿಂದ, ಬೆಳಗಾವಿಯಿಂದ ಇವೆರಡು ಯಂತ್ರಗಳನ್ನು ತರಲಿಕ್ಕೆ ಮಾತ್ರ ಸಾಧ್ಯವಾಗಿತ್ತು; ನಮಗೆ ದೊರೆತ ಉಳಿದ ದನಗಳನ್ನು ವೆಂಗುರ್ಲಾದಿಂದ (ಸೈನಿಕ ದಾಸ್ತಾನುಗಳನ್ನು) ಎಳೆದುತರಲಿಕ್ಕೆ ಬಳಸಿಕೊಳ್ಳಲು ಇಟ್ಟುಕೊಳ್ಳಲಾಗಿದೆ.

"ಥ್ಯಾಕರೆ ಈ ಘಟನೆಯ ಬಗ್ಗೆ ಬರೆದಿಲ್ಲವಾದರೂ, ಈ ಪತ್ರ ತಂದ ದೂತನು ನಮ್ಮ ಎರಡು (ಅಶ್ವದಳದ) ತೋಪುಗಳನ್ನು ಕಿತ್ತೂರಿನ ಕೋಟೆಯ ಬಾಗಿಲನ್ನು ಒಡೆಯಲು ಒಯ್ಯಲಾಯಿತೆಂದೂ ಅದಾದನಂತರ ಕೋಟೆಯ ಬಾಗಿಲನ್ನು ಮುಚ್ಚಿ ಅಲ್ಲಿಯ ಸೇವಕರು ಇವರ ಮೇಲೆ ಗುಂಡು ಹಾರಿಸಿದರೆಂದೂ ಹೇಳುತ್ತಾನೆ.

"ಕಿತ್ತೂರಿನ ಕೋಟೆ ಬಹಳ ಭದ್ರವಾದದ್ದು. ಬಂಡಾಯಗಾರರನ್ನು ಸರಕಾರವು ಪೂರ್ತಿ ಅಧೀನಪಡಿಸಿಕೊಂಡ ನಂತರವೂ, ಕೆಲವು ಕಾಲದವರೆಗೆ ಕೋಟೆಯನ್ನು ಜೋರಿನಿಂದ ಹೊಕ್ಕು ಆಕ್ರಮಿಸುವ ಪ್ರಸಂಗ ಒದಗಬಹುದು. ಅದಕ್ಕಾಗಿ ನನ್ನ ಕಡೆಗಿರುವ ಅತಿ ಸಣ್ಣ ಪ್ರಮಾಣದ ಸೈನ್ಯ ಇಂಥ ಬಲವನ್ನು ಒದಗಿಸುವ ಸ್ಥಿತಿಯಲ್ಲಿಲ್ಲವೆಂಬುದನ್ನು ಸನ್ಮಾನ್ಯರಾದ ತಮ್ಮಲ್ಲಿ ವಿನಯಪೂರ್ವಕವಾಗಿ ಅರಿಕೆ ಮಾಡಬಯಸುತ್ತೇನೆ"।

ಕರ್ನಲ್ ಎಫ್.ಪಿಯರ್ಸ್ ಅವನ ಪತ್ರದಲ್ಲಿ ಕಾಣಿಸಿದ ಆಜ್ಞೆಯ ಪ್ರಕಾರ, ಲೆಫ್ಟನಂಟ್ ಕರ್ನಲ್ ಮೆಕ್ಲಾಯಿಡನ ನಾಯಕತ್ವದಲ್ಲಿ ಬ್ರಿಟಿಷ್ ಸೈನ್ಯವೊಂದು ಬೆಳಗಾವಿಯಿಂದ ಕಿತ್ತೂರಿಗೆ ಹೊರಟಿತು. ಈ ಸೈನ್ಯ ಹೊರಟ ಸ್ವಲ್ಪೇ ಸಮಯದಲ್ಲಿ ಬ್ರಿಟಿಷ್ ಸೈನ್ಯದ ದೂತನೊಬ್ಬ ಧಾರವಾಡದಿಂದ ಬಂದು, ಬಂಡುಖೋರರು, ಧಾರವಾಡವನ್ನು ಮುತ್ತಲು ಸನ್ನಾಹ ನಡೆಸಿದ್ದಾರೆಂದು ತಿಳಿಸಿದನು. ಬ್ರಿಟಿಷ್ ಸೈನ್ಯದ ಕ್ವಾರ್ಟರ ಮಾಸ್ತರ ಜನರಲ್‌ನಾದ ಆಯ್. ಆಯ್. ಓ. ಡೊನೋಘು, ಕರ್ನಲ್ ಪಿಯರ್ಸನ ಆಜ್ಞೆ ಪಡೆದುಕೊಂಡು, ಲೆಫ್ಟನಂಟ ಕರ್ನಲ್ ಮೆಕ್‌ಲಾಯಿಡ್‌ನಿಗೆ ಅವಸರದ ದೂತನೊಬ್ಬನನ್ನು ಕಳುಹಿಸಿಕೊಟ್ಟು, ಸೈನ್ಯವನ್ನು ಕಿತ್ತೂರಿನ ಕಡೆಗೆ ತಿರುಗಿಸದೇ ಕೂಡಲೇ ಮುಂದುವರಿಸಿ, ಕಿತ್ತೂರು ಧಾರವಾಡಗಳ ನಡುವೆ ಒಂದು ಆಯಕಟ್ಟಿನ ಸ್ಥಳದಲ್ಲಿ ಸೈನ್ಯವನ್ನು ಬೀಡುಬಿಟ್ಟು, ಧಾರವಾಡಕ್ಕೆ ಹೋಗದಂತೆ ಕಿತ್ತೂರಿನ ಬಂಡಾಯಗಾರರನ್ನು ತಡೆಗಟ್ಟಬೇಕೆಂದು ಹೇಳಿ ಕಳಿಸಿದನು. ಅವನ ಪತ್ರದ ಪೂರ್ತಿಪಾಠ ಇಂತಿದೆ:

ನಂ: 1824 ರ – 745

ಅಸಿಸ್ಟಂಟ್ ಕ್ವಾರ್ಟರ ಮಾಸ್ಟರ ಜನರಲ್‌ರ ಕಚೇರಿ,
ಕ್ಯಾಂಪ: ಬೆಳಗಾಂವ.
ತಾ॥25ನೇ ಅಕ್ಟೋಬರ, 1824.

ಲೆಫ್ಟನಂಟ್ ಕರ್ನಲ್ ಮೆಕ್‌ಲಾಯಿಡ್
4 ನೆಯ ರೆಜಿಮೆಂಟಿನ ಲಘು ಅಶ್ವದಳದ ಕಮಾಂಡರ,
–ಇವರಿಗೆ

ಸರ್,

ಕಿತ್ತೂರಿನಲ್ಲಿ 23 ನೆಯ ದಿನಾಂಕ ನಡೆದ ದುರ್ಧರ ವಿಪತ್ಕಾಲದ ಘಟನೆ ಥ್ಯಾಕರೆಯ ಮರಣದಲ್ಲಿ ಪರ್ಯಾವಸನಗೊಂಡಿತಷ್ಟೇ ಅಲ್ಲ, ಅಶ್ವದಳದ ಮತ್ತು ದೇಶೀ ಕಾಲ್ದಳದ 5 ನೆಯ ಶಾಶ್ವತ ಸೈನ್ಯವಿಭಾಗದ ಪಡೆಯೊಂದರ ಸರ್ವನಾಶವನ್ನುಂಟುಮಾಡಿ, ಇಲಿಯಟ್ ಮತ್ತು ಸ್ಟೀವನ್ಸನ್ ಇವರೀರ್ವರ ಬಂಧನಕ್ಕೂ ಕಾರಣವಾಯಿತು. ನದಿಯ ದಂಡೆಯ ಮೇಲಿನ ನಾವೆಗಳನ್ನು ಮುಳುಗಿಸಲಾಗಿದ್ದು, ಮಲಪ್ರಭಾನದಿ ಮತ್ತು ಕಿತ್ತೂರಿನ ನಡುವಿನ ಭಾಗವೆಲ್ಲ ಕಿತ್ತೂರಿನ ಸೈನಿಕರಿಂದ ಗಸ್ತಿತಿರುಗಲ್ಪಡುತ್ತಿದೆ ಮಾತ್ರವಲ್ಲ, ಇಡೀ ನಾಡಿನ ತುಂಬ ಸಾಮೂಹಿಕ ಬಂಡಾಯವೇಳಲು ಈ ಘಟನೆ ಪ್ರಚೋದನೆಯಿತ್ತಿದೆ.

ಈ ಗಂಭೀರ ಪರಿಸ್ಥಿತಿ ಮಾತ್ರವಲ್ಲದೆ, ಕಿತ್ತೂರಿನ ಬಂಡಾಯಗಾರರು ಧಾರವಾಡವನ್ನು ಮುಟ್ಟಲು ಹವಣಿಸುತ್ತಿದ್ದಾರೆಂದು ಇದೀಗ ಸುದ್ದಿ ಬಂದಿದೆ. ಧಾರವಾಡದಲ್ಲಿ ಮುಖ್ಯ ಕಲೆಕ್ಟರರ ಖಜಾನೆ, ಅನೇಕ ಬಂದಿಗಳಿರುವ ಬಂದೀಖಾನೆ ಇವುಗಳಿರುವ ನಮ್ಮ ಭದ್ರಕೋಟೆಗೆ, ಬಂಡಾಯವೆದ್ದ ಸ್ಥಳದ ಅತಿ ಸಾಮೀಪ್ಯದಿಂದ, ಬಹು ದೊಡ್ಡ ಅಪಾಯಕ್ಕೀಡಾಗಿದೆ. ಆದಕಾರಣ ಕಿತ್ತೂರು ಮತ್ತು ಧಾರವಾಡಗಳ ನಡುವೆ ಸಾಕಷ್ಟು

ಸೈನ್ಯವನ್ನು ಶೇಖರಿಸಿ, ಧಾರವಾಡವನ್ನು ಈ ಬಂಡುಖೋರರು ಯೋಚಿಸುತ್ತಿರುವ ಆಕ್ರಮಣವಾಗದಂತೆ ರಕ್ಷಿಸುವುದು ಅವಶ್ಯವಾಗಿದೆ. ಈ ಉದ್ದೇಶಕ್ಕಾಗಿ, ಮಾರ್ಜನ್ನಿನಲ್ಲಿ ಕಾಣಿಸಿದ ಆರ್ಡನನ್ಸ ಹಾಗೂ ಅನೇಕ ಕಾರ್ಪ್ಸಗಳ ಡಿಟ್ಯಾಚಮೆಂಟಗಳನ್ನೊಳಗೊಂಡ ಸೈನ್ಯವನ್ನು ಸಂಪೂರ್ಣವಾಗಿ ನಿಮ್ಮ ಅಧೀನಕ್ಕೆ ಒಪ್ಪಿಸಲಾಗಿದೆ.

ನೀವು ನಾಳೆ ಮುಂಜಾನೆ ಈ ಸೈನ್ಯವನ್ನು ಮಲಪ್ರಭಾನದಿಯ ದಂಡೆಯ ಮೇಲಿನ ಮುಗುಟಖಾನ ಹುಬ್ಬಳ್ಳಿಯೆಡೆಗೆ ಕಳಿಸಬೇಕು. ಆಮೇಲೆ ಎಲ್ಲ ಸೈನ್ಯ ಅಲ್ಲಿ ಮುಟ್ಟಿದ ನಂತರ ಆ ಸೈನ್ಯದೊಂದಿಗೆ ನೀವು ನದಿಯನ್ನು ದಾಟಿ, ಕಿತ್ತೂರು ಧಾರವಾಡಗಳ ನಡುವೆ ಧಾರವಾಡವನ್ನು ರಕ್ಷಿಸಲು ಅನುಕೂಲವಾಗುವ ದೃಷ್ಟಿಯಿಂದ ಆದಷ್ಟು ಧಾರವಾಡದ ಸಮಿಪಕ್ಕೆ ಒಂದು ಸ್ಥಳವನ್ನು ಆರಿಸಿ ಈ ಸೈನ್ಯದೊಂದಿಗೆ ಅಲ್ಲಿ ಬೀಡು ಬಿಡಬೇಕು.

ನೀವು ನಿಮ್ಮ ಅಧೀನದಲ್ಲಿರುವ ಸೈನ್ಯವನ್ನು, ಬಂಡುಖೋರರ ಚಲನವಲನವನ್ನು ತೀಕ್ಷ್ಣವಾಗಿ ನೋಡಿ ಮಾಹಿತಿಯನ್ನು ಪಡೆಯುವುದಕ್ಕಾಗಿದೆಯೆಂಗು ಭಾವಿಸಬೇಕೇ ವಿನಃ ಬಂಡುಖೋರರ ಮೇಲೆ ದಾಳಿ ಮಾಡಲಿಕ್ಕೆ ಅಲ್ಲ ಎಂಬುದುನ್ನು ನೆನಪಿನಲ್ಲಿಡಬೇಕು. ಈ ಉದ್ದೇಶಕ್ಕಾಗಿ ನೀವು ಸಾಕಷ್ಟು ಬಲಶಾಲಿಯಾದ ಕುದುರೆ ಹಾಗೂ ಕಾಲಾಳುಗಳನ್ನು ಒಳಗೊಂಡ ಸೈನ್ಯದ ತಂಡಗಳನ್ನು ನಿಮ್ಮ ಬೀಡಿನ ಸ್ಥಳ ಹಾಗೂ ಕಿತ್ತೂರಿನ ಮಧ್ಯ ಮೇಲಿಂದ ಮೇಲೆ ಓಡಾಡಿಸಿ, ಬಂಡುಖೋರರ ಚಟುವಟಿಕೆಗಳ ಮಾಹಿತಿ ಸಂಗ್ರಹಿಸಿ, ನಿಮಗೆ ಅವಶ್ಯವೆನಿಸಿದ ಮಾಹಿತಿಯನ್ನು ನಿರಂತರವಾಗಿ ಜಿಲ್ಲಾ ಹೆಡ್ ಕ್ವಾರ್ಟರ್ಸಿಗೆ ಕಳಿಸಿಕೊಡುತ್ತಿರಬೇಕು.

ಸಿವಿಲ್ ವಿಭಾಗದಲ್ಲಿ ಥ್ಯಾಕರೇನ ಪಶ್ಚಾತ್ ಯಾರನ್ನು ನೇಮಿಸಲಾಗಿದೆಯೆಂಬುದರ ಬಗ್ಗೆ ಮಾಹಿತಿ ಸಿಗದೇ ಇರುವುದರಿಂದ, ಕರ್ನಲ್ ಪಿಯರ್ಸನ್‌ನಿಗೆ ನಿಮ್ಮ ಪತ್ರಕ್ಕೆ ಉತ್ತರ ರೂಪವಾಗಿ ಆಜ್ಞೆಗಳನ್ನು ಕೊಡಲು ತೊಂದರೆಯಾಗಿದೆ. ಆದರೂ ನಿಮಗೆ ಈ ವಿಷಯದಲ್ಲಿ ಯಾರಿಂದಲಾದರೂ ಪತ್ರಗಳು ಬಂದರೆ ಇಲ್ಲಿರುವ ಪರಿಸ್ಥಿತಿಯ ಬಗ್ಗೆ ಅವರಿಗೆ ತಿಳಿಸಬೇಕು. ಆದರೆ ಯಾವುದೇ ಪ್ರಸಂಗದಲ್ಲಿಯೂ ಕರ್ನಲ್ ಪಿಯರ್ಸನ ಪೂರ್ವ ಒಪ್ಪಿಗೆಯಿಲ್ಲದೆ ಕಿತ್ತೂರಿನ ಮೇಲೆ ಆಕ್ರಮಣ ಮಾಡುವ ಯಾವ ಕ್ರಮವನ್ನೂ ಕೂಡ ನೀವು ಸರ್ವಥಾ ಕೈಕೊಳ್ಳಕೂಡದು.

ಧಾರವಾಡದಲ್ಲಿಯ ಆಫೀಸರ ಕಮಾಂಡಿಂಗರೊಂದಿಗೆ ಬಹಳ ಜಾರೂಕತೆಯಿಂದ ವ್ಯವಹರಿಸಬೇಕೆಂದು ಅಪೇಕ್ಷಿಸಲಾಗಿದೆ.

ಇತಿ ನಿಮ್ಮ,

ಸಹಿ. ಅಯ್. ಅಯ್. ಓ. ಡೋನೋಝು

ಅಸಿಸ್ಟಂಟ್ ಕ್ವಾರ್ಟರ ಮಾಸ್ತರ ಜನರಲ್

ಆದರೆ ಅಷ್ಟರಲ್ಲಿ, ರಾಣಿ ಚೆನ್ನಮ್ಮನ ಆಜ್ಞೆಯ ಪ್ರಕಾರ ಮುಗುಟಖಾನ ಹುಬ್ಬಳ್ಳಿಯ ಹತ್ತಿರ ನದಿಯ ದಂಡೆಯ ಮೇಲಿನ ಎಲ್ಲ ನಾವೆಗಳನ್ನೂ ಮುಳುಗಿಸಲಾಗಿತ್ತು ಮತ್ತು ಕಿತ್ತೂರ ಹಾಗೂ ಮುಗುಟಖಾನ ಹುಬ್ಬಳ್ಳಿಯ ಮಧ್ಯದ ಕ್ಷೇತ್ರದಲ್ಲಿ ಕಿತ್ತೂರಿನ ಸೈನಿಕರು ಗಸ್ತಿ ತಿರುಗುತ್ತಿದ್ದರು.

ಇಲ್ಲಿಯ ಘಟನೆಗಳ ಬಗ್ಗೆ ತಾನು ಕೈಕೊಂಡ ತ್ವರಿತ ಕ್ರಮಗಳ ಬಗ್ಗೆ ಕರ್ನಲ್ ಪಿಯರ್ಸ್ ಪುಣೆಯಲ್ಲಿದ್ದ ಕ್ವಾರ್ಟರ ಮಾಸ್ಟರ ಜನರಲ್ಲನಿಗೆ ತನ್ನ 712 ನಂಬರಿನ 1824 ರ 25 ನೆಯ ಅಕ್ಟೋಬರ ತಾರೀಖಿನ ಪತ್ರದಲ್ಲಿ ತಿಳಿಯಪಡಿಸಿದನು. ಈ ಮಾಹಿತಿಯನ್ನೊಳಗೊಂಡ ಪತ್ರದ ಭಾಗ ಈ ಕೆಳಗಿನಂತಿದೆ:

"ಈ ಪ್ರಸಂಗವನ್ನು ಎದುರಿಸಲು ನಾನು 4 ನೆಯ ಅಶ್ವಸೈನ್ಯದ ಲೆಫ್ಟನಂಟ್ ಕರ್ನಲ್ ಮೆಕ್‌ಲಾಯಿಡನ ನಾಯಕತ್ವದಲ್ಲಿ ಇಂದು, ಆ ರೆಜಿಮೆಂಟಿನ ಬಹುಮಟ್ಟಿನ ಎಲ್ಲ ಭಾಗವನ್ನು, ಒಂದು ರಾವುತರ ದಳ ಹಾಗೂ ಬೇನೆಗೆ ಬಿದ್ದ ಕುದುರೆಗಳನ್ನು ಮಾತ್ರ ಬಿಟ್ಟು, ಯಂತ್ರಗಳನ್ನು ಜಗ್ಗಲು ಎಷ್ಟು ಎತ್ತುಗಳು ಸಿಕ್ಕವೋ ಅಷ್ಟು ಮಾತ್ರ ತೋಪುಗಳನ್ನು, ಹಿಜ್ ಮೆಜಿಸ್ಟೀಸ್ 46ನೆಯ ಕಾಲ್ದಳದ ಒಂದು ಪಡೆಯನ್ನು, 49 ನೆಯ ಶಾಶ್ವತ ಸೈನ್ಯಭಾಗದ ಎರಡು ಪಾರ್ಶ್ವ ರಕ್ಷಣೆ ಮಾಡುವ ಪಡೆಗಳನ್ನು ಮತ್ತು ಸಶಸ್ತ್ರ ಕಾಲ್ದಳದ ಪಡೆ – ಇವುಗಳನ್ನೆಲ್ಲ ಕಳಿಸಿಕೊಟ್ಟಿದ್ದೇನೆ.

"ಇದಲ್ಲದೆ ಅವರ ಆಯುಧದ ಚೀಲಗಳನ್ನು ಒಯ್ಯಲು ಗಾಡಿಯ ವ್ಯವಸ್ಥೆಮಾಡಿ, ಸೊಲ್ಲಾಪುರದಿಂದ 23 ನೆಯ ಲಘು ಪದಾತಿ ಸೈನ್ಯವನ್ನು ಕೂಡಲೇ ಬೆಳಗಾವಿಗೆ ಕಳಿಸಿಕೊಡಲು ಆಜ್ಞಾಪಿಸಿದ್ದೇನೆ.

"ಇದಲ್ಲದೆ ಆಡಳಿತ ವಿಭಾಗದ ಜಿಲ್ಲೆಗಳಲ್ಲಿಯ ಆಫೀಸರ ಕಮಾಂಡಿಂಗರಿಂದ ಈ ಕೆಳಗೆ ಕಾಣಿಸಿದ ಸೈನ್ಯಗಳ ತ್ವರಿತ ಸಹಾಯವನ್ನು ಕೇಳಿದ್ದೇನೆ –

ಯೂರೋಪಿಯನ್ ಫಿರಂಗಿ ಕಾಲ್ದಳದ ಒಂದು ಪಡೆ.

ಹಿಜ್ ಮೆಜಸ್ಟೀಸ್ 46 ನೆಯ ಕಾಲ್ದಳದ ಎರಡು ಪೂರ್ಣ ಪಡೆಗಳು.

ದೇಶೀ ಪದಾತಿ ಸೈನ್ಯದ ಒಂದು ಶಾಶ್ವತ ಸೈನ್ಯದ ವಿಭಾಗ.

ಇದಲ್ಲದೆ ತಮಗೆ ಹೆಚ್ಚುಳಿದ ಬೇರೆ ಸೈನ್ಯ ವಿಭಾಗಗಳು.

ಇವುಗಳನ್ನು ಧಾರವಾಡದ ಕಡೆಗೆ ಸಾಗಿಸಲು ಕೇಳಿಕೊಂಡಿದ್ದೇವೆ.

ಇದಲ್ಲದೆ ಇನ್ನೂ ಹೆಚ್ಚಿನ ಸೈನ್ಯಗಳ ಅವಶ್ಯವಾಗಬಹುದೆಂದು ನಾನು ಭಾವಿಸಿದ್ದೇನೆ."

ಅದೇ ದಿವಸ ಆತನು ಬಳ್ಳಾರಿಯ ಆಫೀಸರ ಕಮಾಂಡಿಂಗಗೆ ಒಂದು ಪತ್ರ ಬರೆದು ಈ ಕೆಳಗಿನ ಸೈನ್ಯ ವಿಭಾಗಗಳನ್ನು ಕಳುಹಿಸಲು ಕೇಳಿಕೊಂಡನು.

ಹಿಜ್ ಮೆಜಸ್ಟೀಸ್ 46 ನೆಯ ಕಾಲ್ದಳದ ಎರಡು ಪೂರ್ಣ ಪಡೆಗಳು.

ದೇಶೀ ಪದಾತಿ ಸೈನ್ಯದ ಒಂದು ಶಾಶ್ವತ ಸೈನ್ಯದ ವಿಭಾಗ.

ಇಷ್ಟರಲ್ಲಿ ಕಿತ್ತೂರಿನಲ್ಲಿ, ಸ್ಟೀವನ್ಸನ್ ಮತ್ತು ಇಲಿಯಟ್ ಅವರು ಕಿತ್ತೂರ ಮುಖಂಡರೊಡನೆ ಒಂದು ಸಂಕ್ಷಿಪ್ತ ಭೆಟ್ಟಿ ನಡೆಸಿದ್ದರು. ಸ್ಟೀವನ್ಸನ್ ನಡೆದ ಘಟನೆಗಳನ್ನು ನಿರ್ವಿಕಾರಭಾವದಿಂದ ವಿಚಾರಿಸಬಲ್ಲ ಪ್ರಜ್ಞಾವಂತ ಗೃಹಸ್ಥನಾಗಿದ್ದನು. ಬ್ರಿಟಿಷರ ಹೀನಾಯಮಾನವಾದ ಅಪಜಯದಲ್ಲಿ ಪರ್ಯಾವಸನಗೊಂಡ ಬಂಡಾಯಕ್ಕೆ ಪೂರ್ವಭಾವಿಯಾದ ಘಟನೆಗಳ ಬಗ್ಗೆ ಆತನು ಸಮಾಧಾನಚಿತ್ತದಿಂದ ವಿಚಾರಮಾಡಿದನು. ಆತನು

ಚಾಪ್ಲಿನ್‌ನಿಗೆ 23ನೆಯ ದಿನ ರಾತ್ರಿ ಇನ್ನೊಂದು ಸುದೀರ್ಘವಾದ ಪತ್ರ ಬರೆದು, 23ನೆಯ ದಿನಾಂಕದವರೆಗಿನ ಘಟನೆಗಳ ಸಂಪೂರ್ಣ ವಿವರವನ್ನು ಕೊಟ್ಟನು. ಆ ಪತ್ರದಲ್ಲಿ ಆತ ಪೊಲಿಟಿಕಲ್ ಏಜಂಟ ಅನುಸರಿಸಿದ ಅಚಾತುರ್ಯದ ಹಾಗೂ ಅತ್ಯಾಸೆಯ ಧೋರಣೆ ಹಾಗೂ ಅವನು ಕೈಕೊಂಡ ಅನವಶ್ಯಕವಾದ ಆತುರದ ಕ್ರಮಗಳೇ ಈ ಅನಾಹುತಕ್ಕೆ ಕಾರಣವಾದವೆಂದು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದನು.

ಆ ನಡೆದ ಘಟನೆಗಳ ಬಗೆಗೆ ಆತನಿಗೆ ಅನಿಸಿದ ವಿಚಾರಗಳನ್ನು ತಿಳಿಸುವ ಪತ್ರದ ಭಾಗ ಕೆಳಗಿನಂತಿದೆ:

"ಥ್ಯಾಕರೇನಿಂದ ಆಗಿದೆಯೆಂದು ಹೇಳಲಾದ ಹಲವು ಅಸಡ್ಡೆ ನಡವಳಿಕೆಗಳಿಂದ ಕೆರಳಿದ ಮುಖ್ಯ ಸರದಾರರಲ್ಲಿ ಒಬ್ಬನಾದ ಗುರುಸಿದ್ದಪ್ಪ ಹಾಗೂ ಹಿಂದಿನ ದೇಸಾಯರ ವಿಧವೆ ಪತ್ನಿ ಚೆನ್ನಮ್ಮ ಇವರಿಬ್ಬರೂ ಉಳಿದವರೆಲ್ಲರ ಮನಸ್ಸುಗಳನ್ನು ಉದ್ರೇಕಗೊಳಿಸಿದ್ದಾರೆ. ಈಗ ಪರಿಸ್ಥಿತಿ ತಾವು ಬಯಸಿದ್ದಕ್ಕೆ ಬಹಳ ವಿಕೋಪದ ಪರಿಸ್ಥಿತಿಗೆ ಹೋಗಿದೆಯಂಬುದು ಅವರಿಗೆ ತಿಳಿದಿದೆ. ತಮ್ಮ ಉದ್ದೇಶಸಾಧನೆಗೆ, ತಮ್ಮ ವಶದಲ್ಲಿರುವ ಬಂದಿಗಳು – ತಮ್ಮ ಏಕಮೇವ ಆಶಾಭಾವನೆಯಿಂದ ಅದರ ಮೇಲೆಯೇ ಅವರು ಹೆಚ್ಚಾಗಿ ಅವಲಂಬಿಸಿದ್ದಾರೆ. ಸರಕಾರದಿಂದ ಅವರಿಗೆ ಉತ್ತರ ಬರುವವರೆಗೆ ಮಾತ್ರ ನಮ್ಮನ್ನು ಬಂಧನದಲ್ಲಿಡಲಾಗುವುದೆಂದು ಗುರುಸಿದ್ದಪ್ಪ ಹೇಳುತ್ತಾನೆ. ಆತ ನಮ್ಮನ್ನು ಇಂದಿಗೂ ಗೌರವದಿಂದ ಕಾಣುತ್ತಾನೆ. ಅವನು ಹೇಳುವ ಪ್ರಕಾರ, ಸರಕಾರದಿಂದ ಅವರಿಗೆ ಬರುವ ಉತ್ತರ ಅನುಕೂಲವಾಗಿದ್ದರೆ ಮಾತ್ರ ನಮ್ಮನ್ನು ಬಿಡುಗಡೆಮಾಡುವುದಾಗಿಯೂ ಹೇಳುತ್ತಾನೆ. ಉತ್ತರ ಪ್ರತಿಕೂಲವಾಗಿದ್ದರೆ ಅವರು ಮೊದಲು ತಮ್ಮ ಹೆಣ್ಣುಮಕ್ಕಳನ್ನೂ ಆಮೇಲೆ ಬಂಧಿತರನ್ನೂ ಕೊಂದು, ತಮ್ಮ ಭೂಮಿಯನ್ನು ರಕ್ಷಿಸುತ್ತ ಪ್ರಾಣವನ್ನರ್ಪಿಸಲು ಪಣತೊಟ್ಟಿರುವುದಾಗಿ ಹೇಳುತ್ತಾನೆ. ಈಗ ನಡೆದ ಘಟನೆಗಳ ಪರಿಣಾಮ ಏನಾಗುವುದೋ ಎಂಬ ಹೆದರಿಕೆಯಿಂದ ಈ ತರಹದ ಸಂಯಮದ ಭಾಷೆಯಲ್ಲಿ ಆತ ಮಾತನಾಡುತ್ತಿದ್ದಾನೆಂದು ಅನಿಸುತ್ತದೆ. ಸಂಸ್ಥಾನವನ್ನು ಮುಂದುವರಿಸಲು ಒತ್ತಾಯಿಸಲು ಅವನು ಹೀಗೆ ಮಾತನಾಡುತ್ತಿದ್ದಾನೆ ಎಂದು ನನಗನಿಸುವುದಿಲ್ಲ. ಬೆಳಗಾವಿಯಿಂದ ಸೈನ್ಯ ನದಿಯವರೆಗೆ ಸಾಗಿಸಲ್ಪಟಿದೆಯೆಂದು ಕೇಳಿದ್ದೇನೆ. ಆದರೆ ಈ ರಾಜ್ಯವನ್ನು ಆಕ್ರಮಿಸಲು ಅದು ಸಾಕಷ್ಟು ಸಾಮರ್ಥ್ಯವುಳ್ಳದ್ದೆಂದು ನನಗೆನಿಸುವುದಿಲ್ಲ. ಈ ಸ್ಥಳದಲ್ಲಿ ಆಗಲೇ 1,000 ಕ್ಕೂ ಹೆಚ್ಚಿಗೆ ಜನ ಶೇಖರಿಸಲ್ಪಟ್ಟಿದ್ದಾರೆಂದು ನಾನು ಕೇಳಿದ್ದೇನೆ. ಈಗಿರುವ ಪರಿಸ್ಥಿತಿಯಲ್ಲಿ, ಸರಕಾರದಿಂದಾಗಲಿ, ಈ ವಿಷಯದಲ್ಲಿ ಅಧಿಕಾರಹೊಂದಿದ ಯಾವ ಆಫೀಸರರಿಂದಾಗಲಿ, ಯಾವುದೇ ಆದೇಶಗಳಿಲ್ಲದಿರುವುದರಿಂದ, ನಾನು ಕಮಾಂಡಿಗ ಆಫೀಸರನಿಗೆ ಮೇಲಿನಿಂದ ಆಜ್ಞೆ ಬರುವವರೆಗೆ ಸೈನ್ಯವನ್ನು ಅಲ್ಲಿಯೇ ನಿಲ್ಲಿಸಲು ಬರೆದಿದ್ದೇನೆ. ಆ ಪತ್ರದಲ್ಲಿ, ಈ ಸ್ಥಳದಲ್ಲಿ ಬ್ರಿಟಿಷರು ಒಂದೇ ಒಂದು ಗುಂಡು ಹಾರಿಸಿದರೂ,

ನಾವಿಬ್ಬರೂ, ಈ ಉದ್ರಿಕ್ತ ಜನಸಮೂಹದ ಉಗ್ರ ಸಂತಾಪಕ್ಕೆ ಬಲಿಯಾಗುತ್ತೇವೆ ಎಂಬ ವಿಷಯದಲ್ಲಿ ನನಗೆ ಎಳ್ಳಷ್ಟು ಸಂಶಯವಿಲ್ಲ ಎಂಬ ವಿಷಯವನ್ನೂ ತಿಳಿಸಿದ್ದೇನೆ. ಸರದಾರರು ಹೀಗೆ ಮಾಡಲಿರುವರೆಂಬುದನ್ನು ಕೆಲವು ಸರದಾರರು ನನ್ನ ಎದುರಿಗೆ ಹೇಳಿದ್ದಾರೆ. 23ನೆಯ ದಿನಾಂಕ ನಾವು ದೌರ್ಭಾಗ್ಯದಿಂದ ಕಣ್ಣಾರೆ ನೋಡಿದ ಅವರ ಕ್ರೂರ ಸಂತಾಪ, ಅಂಕೆತಪ್ಪಿದ ನಡುವಳಿಕೆಯ ರೀತಿಯನ್ನು ನೆನೆಸಿದರೆ, ಅವರು ಹೇಳುತ್ತಿರುವದನ್ನು ಮಾಡುವರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ನಮ್ಮ ಕೂಡ ಜೈಲಿನಲ್ಲಿರುವ ಶಿರಸ್ತೆದಾರ ಶ್ರೀನಿವಾಸರಾಯನಿಗೆ ತಿರಿಗೆ ಜೈಲಿಗೆ ಬರುವ ಭರವಸೆಯ ಮೇಲೆ ಈ ಪತ್ರವನ್ನು ಒಯ್ದು ನಿಮಗೆ ಮುಟ್ಟಿಸಲು ಪರವಾನಿಗೆ ಕೊಡಲಾಗಿದೆ. ನಮಗೆ ಹಾಕಲಾದ ಕರಾರುಗಳಂತೆಯೇ ಗುರುಸಿದ್ದಪ್ಪ ಅವರಿಗೂ ಕರಾರು ಹಾಕಿದ್ದಾನೆ. ನೀನು ಇಲ್ಲಿ ಸ್ವತಃ ಬರದೆ ಹೊರತು ಇಲ್ಲಿಯ ದೌರ್ಭಾಗ್ಯದ ಸಂಗತಿಗಳನ್ನಾಗಲಿ, ಅಥವಾ ಬೇರೆ ಯಾವ ವ್ಯವಸ್ಥೆಯನ್ನಾಗಲಿ ನಿರ್ಧರಿಸಲು ಸಾಧ್ಯವಾಗುವುದಿಲ್ಲ. ಪತ್ರದಲ್ಲಿ ಏನೆಲ್ಲ ಹೇಳುವುದು ಸಾಧ್ಯವೋ ಅದನ್ನೆಲ್ಲ ನಾನು ಹೇಳಿದ್ದೇನೆ ಎಂದೆನಿಸುತ್ತದೆ. ನಿನ್ನನ್ನು ಮುಖತಃ ಭೆಟ್ಟಿಯಾಗುವ ಭಾಗ್ಯ ನನ್ನ ಪಾಲಿಗೆ ಬಂದರೆ, ಆಗ ಇಲ್ಲಿಯ ಘಟನೆಗಳ ಬಗೆಗೆ ವಿವರವಾಗಿ ಹೇಳಲು ಸಾಧ್ಯವಾಗುತ್ತದೆ. ಆದರೆ ನನಗೆ ಎಲ್ಲ ಕಡೆಯಿಂದ ದೊರೆತ ಸುದ್ದಿಯ ಪ್ರಕಾರ ಅವರಿಗೆ 10,000 ಜನರನ್ನು ಕೂಡಿಸುವುದು ಅಸಾಧ್ಯವಾದದ್ದೇನಲ್ಲ. ಈಗಾಗಲೇ ಅವರ ಸೈನ್ಯ ಅಷ್ಟು ಜನರನ್ನು ಪಡೆದಿದೆಯೆಂದು ಕೇಳಿದ್ದೇನೆ. ಮತ್ತು ಕಿತ್ತೂರಿನ ಮುಖಂಡರೂ ಹಾಗೂ ಜನತೆ ಎಲ್ಲರೂ ಭಯತೊರೆದು ನಿಂತಿದ್ದಾರೆಂದು ಶಿರಸ್ತೆದಾರ ಹೇಳುತ್ತಿದ್ದಾನೆ".

ಇಷ್ಟರಲ್ಲಿ ಕಿತ್ತೂರಿನ ಉತ್ಸಾಹಭರಿತರಾದ ಸರದಾರರು ಮತ್ತು ಮುಖಂಡರೂ ಸೇರಿ ಕಿತ್ತೂರಿನ ಪಟ್ಟಕ್ಕೆ ಶ್ರೀ ಶಿವಲಿಂಗಪ್ಪನನ್ನು ಕೂಡಿಸಿ 1824ರ ಅಕ್ಟೋಬರ 27ರಂದು ಸಿಂಹಾಸನಾರೋಹಣ ಸಮಾರಂಭವನ್ನು ವಿಜೃಂಭಣೆಯಿಂದ ನಡೆಯಿಸಿದರು. ಕಿತ್ತೂರಿನ ಮಗ್ಗಲಿನಲ್ಲಿರುವ ಚೌಕಿಮಠದಲ್ಲಿ ಸಮಾರಂಭ ವಿಧಿಯುಕ್ತವಾಗಿ ನಡೆಯಿತು. ಸಿಂಹಾಸನ ವನ್ನು ಆರೋಹಣ ಮಾಡಿದ ದೊರೆಗೆ ಸ್ವಾಮಿಗಳು ತುಂಬು ಹೃದಯದಿಂದ ಆಶೀರ್ವದಿಸಿದರು. ಈ ಸಮಾರಂಭಕ್ಕೆ ಕಿತ್ತೂರಿನ ನಾಡಿನ ಎಲ್ಲ ಕಡೆಗಳಿಂದ ಜನರು ಬಂದಿದ್ದರು.

ಕಿತ್ತೂರಿನಲ್ಲಿ ಪ್ರಜ್ವಲಿಸಿದ ಬಂಡಾಯದ ಸುದ್ದಿ ಇಷ್ಟರಲ್ಲಿ ಎಲ್ಲ ಕಡೆಗೆ ಹಬ್ಬಿತ್ತು. ಇದರ ಪ್ರತಿಕ್ರಿಯೆಯಾಗಿ ಹಲವಾರು ಕಡೆಗೆ ಬ್ರಿಟಿಷ್ ಆಳ್ವಿಕೆಯ ವಿರುದ್ಧ ಸಣ್ಣ ಪ್ರಮಾಣದ ಗಲಭೆಗಳು ತೋರಿದವು. ಅದರಂತೆ ಧಾರವಾಡದಲ್ಲಿಯೂ ಗಲಭೆ ಕಂಡುಬಂದಿತು. ಗಾಬರಿಯಾದ ಮಿಲಿಟರಿ ಅಧಿಕಾರಿಗಳು ತಮ್ಮ ಬೇಹುಗಾರರನ್ನು ಎಲ್ಲೆಡೆ ಮಾಹಿತಿ ಸಂಗ್ರಹಿಸಿ, ಗಲಭೆಯ ಪ್ರದೇಶಗಳಿಗೆ ಸೈನ್ಯಗಳಿಗೆ ಕಳುಹಿಸಿಕೊಡುವ ಕಾರ್ಯದಲ್ಲಿ ನಿರತರಾಗಿದ್ದರು. ಕ್ವಾರ್ಟರ ಮಾಸ್ತರ ಜನರಲ್‌ನಿಗೆ ಕ್ಯಾಪ್ಟನ್ ಪಿಯರ್ಸನು ಅಕ್ಟೋಬರ

27ರಂದು ಬರೆದ ಪತ್ರದಲ್ಲಿ ಧಾರವಾಡದಲ್ಲಿ ನಡೆದ ಘಟನೆಗಳ ಬಗೆಗೆ ಹಾಗೂ ಕಿತ್ತೂರ ಬಂಡುಗಾರರು ಧಾರವಾಡದ ಮೇಲೆ ದಾಳಿ ಮಾಡುವುದನ್ನು ಪ್ರತಿಬಂಧಿಸಲು ತಾನು ಕೈಕೊಂಡ ಕ್ರಮಗಳ ಬಗೆಗೆ ಉಲ್ಲೇಖವಿದೆ. ಈ ಸಂಗತಿಗಳನ್ನು ನಿರೂಪಿಸುವ ಪತ್ರದ ಭಾಗ ಕೆಳಗಿನಂತಿದೆ:

"ಹಿಜ್ ಎಕ್ಸಲೆನ್ಸಿ, ಕಮಾಂಡರ-ಇನ್ - ಚೀಫ್ ಅವರ ಮಾಹಿತಿಗಾಗಿ, ಕೆಳಗಿನ ವಿಷಯವನ್ನು ತಿಳಿಸುವ ಗೌರವವನ್ನು ಹೊಂದಿದವನಾಗಿದ್ದೇನೆ. ನನ್ನ 25 ರ ಪತ್ರದಲ್ಲಿ ಕಾಣಿಸಿದ ಸೈನ್ಯ ಪಡೆಯಲ್ಲದೆ 4 ನೆಯ ಅಶ್ವಸೈನ್ಯದ ಒಂದು ದಳ ಹಾಗೂ 46 ನೆಯ ಶಾಶ್ವತ ಸೈನ್ಯ ವಿಭಾಗದ ಎರಡು ಪಡೆಗಳು 23ನೆಯ ರಾತ್ರಿ ಇಲ್ಲಿಂದ ಹೊರಟವು. ಆದರೆ ಅವುಗಳಿಗೆ ಮಲಪ್ರಭಾ ನದಿಯನ್ನು ದಾಟಲು ಸಾಧ್ಯವಾಗಿರಲಿಲ್ಲ. ನಿನ್ನೆ ಮುಂಜಾನೆ 4 ನೆಯ ಶಾಶ್ವತ ಸೈನ್ಯದ ಲಘು ಅಶ್ವದಳದ ಲೆಫ್ಟನಂಟ್ ಕರ್ನಲ್ ಮೆಕ್‌ಲಾಯಡ್‌ನ ನಾಯಕತ್ವದಲ್ಲಿ ಕೆಳಗೆ ಕಾಣಿಸಿದ ಸೈನ್ಯ ವಿಭಾಗಗಳು ಬೆಳಗಾವಿಯಿಂದ ಹೊರಟವು.

4 ನೆಯ ಅಶ್ವ ಸೈನ್ಯದ ಮೂರು ರಾವುತ ಪಡೆಗಳು.

2 ಹಿತ್ತಾಳೆಯ 12 ಪೌಂಡಿನ ಯುದ್ಧದ ಫಿರಂಗಿಗಳು.

ಹಿಜ್ ಮೆಜಸ್ಟಿಯ 46 ನೆಯ ಕಾಲ್ದಳದ ಒಂದು ಪಡೆ.

"ರ‍್ಯಾಂಕ್ ಮತ್ತು ಫೈಲುಗಳನ್ನೊಳಗೊಂಡ ಇದರ ಸಂಖ್ಯೆಯನ್ನು 100ಕ್ಕೆ ಏರಿಸಲಾಗಿದೆ. ಪ್ರಧಾನ ಕಲೆಕ್ಟರನ ಖಜಾನೆಯಿರುವ ಧಾರವಾಡದ ಮೇಲೆ ಬಂಡುಖೋರರು ದಾಳಿ ಮಾಡಲಿದ್ದಾರೆಂಬ ಸುದ್ದಿ ಮತ್ತು 'ಮೊಹರಮ್' ಹಬ್ಬದ ದಿನ ಧಾರವಾಡದ ಜೈಲಿನಲ್ಲಿದ್ದ ಅನೇಕ ಬಂದಿಗಳು ಕಾವಲುಗಾರರ ವಿರುದ್ಧ ಹಠಾತ್ತನೇ ಬಂಡೆದ್ದ ಸಂರ್ಭದಲ್ಲಿ 16 ಜನ ಸತ್ತರೆಂಬ ಸುದ್ದಿ ಬೇಹುಗಾರರಿಂದ ತಿಳಿದುಬಂದದ್ದರಿಂದ ನಾನು ಕರ್ನಲ್ ಮೆಕ್‌ಲಾಯಿಡ್‌ನ ಸೈನ್ಯದ ಗತಿಯನ್ನು ಬದಲಾಯಿಸಿ, ಕಿತ್ತೂರಿಗೆ ಹೋಗುವದರ ಬದಲು ಕಿತ್ತೂರು ಮತ್ತು ಧಾರವಾಡಗಳ ನಡುವಿನ ಸ್ಥಳದಲ್ಲಿ ಸೈನ್ಯದೊಡನೆ ಬೀಡು ಬಿಡಲು ಆಜ್ಞಾಪಿಸಿದೆ. ಈ ವಿಷಯದಲ್ಲಿ ಲೆಫ್ಟನಂಟ್ ಕರ್ನಲ್ ಮೆಕ್‌ಲಾಯಿಡ್‌ನಿಗೆ ನೀಡಿದ ಆದೇಶಗಳ ಪತ್ರದ ಪ್ರತಿಯನ್ನು ಇದರ ಸಂಗಡ ತಮ್ಮ ಅವಗಾಹನೆಗಾಗಿ ಇಟ್ಟಿದ್ದೇನೆ.

"ಬೆಳಗಾವಿಯ ಹತ್ತಿರ ಕೆಲವು ಕುದುರೆ ಸವಾರರ ಓಡಾಟದ ಸುದ್ದಿ ಬಂದದ್ದರಿಂದ 4 ನೆಯ ಅಶ್ವಸೈನ್ಯದ ಒಂದು ರಾವುತ ಪಡೆಯನ್ನು ಬೆಳಗಾವಿಯಲ್ಲಿಯೇ ಉಳಿಸಿಕೊಂಡಿದ್ದೇನೆ. ಈ ರಾವುತ ಪಡೆಯನ್ನಲ್ಲದೆ ಹೊಸದಾಗಿ ಸೈನ್ಯಕ್ಕೆ ಭರತಿಯಾದ ತರಬೇತು ಹೊಂದದ ಸೈನಿಕರು, ರೋಗಗ್ರಸ್ಥ ಕುದುರೆಗಳು ಹಾಗೂ ಸೈನಿಕರ ಮನೆತನದವರು ಮಾತ್ರ ಬೆಳಗಾವಿಯಲ್ಲಿದ್ದಾರೆ.

"ಧಾರವಾಡದ ರಕ್ಷಣಾಸೈನ್ಯದ ಬಲವನ್ನು ಹೆಚ್ಚಿಸುವುದಕ್ಕಾಗಿ, ನಾನು ಚಿತ್ರದುರ್ಗದಲ್ಲಿ ಇರುವ ಆಫೀಸರ್ ಕಮಾಂಡಿಂಗ್ ಅವರಿಗೆ, ತಮ್ಮಲ್ಲಿ ಹೆಚ್ಚಿಗೆ ಇರುವ, ಸೈನ್ಯದ ಘಟಕಗಳನ್ನು ಕೂಡಲೇ ಕಳಿಸಿಕೊಡಲು ಕೇಳಿಕೊಂಡಿದ್ದೇನೆ.

"ಇದಲ್ಲದೆ ಕಮಿಶನರರಿಗೆ, ದೇಶೀ ಪದಾತಿ ಸೈನ್ಯದ ಮುಂಬಯಿ ಶಾಶ್ವತಸೈನ್ಯ ವಿಭಾಗವನ್ನು, ಕೊನೆಗೆ ಅದರ ಒಂದು ವಿಭಾಗವನ್ನಾದರೂ, ಅಲ್ಲಿಂದ ಹೊರಬಂದ 23ನೆಯ ಪದಾತಿ ಸೈನ್ಯದ ಸ್ಥಾನವನ್ನು ತುಂಬಲು, ಸೊಲ್ಲಾಪುರಕ್ಕೆ ಕಳುಹಿಸಿಕೊಡಲು ಶಿಫಾರಸು ಮಾಡಿದ್ದೇನೆ."

ಅದೇ ದಿನ ಕರ್ನಲ್ ಪಿಯರ್ಸನು ಚಿತ್ರದುರ್ಗಕ್ಕೆ ಸೈನ್ಯವನ್ನು ಕೂಡಲೇ ಕಳಿಸಿಕೊಡಲು ಕೋಪಾವಿಷ್ಟ ಸಂದೇಶವನ್ನು ಕಳಿಸಿಕೊಟ್ಟಿದ್ದನು.

ಈ ಸೈನ್ಯ ಸನ್ನಾಹಗಳು ತ್ವರಿತಗತಿಯಿಂದ ಸಾಗಿರುವಾಗ, 26ನೆಯ ಅಕ್ಟೋಬರ ದಿನಾಂಕ ಕಾರ್ಯನಿರ್ವಾಹಕ ಪೊಲಿಟಿಕಲ್ ಏಜಂಟನೆಂದು ಅಧಿಕಾರ ವಹಿಸಿಕೊಂಡ ಮಿ.ಈಡನ್ ಬೆಳಗಾವಿಯಿಂದ ಧಾರವಾಡಕ್ಕೆ ಪ್ರಯಾಣ ಬೆಳೆಸಿದನು. ಆತನು ಧಾರವಾಡದಲ್ಲಿ ಉಳಿದು, 26 ಮತ್ತು 27ನೆಯ ದಿನಾಂಕ ಕಿತ್ತೂರಿನ ವಕೀಲನಾದ ಶ್ರೀನಿವಾಸರಾವನನ್ನು ಬರಮಾಡಿಕೊಂಡು ಅವನೊಂದಿಗೆ ಸಂಧಾನದ ಬಗ್ಗೆ ಮಾತುಕತೆ ನಡೆಸಿದನು. ಆತನು ಬೆಳಗಾವಿಗೆ 28ರಂದು ಮರಳಿದನು. ಅಷ್ಟರಲ್ಲಿ ಸ್ಟೀವನ್ಸನ್‌ನ 24ನೆಯ ದಿನಾಂಕದ ಪತ್ರ ಅಲ್ಲಿಗೆ ಬಂದಿತ್ತು. ಸ್ಟೀವನ್ಸನ್ ಮತ್ತು ಇಲಿಯಟ್‌ರ ದಾರುಣಸ್ಥಿತಿಯ ಕಲ್ಪನೆ ಈಡನ್‌ನಿಗೆ ಮನವರಿಕೆಯಾಯಿತು. ಆತ ಕೂಡಲೆ ಕ್ಯಾಪ್ಟನ್ ಪಿಯಸನ್‌ನಿಗೆ ಪತ್ರ ಬರೆದು, ತಾನು ಕಿತ್ತೂರ ವಕೀಲನೊಂದಿಗೆ ಈ ವಿಷಯದ ಬಗ್ಗೆ ಮಾತುಕತೆ ಮಾಡುವವರೆಗೆ ಮುಗಟಖಾನ ಹುಬ್ಬಳ್ಳಿಯ ಹತ್ತರ ಮಲಪ್ರಭಾ ನದಿಯನ್ನು ದಾಟಬಾರದೆಂದು ಲೆಫ್ಟನಂಟ್ ಕರ್ನಲ್ ಮೆಕ್‌ಲಾಯಿಡ್‌ನಿಗೆ ಕೂಡಲೇ ಅಜ್ಞಾಪಿಸಬೇಕೆಂಬ ಸಂದೇಶದೊಂದಿಗೆ ಒಬ್ಬ ದೂತನನ್ನು ಕಳುಹಿಸಿಕೊಟ್ಟ. 1824 ರ ಅಕ್ಟೋಬರ 28ರಂದು ಆತ ಕರ್ನಲ್ ಪಿಯರ್ಸನ್‌ನಿಗೆ ಬರೆದ ಪತ್ರದಲ್ಲಿ ಈ ವಿಷಯವನ್ನು ನಿರೂಪಿಸುವ ಭಾಗ ಕೆಳಗಿನಂತಿದೆ:

"ನಾನು ಕಿತ್ತೂರ ಪ್ರಭುಗಳಿಗೆ ಅವರ ಕೋಟೆಯ ಮೇಲೆ ದಾಳಿ ಮಾಡುವದಾಗಲಿ ಅಥವಾ ಅವರ ರಾಜ್ಯವನ್ನು ವಶಪಡಿಸಿಕೊಳ್ಳುವದಾಗಲೀ ನಮ್ಮ ಉದ್ದೇಶವಲ್ಲವೆಂದು ಸ್ಪಷ್ಟವಾಗಿ ಅವರಿಗೆ ಭರವಸೆ ಕೊಡುವವರೆಗೆ, ನಮ್ಮ ಸೈನ್ಯಪಡೆ ನದಿಯನ್ನು ದಾಟಿಸುವುದು, ಆ ಜನರಲ್ಲಿ ಎಷ್ಟೊಂದು ಭಯಭೀತಿ ಹುಟ್ಟಿಸುವದೆಂದರೆ, ಅದರಿಂದ ಸ್ಟೀವನ್ಸನ್ ಮತ್ತು ಇಲಿಯಟ್‌ರ ಜೀವಗಳು ಗಂಡಾಂತರಕ್ಕೀಡಾಗುವವು. ಮುಂಬಯಿಯಿಂದ ಆದೇಶಗಳು ಬರುವವರೆಗೆ ನಾವು ಯಾವ ಕ್ರಮವನ್ನು ಕೈಕೊಳ್ಳುವುದಿಲ್ಲವೆಂಬ ಭರವಸೆಯನ್ನು ನಾವು ಕೊಡಬೇಕು. ಕಿತ್ತೂರ ವಕೀಲ ಇಷ್ಟರಲ್ಲಿ ಬರಲಿದ್ದಾನೆ. ಅವನೊಡನೆ ಚರ್ಚಿಸಿದ ನಂತರ, ಸೈನ್ಯ ನದಿಯನ್ನು ದಾಟುವುದರ ಪರಿಣಾಮ ಏನಾಗಬಹುದೆಂಬುದನ್ನು ನಾನು ನಿರ್ಣಯಾತ್ಮಕವಾಗಿ ನಿರ್ಧರಿಸಬಲ್ಲೆ. ಅದನ್ನು ಕೂಡಲೇ ನಿಮಗೆ ತಿಳಿಯಪಡಿಸುವೆ. ಆದರೆ ನಾನು ತಮಗೆ ಬೇಡಿಕೊಳ್ಳುವದೇನಂದರೆ – ಕಿತ್ತೂರಿನ ಪ್ರಭುಗಳೊಡನೆ, ಮುಂಬಯಿಯಿಂದ ಈ ವಿಷಯದಲ್ಲಿ ಪೂರ್ತಿ ಆದೇಶಗಳು ಬರುವವರೆಗೆ, ಕಿತ್ತೂರಿನ ಮೇಲೆ ದಾಳಿಮಾಡುವ

ಉದ್ದೇಶ ನಮ್ಮದು ಸರ್ವಥಾ ಇಲ್ಲ ಎಂದು ಮಾತನಾಡಿ ಭರವಸೆ ಕೊಡುವವರೆಗೆ, ಸೈನ್ಯ ನದಿಯನ್ನು ದಾಟುವ ಆಜ್ಞೆಯನ್ನು ತಡೆಹಿಡಯಬೇಕೆಂಬುದು.

ನಿಮ್ಮ ಉತ್ತರದ ಅನುಗ್ರಹವಾದರೆ ನನಗೆ ಸಂತೋಷ."

ಈ ಬೇಡಿಕೆಗನುಗುಣವಾಗಿ ಪಿಯರ್ಸ ಮೆಕ್‌ಲಾಯಿಡ್‌ನಿಗೆ ಆದೇಶ ಕಳಿಸಿದನು. ಈ ಅಜ್ಞಾನುಸಾರವಾಗಿ ಸೈನ್ಯವು ಮಲಪ್ರಭಾ ನದಿಯನ್ನು ದಾಟಲಿಲ್ಲ. ಈ ಆಜ್ಞೆಯನ್ನು ವಿಧಿಸುವ ಕಾರಣವೆಂದರೆ, ಒಂದುವೇಳೆ ಬ್ರಿಟಿಷ್ ಸೈನ್ಯ ಮಲಪ್ರಭಾ ನದಿಯನ್ನು ದಾಟಿ ಕಿತ್ತೂರಿನ ಸಮೀಪ ಬಂದರೆ, ಬಂಡುಖೋರರು ಭಯಭೀತರಾಗಿ, ದುಡುಕಿನ ಕ್ರಮ ಕೈಕೊಂಡು ಬ್ರಿಟಿಷ್ ಆಫೀಸರರಾದ ಸ್ಟೀವನ್ಸನ್ ಮತ್ತು ಇಲಿಯಟ್‌ರನ್ನು ಕೊಂದು ಹಾಕಬಹುದೆಂಬ ಹೆದರಿಕೆ ಅವನಿಗಿದ್ದಿತು.

ಇಷ್ಟರಲ್ಲಿ ಅದೇ ದಿನ ಕಿತ್ತೂರಿನ ವಕೀಲ ಬೆಳಗಾವಿಗೆ ಬಂದನು. ಅವನೊಂದಿಗೆ ಈಡನ್ ಮಾತುಕತೆ ನಡೆಸಿದನು. ಕಿತ್ತೂರ ವಕೀಲ ಬ್ರಿಟಿಷ್ ಸೈನ್ಯ ಮುಟಗಖಾನ ಹುಬ್ಬಳ್ಳಿಯ ಹತ್ತರ ಮಲಪ್ರಭಾ ನದಿಯನ್ನು ದಾಟಲೇ ಕೂಡದೆಂದು ಹಟಹಿಡಿದನು. ಅದು ಕಿತ್ತೂರಿಗೆ ಬಹಳ ಸಮೀಪವಾಗಿರುವದರಿಂದ ಅನಾಹುತಕ್ಕೆ ಕಾರಣವಾಗಬಹುದಾಗಿತ್ತು. ಆದರೆ ಅವರು, ಅಪಾಯದಿಂದ ಸಾಕಷ್ಟು ದೂರವಿರುವ ಏಣಗೆಯ ಬಳಿ ಬೇಕಾದರೆ ಸೈನ್ಯ ನದಿಯನ್ನು ದಾಟಿ, ಕಿತ್ತೂರಿನ ಪ್ರಭುಗಳೊಡನೆ ನಡೆಸಿದ ಮಾತುಕತೆಗಳ ಫಲಶ್ರುತಿಯು ತಿಳಿಯುವವರೆಗೆ ಅಲ್ಲಿಯೇ ಬೀಡುಬಿಟ್ಟು ಕಾಯಬೇಕೆಂದು ಆತ ಆಗ್ರಹಪಡಿಸಿದನು. ಕಿತ್ತೂರಿನ ಪ್ರಭುಗಳೊಂದಿಗೆ ಮಾತುಕತೆ ನಡೆಸಲು ಆತನಿಗೆ ಸ್ವಲ್ಪ ಸಮಯ ಬೇಕಾಗಿತ್ತು. ಕಿತ್ತೂರಿನ ವಕೀಲನ ಕೂಡ ತಾನು ಮಾತುಕತೆ ನಡೆಯಿಸಿದ್ದರಿಂದ ಹೊರಬಂದ ಫಲಶ್ರುತಿಯ ಬಗ್ಗೆ ಕರ್ನಲ್ ಪಿಯರ್ಸನಿಗೆ ಆತನು ಕೂಡಲೇ ಪತ್ರವೊಂದನ್ನು ಬರೆದನು. ಆ ಪತ್ರದ ಭಾಗ ಇಂತಿದೆ:

"ಲೆಫ್ಟನೆಂಟ್ ಮೆಕ್‌ಲಾಯಿಡ್‌ನ ನಾಯಕತ್ವದಲ್ಲಿನ ಸೈನ್ಯಪಡೆಗೆ, ಈಗಿನ ಅವರ ಠಾಣೆಯಿಂದ ಏಣಗಿಗೆ ಸಾಗಿಸಲು ಎರಡುದಿನ ಬೇಕಾಗುವುದರಿಂದ, ಮತ್ತು ಅಷ್ಟರಲ್ಲಿ ನಿಮಗೆ ಕಿತ್ತೂರಿನ ಪ್ರಭುಗಳೊಡನೆ ಮಾತುಕತೆ ನಡೆಸಲು ಸಾಕಷ್ಟು ಸಮಯಾವಕಾಶ ದೊರೆಯುವದರಿಂದ, ನಾನು ನಿಮ್ಮ ಇಚ್ಛೆಯನ್ನು ಗೌರವಿಸಿ, ಈ ಸೈನ್ಯ ಮಲಪ್ರಭಾ ನದಿಯನ್ನು ದಾಟಕೂಡದೆಂದು ಆದೇಶ ಕಳುಹಿಸಿಕೊಡುತ್ತೇನೆ. ನಿಮ್ಮಿಂದ ಸಮಾಚಾರ ಬಂದೊಡನೆ ನದಿ ದಾಟಲು ಅವರು ತಯಾರಿಯಲ್ಲಿರಬೇಕೆಂದು ಹೇಳಿ ಕಳಿಸಿಕೊಡುತ್ತೇನೆ."

"ನನ್ನ ಹಿಂದಿನ ಪತ್ರ ಬರೆದ ನಂತರ, ಕಿತ್ತೂರಿನ ವಕೀಲನಾದ ಶೀನಪ್ಪನೊಂದಿಗೆ ಮಾತುಕತೆ ನಡೆಯಿಸಿ, ಮುಂಬಯಿಯಿಂದ ಖಚಿತ ಆದೇಶಗಳು ಬರುವವರೆಗೆ ಕಿತ್ತೂರಿನ ಮೇಲೆ ದಾಳಿ ಮಾಡುವ ಯಾವ ಉದ್ದೇಶವೂ ಇಲ್ಲವೆಂಬುದರ ಬಗೆಗೆ, ಅವನ ಮನಸ್ಸಿಗೆ ಖಾತ್ರಿ ಮಾಡಿಕೊಡುವಲ್ಲಿ ನಾನು ಯಶಸ್ವಿಯಾಗಿದ್ದೇನೆ. ನಮ್ಮ ಆಡಳಿತದಲ್ಲಿಯೇ ಇರುವ ಏಣಗೆಯ ಹತ್ತರ ಸೈನ್ಯ ನದಿಯನ್ನು ದಾಟಿ ಕಿತ್ತೂರಿಗೆ ಅನತಿ ದೂರದಲ್ಲಿ (ನರೇಂದ್ರದ ಹತ್ತಿರ)

ಠಾಣೆ ಬಿಟ್ಟರೆ, ನಮ್ಮ ಭರವಸೆಯ ಬಗ್ಗೆ ನಂಬುಗೆಯುಂಟಾಗುವದೆಂತಲೂ ಅಭಿಪ್ರಾಯ ಪಟ್ಟನು. ಅವನ ಈ ಬೇಡಿಕೆ ಯೋಗ್ಯವಾಗಿ ಕಂಡುಬಂದದ್ದರಿಂದ, ಅವನಿಗೆ ಕಿತ್ತೂರ ದೊರೆಗಳಿಗೆ ನಮ್ಮ ಸೈನ್ಯವನ್ನು ಏಣಗಿಯಿಂದ ಧಾರವಾಡದ ಕಡೆಗೆ ಸಾಗಿಸುವದಾಗಿರುವದೇ ವಿನಃ ಕಿತ್ತೂರಿನ ಕಡೆಗೆ ಸಾಗಿಸುವದು ಅಲ್ಲವೆಂಬುದರ ಬಗ್ಗೆ ಭರವಸೆ ನೀಡಲು, ನಾಳೆ ಮಧ್ಯಾಹ್ನದವರೆಗೆ ವೇಳೆ ಕೊಡಲಾಗಿದೆ. ನಾನು ಕಿತ್ತೂರಿಗೆ ಕೊಟ್ಟ ಭರವಸೆಯ ಬಗ್ಗೆ ನಿಮಗೆ ತಿಳಿಸಲು ಬಂದ ದೂತನಿಗೆ, ಅವನನ್ನು ಬ್ರಿಟಿಷ್ ಸೈನಿಕರಾರೂ ತಡೆಯುಂಟುಮಾಡಬಾರ ದೆಂಬ ಉದ್ದೇಶದಿಂದ, ಪಾಸನ್ನು ಕೇಳುತ್ತಾನೆ. ನಿಮ್ಮಿಂದ ಸ್ವಲ್ಪವೂ ವಿಲಂಬವಿಲ್ಲದೆ ಉತ್ತರದ ಅನುಗ್ರಹವನ್ನು ಕಾಯುತ್ತಿದ್ದೇನೆ''

ಇದಕ್ಕನುಗುಣವಾಗಿ ಕರ್ನಲ್ ಪಿಯರ್ಸನು ಸೈನ್ಯವನ್ನು ಏಣಗಿಗೆ ಸ್ಥಳಾಂತರಿಸಲು ಒಪ್ಪಿಕೊಂಡನು. ಇದು ಸುಮಾರು ಎರಡು ದಿವಸ ಹಿಡಿಯಬಹುದಾಗಿತ್ತು. ಇವರು ಮೇಲಿನಿಂದ ಆದೇಶಗಳಿಗಾಗಿ ಎರಡುದಿನ ದಾರಿ ಕಾಯ್ದು, ಮೂರನೆಯದಿನ, ಅಷ್ಟರಲ್ಲಿ ಏನೂ ಆದೇಶ ಬರದಿದ್ದರೆ, ಸೈನ್ಯವು ಏಣಗಿ ಹತ್ತರ ನದಿಯನ್ನು ದಾಟಿ ಕಿತ್ತೂರಿನ ಕಡೆಗೆ ಸಾಗಬೇಕು ಎಂದು ಇವರಿಬ್ಬರಲ್ಲಿ ತಿಳುವಳಿಕೆಯುಂಟಾಯಿತು. ಕರ್ನಲ್ ಪಿಯರ್ಸನು ಬರೆದ ಪತ್ರದ ಭಾಗ ಇಂತಿದೆ:

"ಈಗಾಗಲೇ ಲೆಫ್ಟನಂಟ್ ಮೆಕ್‌ಲಾಯಿಡ್‌ನಿಗೆ ಮುಗಟಖಾನ ಹುಬ್ಬಳ್ಳಿಯ ಹತ್ತಿರ ನದಿಯನ್ನು ದಾಟಬೇಕೆಂಬ ಆದೇಶದಲ್ಲಿ ಇಷ್ಟು ಮಾತ್ರ ಬದಲಾವಣೆ ಮಾಡಲು, ನನ್ನ ಕರ್ತವ್ಯ ಪ್ರಜ್ಞೆ ಅನುವು ಮಾಡಿಕೊಡುತ್ತದೆ. ನಿಮ್ಮ ಇಚ್ಚೆಯನ್ನು ಗೌರವಿಸಿ ಇದನ್ನು ಮಾಡಲು ನಾನು ಒಪ್ಪುತ್ತಿದ್ದೇನೆ. ಯಾವದೇ ಪ್ರಸಂಗದಲ್ಲಿ ಸೈನ್ಯಕ್ಕೆ ಏಣಗಿ ಮುಟ್ಟಿದ ಮರುದಿವಸ ನದಿಯನ್ನು ದಾಟಲು ಆದೇಶ ನೀಡಿ ಕಳುಹಿಸಿ ಕೊಡಲಾಗುತ್ತಿದೆಯೆಂಬುದು ನಿಮಗೆ ಸ್ಪಷ್ಟವಾಗಿ ತಿಳಿದಿರಬೇಕೆಂದು ನಾನು ಕೇಳಿಕೊಳ್ಳುತ್ತೇನೆ.''

ಮರುದಿವಸ ಅಂದರೆ ಅಕ್ಟೋಬರ 29 ನೆಯ ತಾರೀಖಿನಂದು, ಕರ್ನಲ್ ಪಿಯರ್ಸನು ಚಾಪ್ಲಿನ್‌ನಿಗೆ ಪತ್ರ ಬರೆದು ಈ ಘಟನೆಗಳ ಬಗ್ಗೆ ತಿಳಿಯ ಪಡಿಸಿದನು. ತನಗೆ ಸ್ಟೀವನ್ಸನ್ 26 ನೆಯ ತಾರೀಖಿನ ದಿವಸ ಬರೆದ ಪತ್ರದ ನಕಲನ್ನು ತನ್ನ ಪತ್ರದ ಸಂಗಡ ಇಟ್ಟು ಕಳಿಸಿದನು. ಇಲ್ಲಿಯ ಪರಿಸ್ಥಿತಿಯ ಗಂಭೀರ ಸ್ವರೂಪವನ್ನು ಅವನ ಮನಸ್ಸಿನ ಮೇಲೆ ಬಿಂಬಿಸುವದೇ ಆ ಪತ್ರದ ನಕಲನ್ನು ಕಳಿಸಿಕೊಡುವುದರ ಉದ್ದೇಶವಾಗಿತ್ತು.

ಇಷ್ಟರಲ್ಲಿ, ಮುಂಬಯಿ ಗವ್ಹರ್ನರನಾದ ಎಲ್‌ಫಿನ್‌ಸ್ಟನ್‌ನು ಚಾಪ್ಲಿನ್ ಹಾಗೂ ಉಳಿದವರ ಮುಖಾಂತರ, ಕಿತ್ತೂರಿನಲ್ಲಿ ನಡೆದ ಘಟನೆಗಳ ಬಗ್ಗೆ ಕೇಳಿ ತಿಳಿದುಕೊಂಡಿದ್ದನು. ಅವನು ತೀವ್ರ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದನು. ಅಕ್ಟೋಬರ 29ರಂದು ಬರೆದ ಅವನ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ (ಸೂಚನಾಪತ್ರ) ಯಲ್ಲಿ, ಈ ಘಟನೆಗಳ ಬಗ್ಗೆ ತನ್ನ ನಿರ್ಧಾರಗಳನ್ನು ಹಾಗೂ ಕೂಡಲೆ ಕಾರ್ಯರೂಪದಲ್ಲಿ ತರಲು ತ್ವರಿತ ಆಜ್ಞೆಗಳನ್ನು ಬರೆದು ಕಳುಹಿಸಿದನು. ಅವನು ಬರೆದ ಸೂಚನಾಪತ್ರದ (Memorandum) ಪೂರ್ತಿಪಾಠ ಇಂತಿದೆ:

"ಹೀಜ್ ಎಕ್ಸಲನ್ಸಿ, ಮಿ.ಎಲ್‌ಫಿನ್‌ಸ್ಟನ್, ಮುಂಬಯಿ ಗವ್ಹರ್ನರ, ಅವರು ಬರೆದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ (ಸೂಚನಾಪತ್ರ)

ತಾ॥ 29-10-1824

"ನಾನು ಬರೆಯುವ ವರದಿ ದುರ್ದೈವಿ ಥ್ಯಾಕರೇನ ಬಗ್ಗೆ ಸ್ವಲ್ಪಮಟ್ಟಿಗೆ ಉತ್ಪ್ರೇಕ್ಷಿತವೆನಿಸಬಹುದು. ಅವನ ಸಾವು ಒಂದು ದೊಡ್ಡ ಸಾರ್ವಜನಿಕ ನಷ್ಟವೇ ಸರಿ.

"ಈ ದುರ್ಘಟನೆಯ ಬಗ್ಗೆ ನನಗೆ ಬಂದ ಖಾಸಗಿ ಬಾತಮಿಯ ಆಧಾರದ ಮೇಲೆ, ನಾನು ಕಮಾಂಡರ–ಇನ್–ಚೀಫ್ ಅವನಿಗೆ ನಿನ್ನೆಯೇ ಬೆಳಗಾವಿಯಲ್ಲಿದ್ದ ಸೈನ್ಯವಲ್ಲದೇ ಸೋಲ್ಲಾಪುರದಲ್ಲಿರುವ ಎಲ್ಲ ಸೈನ್ಯಗಳನ್ನು ಅಲ್ಲಿ ಕಳಿಸುವಂತೆ ಸಾಧ್ಯ ಮಾಡಬೇಕೆಂದು ಸೂಚಿಸಿದೆ. ಇದಲ್ಲದೆ ಶೇತ್ ಸನದಿಗಳಿಗೆ, ಸರಕಾರಕ್ಕೆ ಅವರಿಗೆ ಕೊಟ್ಟ ವ್ಯವಸಾಯ ಭೂಮಿಯನ್ನು ಕಸಿದುಕೊಳ್ಳುವ, ಉದ್ದೇಶವಿಲ್ಲವೆಂದು ಅವರಿಗೆ ಬಹಿರಂಗವಾಗಿ ಭರವಸೆ ಕೊಡುವ ವ್ಯವಸ್ಥೆ ಮಾಡಬೇಕೆಂದೂ ಸೂಚಿಸಿದ್ದೇನೆ. ಇಂಥವರಿಂದಲೇ ಯುದ್ಧ ಸಾಮಗ್ರಿಗಳನ್ನು ಈ ಮುಖಂಡರು ಪಡೆದುಕೊಂಡಿದ್ದಾರೆ. ಬಂಡಾಯವನ್ನು ಪೂರ್ತಿ ಸದೆಬಡೆದ ಬಗ್ಗೆ ಕೂಡಲೇ ವರ್ತಮಾನ ಬರದಿದ್ದಲ್ಲಿ, ಇದ್ದ ಸೈನ್ಯವನ್ನು ಬಲಪಡಿಸಲು, ಬಹಳ ದೊಡ್ಡ ಸಂಖ್ಯೆಯ ಕಿತ್ತೂರಿನ ಸೈನ್ಯವನ್ನು ಕುಗ್ಗಿಸಬಲ್ಲ ಬಲಶಾಲಿಯಾದ ಸೈನ್ಯವನ್ನುಕೂಡಲೇ ಕಳಿಸಿಕೊಡುವ ಸಕಲಪ್ರಯತ್ನ ಮಾಡಬೇಕು. ಕಿತ್ತೂರು ಜಹಗೀರದಾರರ ನಾಡಿನ ಮಧ್ಯದಲ್ಲಿದೆ. ಇದಲ್ಲದೆ ಕೊಲ್ಲಾಪುರ ಮತ್ತು ವಾಡಿ ಸಂಸ್ಥಾನಗಳೂ ಅಲ್ಲಿಂದ ಬಹು ದೂರದಲ್ಲಿಲ್ಲ. ಇದಲ್ಲದೇ ನಮ್ಮ ಮತ್ತು ಪೋರ್ಚುಗೀಸರ ನಡುವಿನ ಗಡಿಯ ಗುಡ್ಡದ ಸಾಲಿಗೆ ಕಿತ್ತೂರು ಸಮೀಪವಿದೆ. ಕಿತ್ತೂರು ರಾಜ್ಯ ಇಂಥ ಪರಿಸರದಲ್ಲಿರುವದರಿಂದ, ಅಲ್ಲಿಯ ಅಡವಿಗಳಲ್ಲಿ ಚಿಕ್ಕ ಚಿಕ್ಕ ತಂಡಗಳ ಕೂಟ ಯುದ್ಧಗಳು ಬಹುಕಾಲ ನಡೆಯುವ ಸಂಭವ ಬಹಳವಿದೆ. ಇದನ್ನು ಕೂಡಲೇ ಸದೆಬಡೆಯದಿದ್ದರೆ ಅದು ಬೇರೆ ಕಡೆಗಳಲ್ಲಿ ಹರಡುವ ಸಂಭವವೂ ಬಹಳ ಇದೆ.

"ನಮಗೆ ಈ ಕೂಡಲೇ ಪೂರ್ತಿ ವರದಿಗಳು ಬರುವವು. ಈ ವರದಿಗಳು ನಮಗೆ ಹೆಚ್ಚು ಹಿತಕರವಾಗಿರದಿದ್ದರೆ, ನಮ್ಮ ದಕ್ಷಿಣ ಕೊಂಕಣದ ಎರಡು ಪಡೆಗಳನ್ನು ವೆಂಗುರ್ಲಾ ಅಥವಾ ಮಾಳವಣ ಬಳಿ ಒಂದು ಠಾಣೆಯಲ್ಲಿ ಸೇರಿಸಿ ಅವರು ವಾಡೀ ಹತ್ತರ ನಮ್ಮ ವಶದಲ್ಲಿರುವ ನಾಡಿನೊಳಗೆ ಬರದಂತೆ ಪ್ರತಿಬಂಧಿಸಬೇಕು. ಮತ್ತು ಹೀಗೆ ಮಾಡುವದರಿಂದ ದಕ್ಷಿಣಕ್ಕೂ ಹಾಗು ಪೂರ್ವಕ್ಕೂ ಇರುವ ಅಡಿವೆ ಪ್ರದೇಶಗಳ ಉಳಿದ ಸಣ್ಣ–ಪುಟ್ಟ ರಾಜರು ಹಾಗೂ ದೇಸಾಯಿಗಳಿಗೆ ಈ ಬಂಡುಖೋರರನ್ನು ಕೂಡಿಕೊಳ್ಳಲು ಹೆದರಿಕೆಯುಂಟಾಗುವುದು. ಅಡವಿಯಲ್ಲಿ ಸಂಭವಿಸಬಹುದಾದ ಅನೇಕ ಸಣ್ಣ–ಪುಟ್ಟ ಯುದ್ಧಗಳಲ್ಲಿ ಪ್ರತಿಯೊಂದು ಬಂಡುಖೋರರ ಗುಂಪನ್ನು ಸದೆಬಡೆಯಲು ಬೇಕಾಗುವ ಸಾಕಷ್ಟು ಸಂಖ್ಯೆಯ ಸೈನಿಕ ತುಕಡಿಗಳನ್ನು ನಿರ್ಮಿಸಲು ಸಾಕಾಗುವಂತೆ, ಕರ್ನಲ್ ಪಿಯರ್ಸ ಈಗಿನ ಸೈನ್ಯ ಸಂಖ್ಯೆಯನ್ನು ಹೆಚ್ಚಿಸಲು, ಮುಂಬಯಿಯಿಂದ ಕೂಡ ಹೆಚ್ಚಿನ ಸೈನ್ಯಗಳನ್ನು ಕಳಿಸಿಕೊಡುವುದು ವಿಹಿತ. ಈ ಸೈನ್ಯಗಳನ್ನು ಒಂದು ಯೋಚಿತ ಕ್ರಮದ ಪ್ರಕಾರ ಸತತವಾಗಿ ಸುತ್ತೂ ಕಡೆಗೆ

ಸಾಗಿಸುತ್ತಿರುವುದೂ ವಿಹಿತವೆಂದು ತೋರುತ್ತದೆ.

"ಇಷ್ಟರಲ್ಲಿ, ದೇಸಾಯಿಯು ವಾರಸುದಾರನಿಲ್ಲದೇ ತೀರಿಕೊಂಡಿದ್ದರಿಂದ ಕಂಪನಿಯವರು ದೇಸಗತಿಯನ್ನು ವಶಕ್ಕೆ ತೆಗೆದುಕೊಂಡ ವಿಚಾರದ ಒಂದು ಜಾಹೀರನಾಮೆ ಹಾಗೂ ಇತ್ತೀಚೆಗೆ ನಡೆದ ಬಂಡಾಯದಲ್ಲಿ ಪಾಲುಗೊಂಡ ಪ್ರಮುಖರನ್ನು ಬಿಟ್ಟು, ಒಂದು ನಿಶ್ಚಿತ ತಾರೀಖಿನೊಳಗೆ ಶರಣಾಗತರಾಗುವ ಎಲ್ಲರಿಗೂ ಕ್ಷಮಾದಾನ ಮಾಡುವದಾಗಿಯೂ ಮತ್ತು ಯಾರು ಶಸ್ತ್ರಾಸ್ತ್ರಗಳನ್ನು ನಮ್ಮ ವಶಕೊಪ್ಪಿಸದೇ, ಪ್ರತಿಭಟಿಸುವರೊ ಅವರನ್ನು ಬಂಡುಖೋರರೆಂದು ಪರಿಗಣಿಸಿ ತಕ್ಕ ಶಾಸ್ತಿ ಮಾಡಲಾಗುವದೆಂಬ ಇನ್ನೊಂದು ಜಾತೀರನಾಮೆಯನ್ನು ಹೊರಡಿಸುವದು ಯೋಗ್ಯವೆಂದು ತೋರುತ್ತದೆ.

"ಇಷ್ಟರಲ್ಲಿ ಸೈನಿಕ ಕಾಯಿದೆಯನ್ನು ಜಾರಿಗೆ ತರುವುದು ಸೂಕ್ತವೆಂದು ಕಾಣುವದಾದರೂ, ಈಗಲೇ ಈ ಅತಿರೇಕದ ಕ್ರಮ ಕೈಕೊಳ್ಳುವದು ಬೇಡ."

ಈ ಅವನ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ (ಸೂಚನಾಪತ್ರ) ಯಿಂದ ಕಂಡು ಬರುವದೇನೆಂದರೆ:

(1) ಎಲ್‌ಫಿನ್‌ಸ್ಟನ್‌ನಿಗೆ ಬಂಡಾಯ ಹರಡಬಹುದೆಂಬ ಮತ್ತು ಈ ಬಂಡಾಯದಲ್ಲಿ ಉಳಿದ ಜಹಗೀರದಾರರೂ ಸೇರಿಕೊಳ್ಳಬಹುದೆಂಬ ಮತ್ತು ಯುದ್ಧ ಬಹಳ ದಿವಸಗಳವರೆಗೆ ಮುಂದುವರಿಯಬಹುದೆಂಬ ಹೆದರಿಕೆಗಳು ಇದ್ದವೆಂದು ಕಂಡುಬರುತ್ತವೆ.

(2) ಶಿವಲಿಂಗರುದ್ರ ಸರ್ಜ ತೀರಿದ ನಂತರ ಕಿತ್ತೂರ ದೇಸಗತಿ ವಾರಸುದಾರರಿದ್ದರಿಂದ ಕೊನೆಗೊಂಡಿತೆಂದು ನಿರ್ಧರಿಸಿ ಅದನ್ನು ಬ್ರಿಟಿಷರು ವಶಪಡಿಸಿಕೊಂಡರೆಂಬುದು ಎಲ್ಲ ಜಹಾಗೀರದಾರರಿಗೆ ತಿಳಿಯಬೇಕೆಂಬುದು ಅವನ ಇಚ್ಛೆಯಾಗಿದ್ದಿತು.

(3) ಸೈನಿಕ ಕ್ರಮಗಳಿಂದ ಕಿತ್ತೂರಿನ ಬಂಡಾಯವನ್ನು ನಿರ್ದಯವಾಗಿ ಸದೆಬಡೆಯಬೇಕೆಂದು ಆತನು ನಿರ್ಧರಿಸಿದ್ದನು.

(4) ಆದರೆ, ಕಿತ್ತೂರಿನ ಜನತೆ ಮತ್ತು ಕಿತ್ತೂರಿನ ಯುದ್ಧದಲ್ಲಿ ಭಾಗವಹಿಸಿದ ಸೈನಿಕರು ಬಂಡುಖೋರರ ಬಗ್ಗೆ ತೀವ್ರ ಆಸಕ್ತಿ ತಾಳದಂತೆ ಬಹಳ ಚಾಣಕ್ಯತನದಿಂದ, ಮುಖ್ಯ ಮುಖಂಡರನ್ನಷ್ಟು ಬಿಟ್ಟು, ಉಳಿದೆಲ್ಲ ಬಂಡಾಯಕ್ಕೆ ಸಹಾಯಮಾಡಿದ ಜನರಿಗೆ, ಕ್ಷಮಾದಾನದ ಜಾಹೀರನಾಮೆಯನ್ನು ಹೊರಡಿಸಲು ನಿರ್ಧರಿಸಿದನು.

ತಾವು ಕಳೆದುಕೊಂಡ ಮರ್ಯಾದೆ ಹಾಗೂ ಗೌರವವನ್ನು ಕಿತ್ತೂರನ್ನು ಯುದ್ಧದಲ್ಲಿ ಹತ್ತಿಕ್ಕಿದರೆ ಮಾತ್ರ ಬ್ರಿಟಿಷರು ತಿರುಗಿ ಪಡೆಯಲು ಸಾಧ್ಯವೆಂದು ಆತ ಖಚಿತವಾಗಿ ನಿರ್ಧರಿಸಿಕೊಂಡಿದ್ದನು. ಥ್ಯಾಕರೇನ ಅವಸರದ ಕ್ರಮದಿಂದಲೇ ಈ ಬಂಡಾಯಕ್ಕೆ ಕಾರಣವಾಗಿತ್ತೆಂಬುದೂ ಆತನಿಗೆ ತಿಳಿದಿತ್ತು. ಅದು ಥ್ಯಾಕರೇನೆ ಒಂದು ಆವೇಗದ ಕ್ಷಣದ ತಪ್ಪು ನಿರ್ಣಯವೆಂಬುದು ಆತನಿಗೆ ಗೊತ್ತಾಗಿತ್ತು.

ಅದೇ ದಿವಸ, ಏನೇನು ಕ್ರಮ ತೆಗೆದುಕೊಳ್ಳಬೇಕೆಂಬ ಬಗ್ಗೆ ಗವ್ಹರ್ನರನ ಆಜ್ಞೆಗಳನ್ನು ತಿಳಿಯಪಡಿಸಿ, ಚೀಫ್ ಸೆಕ್ರೆಟರಿ ನ್ಯೂನ್‌ಹ್ಯಾಮ್‌ನು ಚಾಪ್ಲಿನ್‌ನಿಗೆ ಈ ಕೆಳಗಿನ ಪತ್ರ ಬರೆದನು:

"ಕಿತ್ತೂರ ಬಂಡಾಯವನ್ನು ಹತ್ತಿಕ್ಕಲು ಬೆಳಗಾವಿ ಮತ್ತು ಸೊಲ್ಲಾಪುರದಲ್ಲಿಯ ಸೈನ್ಯಪಡೆಗಳನ್ನು ಲಭ್ಯವಾಗುವಂತೆ ಮಾಡಬೇಕು; ವಾರಸುದಾರರಿಲ್ಲದ್ದರಿಂದ ದೇಸಾಯಿಯ ಮನೆತನದ ವಾರಸುತನ ಕೊನೆಗೊಂಡು, ಕಂಪನಿ ಸರಕಾರ ರಾಜ್ಯವನ್ನು ವಶಪಡಿಸಿಕೊಂಡ ಬಗ್ಗಿ ಜಾಹೀರನಾಮೆ ಹೊರಡಿಸಬೇಕು. ದೇಸಾಯಿಯ ಮನೆತನದವರು ಹಾಗೂ ಬಂಡಾಯದ ಮುಖಂಡರನ್ನು ಹೊರತುಪಡಿಸಿ, ಉಳಿದ ಎಲ್ಲರಿಗೂ ಕ್ಷಮಾದಾನ ಮಾಡಿದ ಬಗ್ಗೆ ಮತ್ತು ಯಾರು ಶಸ್ತ್ರಾಸ್ತ್ರಗಳನ್ನು ವಶಕ್ಕೊಪ್ಪಿಸಿ ಶರಣಾಗತರಾಗದೇ ಪ್ರತಿಭಟಿಸುವರೋ ಅವರಿಗೆಲ್ಲ ಕಠಿಣ ಶಿಕ್ಷೆ ವಿಧಿಸುವ ಬಗ್ಗೆ ಜಾಹೀರನಾಮೆ ಹೊರಡಿಸಬೇಕು.

ಸರ್,

ಕಿತ್ತೂರಿನ ಬಂಡಾಯದ ಬಗ್ಗೆ ತಮ್ಮ ವರದಿ ಪತ್ರವನ್ನು, ಮಾನ್ಯ ಗವ್ಹರ್ನರ್ – ಇನ್ – ಕೌನ್ಸಿಲ್‌ರ ಅವಗಾಹನೆಗಾಗಿ ಅವರ ಮುಂದೆ ಇಟ್ಟಿದ್ದೇನೆ.

"ತಮ್ಮ ಕಡೆಯಿಂದ ಮುಂದಿನ ವರದಿಗಾಗಿ ಮಾನ್ಯ ಗವ್ಹರ್ನರರು ಆತುರದಿಂದ ಕಾಯುತ್ತಿರುತ್ತಾರೆ. ಅದರಲ್ಲಿಯೂ ಥ್ಯಾಕರೇನ ಮರಣದ ಬಗ್ಗೆ ತಮ್ಮ ವರದಿ ಉತ್ಪ್ರೇಕ್ಷಿತವಾಗಿರಬಹುದೆಂದು ಅಂದುಕೊಂಡಿದ್ದಾರೆ. ಥ್ಯಾಕರೇನ ಸಾವು ಒಂದು ದೊಡ್ಡ ಸಾರ್ವಜನಿಕ ನಷ್ಟವಾಗಿದೆಯೆಂದು ಅವರು ಪರಿಗಣಿಸುತ್ತಾರೆ.

"ಈ ಘಟನೆಗಳ ಬಗ್ಗೆ ಖಾಸಗಿ ಸುದ್ದಿಗಳು ಗವ್ಹರ್ನರರಿಗೆ ಮುಟ್ಟಿದ ಕೂಡಲೇ, ಹಿಜ್ ಎಕ್ಸಲನ್ಸಿ ಕಮಾಂಡರ–ಇನ್–ಚೀಫ್ ಅವರಿಗೆ, ಕಿತ್ತೂರಿನ ಬಂಡಾಯವನ್ನು ಸದೆಬಡೆಯಲು ಬೆಳಗಾವಿಯ ಸೈನ್ಯವನ್ನಲ್ಲದೆ, ಸೊಲ್ಲಾಪುರದ ಎಲ್ಲ ಸೈನ್ಯವನ್ನೂ ಕಳಿಸಿಕೊಡಲು ಸೂಚಿಸಲಾಯಿತು. ಇದಲ್ಲದೆ ಸರಕಾರ ಅವರ (ಶೇತ ಸನದಿಗಳ) ಇನಾಮು ಹೊಲಗಳನ್ನು ಕಸಿದುಕೊಳ್ಳಲು ಇಚ್ಛಿಸಿಲ್ಲವೆಂದು ಜಾಹೀರನಾಮೆ ಹೊರಡಿಸಲು ನಿಮಗೆ ತಿಳಿಸಲಾಯಿತು. ಇಂಥ ಜನರಿಂದಲೇ ಶಸ್ತ್ರಾಸ್ತ್ರಗಳನ್ನು ಮುಖಂಡರು ವಶಪಡಿಸಿಕೊಂಡಿರುವುದಾಗಿ ತಿಳಿಯುತ್ತದೆ.

"ಬಂಡಾಯವನ್ನು ಪೂರ್ಣ ಹತ್ತಿಕ್ಕಿದ ಬಗ್ಗೆ ಕೂಡಲೇ ವರದಿಗಳು ಗವ್ಹರ್ನರ್ –ಇನ್–ಕೌನ್ಸಿಲ್ ಅವರಿಗೆ ಬರದಿದ್ದರೆ, ನಾಡಿನಲ್ಲಿ ಶಾಂತಿಯನ್ನು ದೊರಕಿಸುವದಕ್ಕಾಗಿ, ಬಲಶಾಲಿಯಾದ ಸೈನ್ಯವನ್ನು ಕಳಿಸಲಿಕ್ಕೆ ಎಲ್ಲ ಪ್ರಯತ್ನಗಳನ್ನು ಮಾಡಲಾಗುವುದು.

"ಇಷ್ಟರಲ್ಲಿ ವಾರಸುದಾರರಿಲ್ಲದೇ ದೇಸಾಯಿ ಮನೆತನ ಕೊನೆಗೊಂಡದ್ದರಿಂದ ರಾಜ್ಯವನ್ನು ಮಾನ್ಯ ಕಂಪನಿ ಸರಕಾರ ವಶಪಡಿಸಿಕೊಂಡಿದೆಯೆಂಬ ವಿಷಯದ ಬಗ್ಗೆ ಒಂದು ಜಾಹೀರನಾಮೆ ಹೊರಡಿಸಬೇಕು. ಬಂಡಾಯದ ಮುಖಂಡರನ್ನು ಹೊರತುಪಡಿಸಿ, ಒಂದು ನಿಶ್ಚಿತ ದಿನಾಂಕದೊಳಗೆ ಬರುವ ಎಲ್ಲ ಶರಣಾಗತರಿಗೂ ಕ್ಷಮಾದಾನ ನೀಡುವೆವೆಂಬ ಇನ್ನೊಂದು ಜಾಹೀರನಾಮೆ ಮತ್ತು ಶಸ್ತ್ರಗಳನ್ನು ನಮ್ಮ ವಶಕ್ಕೆ ಕೊಡಲು ಪ್ರತಿಭಟಿಸುವ ಎಲ್ಲ ಬಂಡುಖೋರರಿಗೆ ಶಿಕ್ಷೆ ವಿಧಿಸಲಾಗುವದೆಂಬ ಇನ್ನೊಂದು ಜಾಹೀರನಾಮೆಯನ್ನು ಹೊರಡಿಸಬೇಕು. ಈ ಸಂಭರ್ಭದಲ್ಲಿ ಸೈನಿಕ ಕಾಯಿದೆ ಜಾರಿ ಮಾಡುವುದು ಸೂಕ್ತವೆನಿಸ ಬಹುದು. ಆದರೆ ಈಗ ಈ ಕ್ರಮವನ್ನು ತೆಗೆದುಕೊಳ್ಳುವ ಅವಶ್ಯಕತೆಯಿಲ್ಲ."

ಇಷ್ಟರಲ್ಲಿ, 29 ನೆಯ ತಾರೀಖಿನಂದು ಕಿತ್ತೂರ ವಕೀಲನ ಸಂಗಡ ಒಂದು ಸುತ್ತು ಮಾತುಕತೆ ನಡೆಯಿಸಿದ ಈಡನ್, ಈ ಘಟನೆಗಳ ಬಗ್ಗೆ ಮತ್ತು ಈ ಪರಿಸ್ಥಿತಿಯ ಬಗ್ಗೆ ತನ್ನ ಅಭಿಪ್ರಾಯವನ್ನು ಬರೆದು ಪತ್ರದಲ್ಲಿ ಈ ರೀತಿ ವ್ಯಕ್ತಪಡಿಸಿದನು:

"ಕಿತ್ತೂರಿನಲ್ಲಿ ನಡೆದ ದುಃಖದಾಯಕ ಘಟನೆಗಳು, ಪೂರ್ವ ಯೋಜಿತವಾಗಿರಲಿಲ್ಲ ಹಾಗೂ ಥ್ಯಾಕರೆ ತನ್ನ ಕಡೆಗಿದ್ದ ಸ್ವಲ್ಪ ಸೈನ್ಯದಿಂದ ಕಿತ್ತೂರಿನ ಮೇಲೆ ದಾಳಿಮಾಡಲು ಆಜ್ಞಾಪಿಸಿರದಿದ್ದರೆ ಇಂಥದೇನೂ ಆಗುತ್ತಿರಲಿಲ್ಲವೆಂದೇ ನನ್ನ ಭಾವನೆ. ಕಿತ್ತೂರಿನ ಪರಿಸ್ಥಿತಿ ನನ್ನ ನಿರ್ಣಯಕ್ಕೆ ಗೋಚರಿಸಿದಂತೆ, ಮುಖ್ಯ ಸೈನ್ಯಾಧಿಕಾರಿ ಗುರುಸಿದ್ದಪ್ಪ ಹಾಗೂ ಇತರರು, ತಾವು ಅತ್ಯಂತ ದುಡುಕಿನ ಅತಿರೇಕದ ಕೃತ್ಯವನ್ನು ಎಸಗಿದರೆಂಬ ಅರಿವು ಅವರಿಗಾಗಿದೆ ಮತ್ತು ಸರಕಾರದಿಂದ ಅವರಿಗೆ ಜೀವಕ್ಕೆ ಏನೂ ಅಪಾಯವಿಲ್ಲವೆಂಬುದರ ಬಗೆಗೆ ಭರವಸೆಯನ್ನಿತ್ತ ದ್ದಾದರೆ, ಅವರು ನಾವು ಹಾಕುವ ಯಾವುದೇ ಕರಾರಿಗೂ ಒಪ್ಪಿಕೊಳ್ಳಬಹುದೆಂದು ನನಗೆ ಅನಿಸುತ್ತದೆ. ತಾವು ಇತ್ತೀಚೆಗೆ ಮಾಡಿದ ಹಿಂಸಾಚಾರ ಹಾಗೂ ಕೈಕೊಂಡ ಕ್ರಮಗಳು ಕ್ಷಮಿಸಲಾರದಷ್ಟು ಉಗ್ರ ಸ್ವರೂಪದವಾಗಿವೆಯೆಂದು ಮತ್ತು ಸರಕಾರ ಎಂಥ ಉಗ್ರಕ್ರಮ ಕೈಕೊಳ್ಳಲಿದ್ದಾರೆಂಬುದನ್ನೂ, ತಮ್ಮ ಸರ್ವನಾಶವನ್ನು ತಪ್ಪಿಸಿಕೊಳ್ಳಲ ಸ್ಟೀವನ್ಸನ್ ಮತ್ತು ಇಲಿಯಟ್‌ರನ್ನು ಬಂಧನದಲ್ಲಿಟ್ಟುಕೊಳ್ಳುವದೊಂದೇ ಮಾರ್ಗವೆಂಬುದನ್ನು ಅವರು ಮನಗಂಡಿದ್ದಾರೆಂದು ನನಗೆನಿಸುತ್ತದೆ. ಈ ಇಬ್ಬರು ಗೃಹಸ್ಥರು ಜೀವಂತ ಮರಳಬೇಕಾದರೆ ನೀವು ಇಲ್ಲಿ ಸ್ವತಃ ಬಂದರೆ ಮಾತ್ರ ಸಾಧ್ಯವೆಂದು ತೋರುತ್ತದೆ. ಅದರಲ್ಲಿಯೂ ನೀವು ಅವರಿಬ್ಬರನ್ನು ಬಿಡುಗಡೆ ಮಾಡದ ಹೊರತು ಕಿತ್ತೂರ ರಾಜಮನೆತನದವರೊಂದಿಗೆ ಯಾವ ಮಾತನ್ನೂ ಆಡಲು ಸಿದ್ಧರಿಲ್ಲವೆಂದು ಹಟ ಹಿಡಿದರೆ ಮಾತ್ರ ಕಿತ್ತೂರಿನ ಮುಖ್ಯಸ್ಥರು ಇವರನ್ನು ಬಿಟ್ಟುಕೊಡಲು ಒಪ್ಪಬಹುದು. ಇದೂ ಕೂಡಾ ಆಗಿಯೇ ತೀರುವುದೆಂದು ಹೇಳಲಿಕ್ಕೆ ಬಾರದಿದ್ದರೂ, ನಿಮಗಿಂತ ಕಡಿಮೆ ತರಗತಿಯ ಯಾರಾದರೂ ಈ ಈರ್ವರನ್ನು ಬಿಡಲು ಅವರ ಮನವೊಲಿಸುವ ಬಗ್ಗೆ ಯತ್ನಿಸುವುದು ನಿರರ್ಥಕ.

"ಶ್ರೀನಿವಾಸರಾಯನ ವರದಿಯನ್ನು ಇದರ ಸಂಗಡ ಕಳಿಸುತ್ತಿದ್ದೇನೆ.

"ಇಲ್ಲಿಯ ಅಮಲ್ದಾರನಿಂದ ಕರ್ನಲ್ ಪಿಯರ್ಸನಿಗೆ ಬಂದ ವರದಿಯ ಪತ್ರವನ್ನು ಪಿಯರ್ಸ್ ನಿನ್ನೆಯ ಅವನ ಪತ್ರದೊಂದಿಗೆ ನನ್ನಡೆಗೆ ಕಳಿಸಿದ್ದಾನೆ. ಆ ಪತ್ರ ಹಾಗೂ ವರದಿಗಳ ನಕಲುಗಳನ್ನು ಇದರ ಸಂಗಡ ಇಟ್ಟಿದ್ದೇನೆ. ಈ ವರದಿಯ ಆಧಾರವೇನೆಂಬುದರ ಬಗ್ಗೆ ಕೂಲಂಕಷವಾಗಿ ವಿಚಾರಿಸಿ ನೋಡಲಾಗಿ, ಆತ ಕೇವಲ ಬಝಾರ ಬಾತಮಿಯ ಮೇಲೆ ಅವಲಂಬಿಸಿದಂತೆ ತೋರುತ್ತದೆ. ಒಂದು ಕ್ಷಣದ ವಿವೇಚನೆಗೆ ಕೂಡ ಆ ವರದಿಗಳು ಅನರ್ಹವಾಗಿವೆಯೆಂದು ನಿಮಗೆ ತಿಳಿಯಪಡಿಸಲಿಚ್ಛಿಸುತ್ತೇನೆ. ನಾನು ನನ್ನ ಇಡೀ ಸರಂಜಾಮದೊಂದಿಗೆ ನಿನ್ನೆ ಸಂಜೆ ಇಲ್ಲಿಗೆ ತಲುಪಿದೆ. ನಾನೂ ಹಾಗೂ ನನ್ನ ದಳದವರೂ ಇಡೀ ದಿವಸ ಸತತವಾಗಿ ಕವಾಯಿತ್ ಮಾಡುತ್ತ ಬಂದದ್ದರಿಂದ ಪ್ರಯಾಣದ ಆಯಾಸದಿಂದ ಬೇರೆ ಏನೂ ಕೆಲಸ ಮಾಡಲಿಕ್ಕಾಗಿಲ್ಲ. ಈ ಕಾರಣದಿಂದ, ಜಹಾಗೀರದಾರರು ಮತ್ತು

ಪಟವರ್ಧನರ ನಡುವೆ ಏನೇನು ನಡೆದಿದೆಯೆಂಬುದರ ಬಗ್ಗೆ ಮಾಹಿತಿ ದೊರೆಕಿಸುವುದು ಸಾಧ್ಯವಾಗಿಲ್ಲ. ಆದರೂ ಈಗ ಇಡೀ ಪ್ರಾಂತದಲ್ಲಿ ಪೂರ್ಣ ಶಾಂತಿ ನೆಲೆಗೊಂಡಂತೆ ಕಾಣುತ್ತಿದೆಯಾದರೂ ಇಂದು ಸಂಜೆಯಾಗುವುದರೊಳಗಾಗಿ ಗುಪ್ತಚಾರರ ವರದಿಗಳನ್ನು ದೊರಕಿಸಿ ಖಚಿತವಾದ ಮಾಹಿತಿಯನ್ನು ನಿಮಗೆ ಒದಗಿಸಲು ಸಾಧ್ಯವಾಗುವದೆಂದು ನಂಬಿದ್ದೇನೆ.

"ಸ್ಟೀವನ್ಸನ್ ಮತ್ತು ಇಲಿಯಟ್‌ರ ಜೀವ ರಕ್ಷಣೆಯನ್ನು ಮುಖ್ಯವಾಗಿ ದೃಷ್ಟಿಯಲ್ಲಿಟ್ಟು ಕೊಂಡು ಮುಂಬಯಿಯಿಂದ ಖಚಿತವಾದ ಆದೇಶಗಳು ಬರುವವರೆಗೆ ಕಿತ್ತೂರಿನ ಕೋಟೆಯ ಮೇಲೆ ದಾಳಿಮಾಡುವ ಕ್ರಮವನ್ನು ಸದ್ಯಕ್ಕೆ ಮುಂದೂಡಬೇಕೆಂಬ ಕರ್ನಲ್ ಪಿಯರ್ಸನ್‌ನ ನಿರ್ಣಯ ಯೋಗ್ಯವಾದದ್ದೆಂದು ಮನಗಂಡು, ನಾನು ಕಿತ್ತೂರಿನ ಮುಖ್ಯಸ್ಥರಿಗೆ ಮೇಲಿನಿಂದ ಆದೇಶಗಳು ಬರುವವರೆಗೆ ಕಿತ್ತೂರಿನ ಮೇಲೆ ಯಾವ ಸೈನಿಕಕ್ರಮಗಳನ್ನು ಕೈಕೊಳ್ಳುವದಿಲ್ಲ ಎಂಬ ಆಶ್ವಾಸನವನ್ನು ಕೊಟ್ಟೆ. ನಾನು ಅವರಿಗೆ ಬರೆದ ಪತ್ರದ ನಕಲನ್ನು ಈ ಪತ್ರದೊಂದಿಗೆ ಇಟ್ಟು ಕಳಿಸಿದ್ದೇನೆ. ಆದರೂ ಕೂಡ, ನನ್ನೊಂದಿಗೇ ಈಗ ಇರುತ್ತಿರುವ ಕಿತ್ತೂರ ವಕೀಲನ ಮನಸ್ಸಿನ ಮೇಲೆ ಈ ಈರ್ವರು ನಮ್ಮ ದೇಶಬಾಂಧವರನ್ನು ಬಂಧನದಲ್ಲಿಟ್ಟು, ನಮ್ಮ ಸರಕಾರದ ದೋಷವನ್ನು ದಮನಗೊಳಿಸಬಹುದೆಂದು ಅವರು ವಿಚಾರಿಸಿದ್ದರೆ ಅದು ಕೇವಲ ತಪ್ಪು ಕಲ್ಪನೆ. ಪೂರ್ತಿ ಶರಣಾಗತರಾಗಿ ಸ್ಟೀವನ್ಸನ್ ಮತ್ತು ಇಲಿಯಟ್‌ರನ್ನು ಕೂಡಲೇ ಬಿಡುಗಡೆ ಮಾಡಿ ನಮಗೆ ಒಪ್ಪಿಸುವದರಿಂದ ಮಾತ್ರ ನಮ್ಮ ಸಹಾನುಭೂತಿಯನ್ನು ಪಡೆಯಬಹುದು. ಅದರಿಂದ ಮಾತ್ರ ನಮ್ಮ ಕ್ರಮಗಳ ಉಗ್ರತೆಯನ್ನು ಕಡಿಮೆ ಯಾಗಬಹುದೆಂಬ ಬಗ್ಗೆ ಅವನ ಮನಸ್ಸಿನ ಮೇಲೆ ಬಿಂಬಿಸಲು ಯತ್ನಿಸುತ್ತಿದ್ದೇನೆ.

"ಸಾವಂತವಾಡಿಯಿಂದ 200 ಜನರ ಅರಬ್ಬಿ ಸೈನ್ಯ ಕಿತ್ತೂರಿನೆಡೆಗೆ ಹೊರಟಿರುವರೆಂದು ಇದೀಗ ನನಗೆ ಸುದ್ದಿ ಬಂದಿದೆ. ನಮ್ಮ ಪಶ್ಚಿಮದ ಗಡಿಯಲ್ಲಿ ಕಿಲ್ಲೇದಾರನೊಬ್ಬ, ತನ್ನ ಹಳ್ಳಿಯಲ್ಲಿ ಈ ಸುದ್ದಿಯಾಗಿದೆಯೆಂದು ಇಲ್ಲಿಯ ಅಮಲ್ದಾರನಿಗೆ ತಿಳಿಸಿದನೆಂದು ಅಮಲ್ದಾರ ಹೇಳುತ್ತಿದ್ದಾನೆ.

"ನಾನು ನಮ್ಮ ವಕೀಲರ ಮುಖಾಂತರ ಎಲ್ಲ ಜಹಾಗೀರದಾರರಿಗೆ ಕಳಿಸಿದ ಪತ್ರಕ್ಕೆ ಉತ್ತರ ಇನ್ನೂ ಯಾರಿಂದಲೂ ಬಂದಿಲ್ಲ. ಅವರು ನೇರವಾಗಿ ಧಾರವಾಡಕ್ಕೆ ಬರೆದಿದ್ದರೂ ಬರೆದಿರಬಹುದು. ಅಲ್ಲಿಂದ ನನಗೆ ಅವು ಇಷ್ಟರಲ್ಲಿ ಬರಬಹುದು."

ಎಲ್‌ಫಿನ್‌ಸ್ಟನ್‌ನಿಂದ ಬಂದ ಆಜ್ಞೆಗನುಸಾರವಾಗಿ ಹಾಗೂ ಈಡನ್‌ನಿಂದ ಬಂದ ವರದಿಗಳಿಂದ ಭೀತಿಗೊಂಡ ಕಮಿಶನರನು ಎಲ್ಲೆಡೆಯಿಂದ ಸೈನ್ಯ ತರಿಸಿ, ದೊಡ್ಡ ಸೈನ್ಯ ಶೇಖರಣೆಯ ಕಾರ್ಯದಲ್ಲಿ ಉದ್ಯುಕ್ತನಾದನು.

ಮೈಸೂರಿನಲ್ಲಿ ಬ್ರಿಟಿಷ್ ರೆಸಿಡೆಂಟನಾಗಿದ್ದ ಎ.ಎಚ್.ಎಸ್.ಕೋಲ್ ಆಗ ಕೆಲಸದ ನಿಮಿತ್ತ ಪುಣೆಗೆ ಹೋಗಿದ್ದನು. ಆತನನ್ನು ಚಾಪ್ಲಿನ್ ಕೂಡಲೇ ಬರಮಾಡಿಕೊಂಡು, ಆತನಿಗೆ ಮೈಸೂರಿನಲ್ಲಿ ಲಭ್ಯವಿರುವ ಎಲ್ಲ ಕುದುರೆ ಸವಾರರ ಸೈನ್ಯ ಹಾಗೂ ಕಾಲಾಳುಗಳ

ಸೈನ್ಯವೆಲ್ಲವನ್ನೂ ಕೂಡಲೇ ಕಳಿಸಿಕೊಡಲು ಆಜ್ಞಾಪಿಸಿದನು. 1824ರ ಅಕ್ಟೋಬರ 30ನೆಯ ತಾರೀಖಿನಂದು ಮೈಸೂರಿನಲ್ಲಿದ್ದ ಸೈನಿಕ ಕಮಾಂಡರರಿಗೆ ಕೋಲ್ ಈ ಕೆಳಗಿನ ಸಂದೇಶ ಕಳುಹಿಸಿದನು:

"ಥ್ಯಾಕರೇನ ಸೈನ್ಯದ ಬಹುಭಾಗ ಕೋಟೆಯ ಒಳಭಾಗದಲ್ಲಿ ಸಿಕ್ಕು ಸುತ್ತುವರಿಯಲ್ಪಟ್ಟಿದ್ದರಿಂದ, ಅವರನ್ನು ರಕ್ಷಿಸಿ ಹೊರಗೆ ತರಲು, ಅನಿವಾರ್ಯವಾಗಿ ಹೋರಾಟಕ್ಕೆ ಆಜ್ಞಾಪಿಸಲೇಬೇಕಾಯಿತು – ಅಲ್ಲಿ ಸೈನ್ಯ ಪೂರ್ತಿ ಸೋಲನ್ನು ಅನುಭವಿಸಿತು – ಅದರಲ್ಲಿ ಯಾವ ಸಂದೇಹವೂ ಇಲ್ಲ. ಇದರ ದಾರುಣ ಪರಿಣಾಮದ ಬಗ್ಗೆ ಇದರ ಸಂಗಡ ಕಳಿಸಿದ ವರದಿಯಿಂದ ನಿಮಗೆ ಖಚಿತವಾಗುವುದು. ದಕ್ಷಿಣದ ಜಹಾಗೀರದಾರರ ದೇಶಗಳ ಮಧ್ಯದಲ್ಲಿ ಕಿತ್ತೂರು ಇದೆ. ಅಲ್ಲದೆ ಇದು ಕೊಲ್ಲಾಪುರಕ್ಕೂ ಸಮೀಪದಲ್ಲಿದೆ. ಕೊಲ್ಲಾಪುರದ ರಾಜ ನಮ್ಮೊಡನೆ ಅಸಮಾಧಾನ ಹೊಂದಿದವನಾಗಿದ್ದಾನೆ. ಹಿಂಭಾಗದಲ್ಲಿ ಘಟ್ಟಗಳ ನಡುವಿನ ಭಾಗ ದಂಗೆಖೋರರ ದಟ್ಟವಾದ ಕಾಡಾಗಿದೆ. ಮೇಲಾಗಿ ಕಿತ್ತೂರಿಗೆ ಹತ್ತಿಕೊಂಡೇ ಸೊಂಡಾ ರಾಜ್ಯದವರೆಗೆ ನಿಬಿಡವಾದ ಅಡವಿಯಿಂದ ಆಚ್ಛಾದಿತವಾದ ಗುಡ್ಡಗಳ ಸಾಲೂ ಇದೆ. ಅದೂ ಕೂಡ ಪೋರ್ಚುಗೀಸರ ವಶದಲ್ಲಿರುವ ಭಾಗಕ್ಕೆ ಹತ್ತಿಕೊಂಡಿದೆ. ದಕ್ಷಿಣ ಮಹಾರಾಷ್ಟ್ರ ದೇಶದಲ್ಲಿ ನಮ್ಮ ಸೈನ್ಯಪಡೆಗಳ ಸಂಖ್ಯೆ ಬಹಳ ಕಡಿಮೆಯಿದೆ. ಈ ದಂಗೆಯನ್ನು ಕೂಡಲೇ ಹತ್ತಿಕ್ಕದಿದ್ದರೆ ಅದು ನಿಶ್ಚಿತವಾಗಿಯೂ ಬೇರೆ ಕಡೆಗೆ ಹರಡುತ್ತದೆ. ರಾಜರ ಕುದುರೆ ಸವಾರರ ಸೈನ್ಯದಲ್ಲಿ ಎಷ್ಟು ಸಾಧ್ಯವೋ ಅಷ್ಟು ಕುದುರೆ ಸವಾರರ ಸೈನ್ಯಗಳನ್ನು ರಾಣೇಬೆನ್ನೂರಿನ ಕಡೆಗೆ ಕಳಿಸಿಕೊಡಲು ಆಜ್ಞಾಪಿಸಬೇಕು. ರಾಜರ ಉಳಿದ ಸೈನ್ಯದ ವಿಭಾಗಗಳನ್ನು ಹರಿಹರ ಗಡಿಗೆ ಕೂಡಲೆ ಕಳಿಸಿಕೊಡುವ ವ್ಯವಸ್ಥೆ ಮಾಡಬೇಕು. ಈ ಗಡಿಭಾಗದಲ್ಲಿ ನಮ್ಮ ಸೈನ್ಯ ಜೋರಾಗಿ ಕಾಣಿಸಿಕೊಂಡರೆ, ದಂಗೆ ಉಳಿದಕಡೆಗೆ ಹರಡಿ ದೇಶದಾದ್ಯಂತ ದಂಗೆ ಏಳುವುದನ್ನು ತಡೆಗಟ್ಟಲು ನೆರವಾಗಬಹುದು. ನಾವು ಇಲ್ಲಿಂದ ಸೈನ್ಯಗಳನ್ನು ಕಳಿಸುತ್ತಲೇ ಇದ್ದೇವೆ. ಆದರೆ ಅದರ ಸಂಖ್ಯೆ ಏನೇನೂ ಸಾಲದು. ಎಲ್ಲಕ್ಕಿಂತ ಮುಖ್ಯವಾಗಿ, ಅಂತ್ಯದ ತೀವ್ರಕ್ರಮ ಅವಶ್ಯಕವಾಗಿದೆ."

ಈ ಸಿದ್ಧತೆಗಳು ಒಂದೆಡೆ ನಡೆದಿದ್ದರೆ, ಇನ್ನೊಂದೆಡೆ ಈಡನ್‌ನು ಕಿತ್ತೂರ ವಕೀಲನೊಂದಿಗೆ ಸಂಧಾನದ ಮಾತುಕತೆ ನಡೆಸಿದ್ದನು. ಆತನು ಇಬ್ಬರು ಬಂದಿಗಳಾದ ಸ್ಟೀವನ್ಸನ್ ಮತ್ತು ಇಲಿಯಟ್‌ರನ್ನು ಕರಾರುರಹಿತವಾಗಿ ಕೂಡಲೇ ಬಿಡಬೇಕೆಂದು ಹಟಹಿಡಿದಿದ್ದನು. ಕಿತ್ತೂರಿನ ಸಂಸ್ಥಾನವನ್ನು ಮರಳಿಕೊಡುವ ಬಗ್ಗೆ ನಿಶ್ಚಿತ ಆಶ್ವಾಸನ ದೊರೆಯುವವರೆಗೆ ಅವರನ್ನು ಬಿಟ್ಟುಕೊಡಲು ಕಿತ್ತೂರಿನ ಪ್ರಭುಗಳು ಸಿದ್ಧರಿರಲಿಲ್ಲ. ಕರಾರುರಹಿತವಾಗಿ ಈ ಬಂದಿಗಳನ್ನು ಬಿಟ್ಟುಕೊಟ್ಟರೆ ಅದರಿಂದ ಬ್ರಿಟಿಷರ ಸಹಾನುಭೂತಿಯನ್ನು ಸಂಪಾದಿಸಬಹುದೆಂದು ಕಮಿಶನರ ಶ್ರೀನಿವಾಸರಾಯನ ಮನವೊಪ್ಪಿಸಲು ಯತ್ನಿಸುತ್ತಲಿದ್ದನು. ಚಾಪ್ಲಿನ್ ತಳೆದ ಈ ಹಟಮಾರಿ ನಿಲುಮೆಯ ಬಗ್ಗೆ ಜುಗುಪ್ಸೆಗೊಂಡರೂ, ನಿರುಪಾಯನಾಗಿ, ಕಿತ್ತೂರ ವಕೀಲ, ಇಂಥ ಒಪ್ಪಂದಕ್ಕೆ ವಿರೋಧವಾಗಿದ್ದನು. ಮತ್ತು ಅಷ್ಟೇ ಹಟಮಾರಿ ನಿಲುಮೆಯನ್ನು ತಳೆದ

ಸರದಾರ ಗುರುಸಿದ್ದಪ್ಪ ಹಾಗೂ ಅವರಾದಿ ವೀರಪ್ಪ ಅವರೊಂದಿಗೆ ಮತ್ತೊಮ್ಮೆ ಮಾತನಾಡಿ ನೋಡುವದಾಗಿ ಚಾಪ್ಲಿನ್‌ನಿಗೆ ಆಶ್ವಾಸನವನ್ನಿತ್ತನು. ಇದರ ಬಗ್ಗೆ ಚಾಪ್ಲಿನ್‌ನಿಗೆ 30 ನೆಯ ಅಕ್ಟೋಬರ 1824 ರಂದು ಈತನು ಈ ಕೆಳಗಿನಂತೆ ಪತ್ರ ಬರೆದನು:

"ನಾನು ಸರಕಾರದಿಂದ ಆಜ್ಞೆಗಳು ಬರುವವರೆಗೆ ಮಾತ್ರ ಅವರ ವಿರುದ್ಧ ಉಗ್ರಕ್ರಮ ಕೈಕೊಳ್ಳುವುದನ್ನು ತಡೆಹಿಡಿಯುವ ಇದರ ಅರ್ಥ ಅವರ ವಿರುದ್ಧ ಅತ್ಯುಗ್ರವಾದ ಕ್ರಮಗಳನ್ನು ಕೈಕೊಳ್ಳಲು ಸರಕಾರ ಹೆದರುತ್ತಿದೆಯೆಂದು ಭಾವಿಸಬಾರದು. ಒಂದು ವೇಳೆ ಸರಕಾರ ಇಂಥ ನಿರ್ಧಾರ ಕೈಕೊಂಡರೆ ಸ್ವಲ್ಪವೂ ಕೂಡ ಕ್ಷಮೆಯನ್ನು ಅವರು ನಿರೀಕ್ಷಿಸಬಾರದೆಂದು ಅವರಿಗೆ ಮನವರಿಕೆ ಮಾಡಿಕೊಟ್ಟಿದ್ದೇನೆ. ಇಂದಿನ ಪರಿಸ್ಥಿತಿಯಲ್ಲಿ ಸರಕಾರದ ಸಹಾನುಭೂತಿ ದೊರಕಿಸಿ ಅವರ ದೃಢ ನಿರ್ಧಾರವನ್ನು ಸಡಿಲಿಸಲು ಸಹಾಯವಾಗಬಹುದಾದ ಒಂದೇ ಒಂದು ಉಪಾಯವೆಂದರೆ ಸ್ಟೀವನ್ಸನ್ ಮತ್ತು ಇಲಿಯಟ್‌ರನ್ನು ತಕ್ಷಣ ಬಿಡುಗಡೆ ಮಾಡುವುದು. ಈ ವಿಷಯವನ್ನು ಅವರಿಗೆ ಮನದಟ್ಟು ಮಾಡಿಕೊಟ್ಟಿದ್ದೇನೆ. ಇದನ್ನು ನಾನು ಬಹಳ ಜೋರಿನಿಂದ ಹೇಳಿದ ನಂತರ, ವಕೀಲ ಶ್ರೀನಿವಾಸರಾವ ಇವರೀರ್ವರನ್ನು ನಿಮಗೆ ಸ್ವಾಧೀನಪಡಿಸಲು ಗುರುಸಿದ್ದಪ್ಪ ಮತ್ತು ಅವರಾದಿ ವೀರಪ್ಪ ಇವರನ್ನು ಒಪ್ಪಿಸಲು ಸಾಧ್ಯವಾಗಬಹುದೆಂದು ಹೇಳುತ್ತಿದ್ದಾನೆ. ಆದರೆ ನಿಮಗಿಂತ ಕಡಿಮೆ ದರ್ಜೆಯ ಯಾವ ಅಧಿಕಾರಿಗೂ ಅವರನ್ನು ಒಪ್ಪಿಸುವುದು ಅಸಾಧ್ಯವೆಂದು ಆತನು ಅಭಿಪ್ರಾಯಪಡುತ್ತಾನೆ. ಇದಾದ ನಂತರ ನಾನು ಅವನಿಗೆ ನಮ್ಮಲ್ಲಿ ನಂಬಿಗೆಯಿಟ್ಟು ಈ ಬಂದಿಗಳನ್ನು ತಕ್ಷಣ ಬಿಡುಗಡೆ ಮಾಡುವುದು, ಯಾವದೇ ಕಠಿಣ ನಿರ್ಧಾರ ಕೈಕೊಳ್ಳುವ ಪೂರ್ವದಲ್ಲಿ, ಅವರ ಪರವಾಗಿ ಇರುವ ಎಲ್ಲ ವಿಷಯಗಳನ್ನು ಸಹಾನುಭೂತಿಯಿಂದ ಪರಿಶೀಲಿಸಲು, ಸಹಾಯಕವಾಗಬಹುದೆಂದು ಮನಗಾಣಿಸಲೆತ್ನಿಸಿದ್ದೇನೆ. ಇದಕ್ಕೆ ವ್ಯತಿರಿಕ್ತವಾಗಿ ನಡೆದರೆ ಉಗ್ರಕ್ರಮಗಳು ಅನಿವಾರ್ಯವಾಗಿವೆಯೆಂತಲೂ ಎಚ್ಚರಿಸಿದ್ದೇನೆ.

"ಇಂಥ ಪರಿಸ್ಥಿತಿಯಲ್ಲಿ ಅವರ ಅತಿರೇಕದ ನಡವಳಿಕೆಯನ್ನು ಕ್ಷಮಿಸುವುದು ಸಾಧ್ಯವೇ ಇಲ್ಲವೆಂಬುದನ್ನು ತಾನು ಅರಿತಿರುವುದಾಗಿ ಅವರ ವಕೀಲ ಹೇಳಿ ನಮ್ಮ ಮಾತಿಗೆ ಒಪ್ಪಿಕೊಂಡನು. ಈ ಪರಿಸ್ಥಿತಿಯಲ್ಲಿ ಬಂದಿಗಳನ್ನು ಬಿಡುವುದು ಸೂಕ್ತಮಾರ್ಗವೆಂದು ಒಪ್ಪಿಕೊಂಡು, ತಾನು ಕಿತ್ತೂರಿಗೆ ಹೋಗಿ, ಅಲ್ಲಿಯ ಮುಖ್ಯಸ್ಥರಿಗೆ ಇಲ್ಲಿ ನಡೆದ ಮಾತುಕತೆಯನ್ನೆಲ್ಲ ವಿವರಿಸಿ, ಸ್ಟೀವನ್ಸನ್ ಮತ್ತು ಇಲಿಯಟ್‌ರನ್ನು ಬಿಡುಗಡೆ ಮಾಡಿಸಲು ತನಗೆ ಸಾಧ್ಯವಾದ ಎಲ್ಲ ಪ್ರಯತ್ನ ಮಾಡುವುದಾಗಿ ಮಾತುಕೊಟ್ಟಿದ್ದಾನೆ. ಅವರ ವಿರುದ್ಧ ಸರಕಾರ ಕೈಕೊಂಡ ನಿರ್ಧಾರಾತ್ಮಕ ಕಠಿಣ ಕ್ರಮವನ್ನು ಸಡಿಲಿಸಲು ಇದೊಂದೇ ಮಾರ್ಗವೆಂಬ ಪೂರ್ಣಮನವರಿಕೆಯಿಂದಲೇ ಅತನು ಇದಕ್ಕೆ ಒಪ್ಪಿಕೊಂಡಿದ್ದಾನೆ. ಆದ ಕಾರಣ ನಾನು ಅವನಿಗೆ ಕಿತ್ತೂರಿಗೆ ಹೋಗಲು ಅನುಮತಿಯಿತ್ತಿದ್ದೇನೆ. ನನಗೆ ಸಾಧ್ಯವಾದೊಡನೆ ಅದರ ಪರಿಣಾಮವನ್ನು ನಿಮಗೆ ತಿಳಿಯಪಡಿಸುತ್ತೇನೆ."

ಅಕ್ಟೋಬರ 26ನೆಯ ದಿನಾಂಕ ಕರ್ನಲ್ ಪಿಯರ್ಸನ್‌ನಿಗೆ ಸ್ಟೀವನ್ಸನ್ ಬರೆದ ದಾರುಣ ಪತ್ರ, ಪಿಯರ್ಸನ್‌ನಿಗೆ ಚಾಪ್ಲಿನ್‌ನಿಗೆ 30 ನೆಯ ಅಕ್ಟೋಬರ ದಿನಾಂಕ ಮತ್ತೊಂದು ಪತ್ರ

ಬರೆಯುವಂತೆ ಪ್ರಚೋದಿಸಿತು. ಈ ಪತ್ರ ಕಿತ್ತೂರಿನ ಕೋಟೆಯ ಅಭೇದ್ಯ ಶಕ್ತಿ ಹಾಗೂ ಕಿತ್ತೂರಿನ ಸೈನಿಕರ ಧೈರ್ಯ ಹಾಗೂ ಬಲದ ಬಗ್ಗೆ ಕರ್ನಲ್ ಪಿಯರ್ಸನ ಅಭಿಪ್ರಾಯ ಏನಿತ್ತೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಕಿತ್ತೂರಿನ ಮೇಲೆ ದಾಳಿಮಾಡಲು ಕರ್ನಲ್ ಪಿಯರ್ಸನ್ ಎಷ್ಟು ಹಿಂದು ಮುಂದೆ ನೋಡುತ್ತಿದ್ದನೆಂಬುದು ಇದರಿಂದ ಖಚಿತವಾಗುತ್ತದೆ. ಪತ್ರದ ಸಂಬಂಧಿಸಿದ ಭಾಗ ಕೆಳಗಿನಂತಿದೆ:

"ಕಿತ್ತೂರಿನಲ್ಲಿ ತನ್ನ ಆಜ್ಞೆಗಳನ್ನು ಜಾರಿಗೊಳಿಸಲು ಕೈಕೊಂಡ ಕ್ರಮಗಳ ವಿನಾಶಕಾರಿ ಪರಿಣಾಮದ ಬಗೆಗೆ, ನಾನು ಬರೆದ ಎಲ್ಲ ಪತ್ರಗಳೂ ಹಾಗೂ ಅವುಗಳೊಡನೆ ಕಳುಹಿಸಿದ ಪತ್ರಗಳ ಹಾಗೂ ವರದಿಗಳ ಪ್ರತಿಗಳನ್ನು ನೋಡಿದ ನಂತರವೂ, ನೀವು ನಾನು ಏನು ಸೈನಿಕಕ್ರಮ ಕೈಕೊಳ್ಳಬೇಕೆಂಬ ಬಗ್ಗೆ ವಿರುದ್ಧ ಅಭಿಪ್ರಾಯವನ್ನೇ ತಳೆಯುವಿರೋ, ಬದಲಿಸುವಿರೋ ನನಗೆ ಖಚಿತವಾಗಿ ತಿಳಿಯದಿದ್ದರೂ, ಇಲಿಯಟ್ ಮತ್ತು ಸ್ಟೀವನ್ಸನ್‌ರು ಈಗಿರುವ ತೀವ್ರ ಗಂಡಾಂತರದ ಪರಿಸ್ಥಿತಿಯನ್ನು ಅನುಲಕ್ಷಿಸಿ ನೀವು ನಿಮ್ಮ ಮೊದಲಿನ ಅಭಿಪ್ರಾಯವನ್ನೆ ತಳೆಯಲಾರಿರಿಯೆಂದು ನಂಬಿದ್ದೇನೆ. ಇದಲ್ಲದೆ ನನ್ನ ಕೈಕೆಳಗಿರುವ ಅಂಥ ಸಣ್ಣ ಸಂಖ್ಯೆಯ ಸೈನ್ಯದ ಬಗ್ಗೆ ಲಕ್ಷ್ಯವಿರಿಸಿ, ಇಂಥ ದುರ್ಧರ ಪ್ರಸಂಗದಲ್ಲಿ ನಾನು ಏನು ಮಾಡುವುದು ಸಾಧ್ಯವೋ ಸೂಕ್ತವೋ ಅದನ್ನೇ ಮಾತ್ರ ಮಾಡಿದ್ದೇನೆ.

"ಕಿತ್ತೂರಿನ ಕೋಟೆ ಬಹಳ ಶಕ್ತಿಶಾಲಿಯಾದದ್ದೆಂದು ಕೇಳಿದ್ದೇನೆ. ಮತ್ತು ಅದನ್ನು ಭೇದಿಸಲು ಫಿರಂಗಿಗಳ ಒಂದು ದಂಡೇ ಅವಶ್ಯಬೇಕು. ಅಲ್ಲದೆ ಅದನ್ನು ಉಪಯೋಗಿಸಲು ತರಬೇತಿ ಹೊಂದಿದ ಕಾಲಾಳುಗಳೂ, ಅದನ್ನು ಎಳೆದು ತರಲು ಬರಗಾಲದಲ್ಲಿ ಉಪಯೋಗಿಸುವ ಗಟ್ಟಿಯಾದ ಎತ್ತುಗಳೂ ಬೇಕು. ಇವು ಯಾವವೂ ನನ್ನ ಹತ್ತಿರ ಈಗ ಇರುವುದಿಲ್ಲ."

ಈ ಇಬ್ಬರೂ ಅಧಿಕಾರಿಗಳ ಚಿಂತಾಜನಕ ಪರಿಸ್ಥಿತಿ ಬ್ರಿಟಿಷ್ ಶಿಬಿರದಲ್ಲಿ ಎಲ್ಲರ ಮನಸ್ಸಿನಲ್ಲಿ ವ್ಯಾಕುಲತೆಯನ್ನುಂಟುಮಾಡಿತ್ತು. ಕಿತ್ತೂರಿನ ಪ್ರಮುಖರೂ ತಮ್ಮ ಕೈಯಲ್ಲಿ ಸಿಕ್ಕು ಬಂಧನದಲ್ಲಿದ್ದ ಈ ಅಧಿಕಾರಿಗಳನ್ನು ಬಿಟ್ಟುಕೊಡಲು ಸಿದ್ಧರಿರಲಿಲ್ಲ. ಅವರೂ ಹಟದ ಮನೋಭಾವನೆಯನ್ನು ತಳೆದಿದ್ದರು. ಕರಾರುರಹಿತವಾಗಿ ಈ ಅಧಿಕಾರಿಗಳನ್ನು ಬಿಟ್ಟುಕೊಡದಿದ್ದರೆ, ಕಿತ್ತೂರಿನ ಭವಿಷ್ಯದ ಬಗ್ಗೆ ಯಾವ ಭರವಸೆಯನ್ನೂ ಕೊಡಲು ಬ್ರಿಟಿಷರು ಸಿದ್ಧರಿರಲಿಲ್ಲ. ಇದು ಅವರ ಗೌರವದ ಪ್ರಶ್ನೆಯಾಗಿ ಪರಿಣಮಿಸಿದ್ದಿತು. ಈ ಸಂದಿಗ್ಧ ಪರಿಸ್ಥಿತಿ ಮುಂದುವರಿದ ಬಗ್ಗೆ ಗವ್ಹರ್ನರ ಎಲ್‌ಫಿನ್‌ಸ್ಟನ್‌ನಿಗೆ ಸ್ವಾಭಾವಿಕವಾಗಿ ತೀವ್ರ ವಿವಂಚನೆಯುಂಟಾಯಿತು. ಆತನಿಗೆ ಚಾಪ್ಲಿನ್‌ನ ಸಂಗಡ ಈ ವಿಷಯ ಚರ್ಚಿಸಿ ಕೂಡಲೇ ಒಂದು ನಿರ್ಣಯಕ್ಕೆ ಬರಬೇಕೆಂದು ಆತನು ಅಪೇಕ್ಷಿಸಿ ತಾನೇ ಸ್ವತಃ ಪುಣೆಗೆ ಹೊರಟು ಬಂದನು. ಚಾಪ್ಲಿನ್‌ನೊಂದಿಗೆ ಎಲ್ಲ ವಿಷಯ ಚರ್ಚಿಸಿದ ನಂತರ 1824 ರ ಅಕ್ಟೋಬರ್ 31ರಂದು ಪರಿಸ್ಥಿತಿಯ ಬಗ್ಗೆ ಅವನ ಅಭಿಪ್ರಾಯ ಹಾಗೂ ತನ್ನ ನಿರ್ಣಯಗಳನ್ನು ತನ್ನ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ (ಸೂಚನಾಪತ್ರ)ಯಲ್ಲಿ ಈ ರೀತಿ ಬರೆದಿರುವನು:

"ಹಿಜ್ ಎಕ್ಸಲನ್ಸಿ ಕಮಾಂಡರ್–ಇನ್–ಚೀಫ್ ಮತ್ತು ಕಮಿಶನರರೊಂದಿಗೆ ಚರ್ಚಿಸುವ ಸದಾವಕಾಶವನ್ನು ಕಲ್ಪಿಸಿಕೊಂಡು ಇಲ್ಲಿಗೆ ಬಂದು, ಅವರೊಂದಿಗೆ ಚರ್ಚಿಸಿದ ನಂತರ ಬರೆಯಲಾದ ಕೆಳಗಿನ ಅಭಿಪ್ರಾಯ ಹಾಗೂ ನಿರ್ಣಯಗಳು ಅವರ ಹಾಗೂ ನನ್ನ ಭಾವನೆಗಳನ್ನೇ ಪ್ರತಿಬಿಂಬಿಸುತ್ತವೆ.

"ನಾನು ನನ್ನ ಹಿಂದಿನ ಸೂಚನಾಪತ್ರದಲ್ಲಿ ಬರೆದ ಸಂಕ್ಷಿಪ್ತವರದಿಯಲ್ಲಿಯ ಆಜ್ಞೆಯನ್ನು ಮಾಡಿದ ನಂತರ, ಆ ಆಜ್ಞೆಯನ್ನು ಪಾಲಿಸುವದರ ಬಗ್ಗೆ ಸಂದೇಹವನ್ನುಂಟುಮಾಡಿದ, ನನಗೆ ಹಿಂದುಗಡೆಗೆ ತಿಳಿದು ಮನವರಿಕೆಯಾದ ಸಂಗತಿಯಂತೆ ಮಿ.ಸ್ಟೀವನ್ಸನ್ ಮಿ.ಇಲಿಯಟ್ ಹಾಗೂ ಅನೇಕ ಸಿಪಾಯಿಗಳು ಮತ್ತು ಉಳಿದವರು ಬಂಡುಖೋರರ ಹಲವು ಕರಾರುಗಳಿಗೆ ಒಪ್ಪದಿದ್ದರೆ ಅವರನ್ನು ಕೊಲ್ಲುವುದಾಗಿ ಹೆದರಿಸುತ್ತಿದ್ದಾರೆ. ಬಂಡಾಯ ಶುರುವಾದ ನಂತರ ನಮಗೆ ಖಚಿತವಾಗಿ ಅವರ ಯಾವ ಬೇಡಿಕೆಗಳ ಕರಾರುಗಳು ಬಂದಿಲ್ಲ. ಆದರೆ ಕಿತ್ತೂರ ಸಂಸ್ಥಾನಕ್ಕೆ ಅದರ ಮೊದಲಿನ ಸ್ಥಾನವನ್ನು ಕೊಡಬೇಕೆಂಬ ಬೇಡಿಕೆ ಈ ಬೇಡಿಕೆಗಳಲ್ಲಿ ಪ್ರಮುಖವಾಗಿರಲೇ ಬೇಕು.

"ಬಂಧನದಲ್ಲಿರುವವರ ಸ್ಥಿತಿ ನಿಜವಾಗಿಯೂ ಚಿಂತಾಜನಕವಾಗಿದೆ. ಅದರಲ್ಲಿಯೂ ಮಿ.ಸ್ಟೀವನ್ಸನ್ ಮತ್ತು ಇಲಿಯಟ್‌ರದಂತೂ ಅವರ ಗತಿ ಮರುಕ್ಷಣಕ್ಕೆ ಏನಾಗುವುದೋ ಎಂಬ ಭೀತಿಯನ್ನುಂಟುಮಾಡುವಂತ ಹಾಗಿದೆ. ಇಂಥ ಅಪಾಯದ ಸ್ಥಿತಿಯಲ್ಲಿಯೂ ಅವರು ತೋರುತ್ತಿರುವ ದೃಢವಾದ ನಿಲುಮೆ ಅವರ ಸ್ಥಿತಿಯನ್ನು ಇನ್ನಷ್ಟು ಚಿಂತಾಜನಕವಾಗಿಸಿದೆ. ಈ ಗೃಹಸ್ಥರ ಜೀವಗಳನ್ನು ಉಳಿಸುವದಕ್ಕಾಗಿ ಎಂಥ ಕ್ರಯವನ್ನಾದರೂ ತೆತ್ತಲು ನಾನು ಸಿದ್ಧನಿದ್ದರೂ, ಹಿಂದುಸ್ತಾನದಲ್ಲಿ ಇರುವ ಪ್ರತಿಯೊಬ್ಬ ಯೂರೋಪಿಯನ್‌ನ ಕ್ಷೇಮದ ಸಾರ್ವಜನಕ ಹಿತ ದೃಷ್ಟಿಯಿಂದ ನಾವು ಯಾವದೇ ಒಬ್ಬ ಅವಿಚಾರಿ ಸಾಹಸಿಕ ಒಬ್ಬ ಯೂರೋಪಿಯನ್ ಗೃಹಸ್ಥನನ್ನು ತನ್ನ ವಶದಲ್ಲಿ ತೆಗೆದುಕೊಂಡರೆ ತನ್ನ ಬೇಕಾದ ಬೇಡಿಕೆಯನ್ನು ಈಡೇರಿಸಿಕೊಳ್ಳಬಹುದೆಂದಾಗಲಿ, ಯಾವದೇ ಅಪರಾಧ ಮಾಡಿದರೂ ಕ್ಷಮೆಯನ್ನು ಪಡೆದುಕೊಳ್ಳಬಹುದೆಂಬ ಭಾವನೆಗಾಗಲಿ ನಾವು ಅವಕಾಶ ಮಾಡಿಕೊಡ ಬಾರದು. ಇದಕ್ಕೆ ವ್ಯತಿರಿಕ್ತವಾಗಿ, ನಮ್ಮ ಉದ್ದೇಶ ಸಾಧನೆಗಾಗಿ, ಬಂಡುಖೋರರ ಎಲ್ಲ ಬೇಡಿಕೆಗಳಿಗೂ ನಾವು ಒಪ್ಪಿಕೊಳ್ಳುವ ಅವಶ್ಯಕತೆಯಿದೆಯೆಂದು ನಾನು ನಂಬುವುದಿಲ್ಲ. ಕಿತ್ತೂರಿನ ಇಡೀ ಸೈನ್ಯ ಮತ್ತು ಅವರ ಮುಖ್ಯಸ್ಥರೆಲ್ಲ ತಮ್ಮ ಸುರಕ್ಷಿತತೆಯ ಬಗ್ಗೆ ಸಂಪೂರ್ಣ ನಿರಾಶರಾದರೂ ಅವರು ಸೇಡು ತೀರಿಸಿಕೊಳ್ಳಬಹುದು. ಆದರೆ ಎಲ್ಲರಿಗೂ ನಾವು ರಕ್ಷಣೆ ಹಾಗೂ ಕ್ಷಮಾಧಾನದ ಭರವಸೆಯಿತ್ತರೆ, ನಮ್ಮ ನಿವೇದನೆಯನ್ನು ಅವರು ನಿರಾಕರಿಸುವರೆಂದು ನನಗೆನಿಸುವುದಿಲ್ಲ. ಅವರ ಎಲ್ಲ ಪ್ರಯತ್ನಗಳು ಅಥವಾ ತ್ಯಾಗಗಳು ಅವರ ಬೇಡಿಕೆಗಳಿಗೆ ಒತ್ತಾಯದ ಒಪ್ಪಿಗೆಯನ್ನು ದೊರಕಿಸಲಾರವು ಎಂಬುದು ಖಾತ್ರಿಯಾದರೆ, ಸಂಸ್ಥಾನವನ್ನು ತಿರುಗಿ ಕೊಡುವುದರ ನಿರಾಕರಣೆ ಅಥವಾ ಅದರ ಪ್ರಮುಖರಿಗೆ ಕ್ಷಮಾದಾನ ನೀಡುವುದರ ನಿರಾಕರಣೆ ಕೂಡ, ನಮ್ಮ ನಿವೇದನೆಯನ್ನು ಅವರು ನಿರಾಕರಿಸುವಂತೆ ಮಾಡಲಾರವೆಂದು ನನಗೆನಿಸುತ್ತದೆ.

"ಆದಕಾರಣ, ಶರಣಾಗತರಾಗಿ ತಿರುಗಿ ಕೆಲಸಕ್ಕೆ ಹಾಜರಾಗುವ ಸೈನಿಕರಿಗೆ ನಮ್ಮ ದುರ್ಬಲತೆಯ ಲಕ್ಷಣವಾಗಿ ಕಂಡುಬರದಂತೆ ಇಂಥ ದುರ್ನಡತೆಗೆ ಇನ್ನು ಮುಂದೆ ಅವಕಾಶವಾಗಿರಬಾರದಂತೆ, ಎಷ್ಟರಮಟ್ಟಿಗೆ ಅವರಿಗೆ ಕ್ಷಮಾದಾನ ಕೊಡಬಹುದು, ಇಲ್ಲವೆ ಅನುಕೂಲತೆಗಳನ್ನು ಒದಗಿಸುವ ಬಗ್ಗೆ ವಚನಗಳನ್ನು ಕೊಡಬಹುದು ಎಂಬುದನ್ನು ಮಾತ್ರ ಈಗ ವಿಚಾರಿಸಬೇಕಾಗಿದೆ. ಕಿತ್ತೂರಿನ ಜನರ ಬಂಡಾಯ, ಆಗಿನ ಪರಿಸ್ಥಿತಿಯಲ್ಲಿ ಒಂದು ಉದ್ವೇಗದ ಕೃತಿ ಮಾತ್ರವಾಗಿದೆಯಲ್ಲದೆ ವಿಶ್ವಾಸಘಾತ ಅಥವಾ ದ್ರೋಹದ ಕೃತಿಯಂತೂ ನಿಶ್ಚಿತವಾಗಿ ಅಲ್ಲವೆಂದು ನನಗೆನಿಸುತ್ತದೆ. ನಮಗೆ ಕಂಡುಬರುವುದರ ಪ್ರಕಾರ, ಯಾವ ಗೃಹಸ್ಥನ ಮರಣ ಈಗಿನ ಗೊಂದಲ ಪರಿಸ್ಥಿತಿಯಲ್ಲಿ ಅತ್ಯಂತ ದಾರುಣವಾದ ಘಟನೆಯಾಗಿದೆಯೋ ಅದಕ್ಕೆ ಅವನು ಆಕ್ಷೇಪಾರ್ಹಕ್ರಮವನ್ನು, ಅದಕ್ಕೆ ಬೇಕಾಗ ಬಹುದಾದಕ್ಕಿಂತ ಅತಿಕಡಿಮೆ ಸೈನ್ಯವಾಗಲಿ, ಸಲಕರಣೆಯಾಗಲಿ ಇರುವಾಗ, ಅತಿ ಅವಸರದ ಹಾಗೂ ಆತುರದಿಂದ ಕೈಕೊಂಡದ್ದೇ ಕಾರಣವೆಂದು ನನಗೆನಿಸುತ್ತದೆ. ಅವರು ಎಸಗಿದ ಈ ಹಿಂಸಾಕೃತಿಯೇನೋ ಚೆನ್ನಮ್ಮನ ಪ್ರಭಾವದಿಂದ ಸ್ಫೂರ್ತಿಗೊಂಡಿರಬಹುದಾದರೂ, ಅದು ಆ ಸರದಾರ ಗುರುಸಿದ್ದಪ್ಪನ ಸ್ವತಂತ್ರವಾದ ಆಲೋಚನೆ ಹಾಗೂ ಆದೇಶಗಳಿಂದಲೇ ಮುಂದುವರಿದು, ಆತನು ತನ್ನ ವೈಯಕ್ತಿಕ ವೈರಿಗಳ ಮೇಲೆ ಸೇಡುತೀರಿಸಿಕೊಳ್ಳಲು ಈ ಅವಕಾಶವನ್ನು ಉಪಯೋಗಿಸಿಕೊಂಡಂತೆ ತೋರುತ್ತದೆ. ಈಗಲಾದರೂ ಆತ ಹಿಂದಿನ ದೇಸಾಯಿಯ ಮಲತಾಯಿಯಾದ ಚೆನ್ನಮ್ಮನ ಹೆಸರನ್ನು ಬಳಸಿಕೊಳ್ಳುವವನಾಗಿದ್ದರೂ ಬಂಡಾಯಗಾರರು ಯಥಾರ್ಥವಾಗಿ ಒಪ್ಪಿಕೊಂಡ ಮುಖಂಡನೇನೋ ಎನ್ನುವಂತೆ ವರ್ತಿಸುತ್ತಾನೆ. ಆದಕಾರಣ ಇದೆಲ್ಲ ವ್ಯವಹಾರದ ಮುಖ್ಯ ಜವಾಬ್ದಾರಿ ಗುರುಸಿದ್ದಪ್ಪನ ಮೇಲೆಯೇ ಬೀಳಬೇಕು. ಚೆನ್ನಮ್ಮ ಕೂಡ ಅಷ್ಟೇ ತಪ್ಪುಗಾರಳಾಗಿದ್ದರೂ ಕೂಡ(ಹಾಗೆನ್ನಲಿಕ್ಕೆ ಯಾವ ಆಧಾರವೂ ಇಲ್ಲ), ಅಂಥ ಉನ್ನತ ದರ್ಜೆಯ ಹೆಣ್ಣು ಮಗಳಿಗೆ ದಂಡ ವಿಧಿಸುವದು ಜನರಲ್ಲಿ ಅತ್ಯಂತ ಅಪ್ರಿಯವಾಗಿ ಪರಿಣಮಿಸುವದಲ್ಲದೆ, ಅಂಥ ಕಾರ್ಯ ನಮ್ಮ ಸರಕಾರದ ಸಂಪ್ರದಾಯಕ್ಕೆ ಅನುಗುಣವಾದುದೂ ಆಗುವುದಿಲ್ಲ. ಆದಕಾರಣ ಆಕೆಯ ಬಗ್ಗೆ ಇರುವ, ಸಂದೇಹಗಳನ್ನು ಗಣನೆಗೆ ತೆಗೆದುಕೊಳ್ಳಲೇಬಾರದು. ಅಪರಾಧಿಗಳಾದ ದಂಗೆಖೋರರ ಪ್ರಮುಖರನ್ನು ಹೊರತು ಪಡಿಸಿ, ಉಳಿದೆಲ್ಲ ಬಂಡುಖೋರರಿಗೆ ಸಂಪೂರ್ಣ ಕ್ಷಮಾದಾನವನ್ನು ಕೊಡುವ ಭರವಸೆ ಕೊಡಬೇಕಲ್ಲದೆ ಅವರೀಗ ಈ ಬಂಡಾಯ ಎದ್ದಿರದಿದ್ದರೆ, ಅವರು ಯಾವ ಯಾವ ಸವಲತ್ತುಗಳನ್ನು ಹೊಂದಿರುತ್ತಿದ್ದರೋ, ಅವನ್ನೆಲ್ಲ ಮರಳಿ ಕೊಟ್ಟುಬಿಡಬೇಕು. ಪ್ರಮುಖ ಬಂಡುಖೋರರ ಬಗ್ಗೆ ಮಾತ್ರ ನಾವು ಮೊದಲು ಯೋಚಿಸಿದ್ದಕ್ಕಿಂತ ಹೆಚ್ಚು ಗಡಸಿನ ಕ್ರಮಗಳನ್ನೇ ಕೈಕೊಳ್ಳಬೇಕು.

"ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ತಡಮಾಡದೆ ಒಂದು ಪ್ರಕಟನೆಯನ್ನು ಕೊಡುವುದು ಅವಶ್ಯವೆನಿಸುತ್ತದೆ. ಈ ಪ್ರಕಟನೆಯಲ್ಲಿ ಕಿತ್ತೂರ ದೇಸಾಯಿಯವರಿಗೆ ಮಕ್ಕಳಿಲ್ಲದೆ ಅಥವಾ ಆಪ್ತಸಂಬಂಧಿಕರಿಲ್ಲದೆ ಮಡಿದ ವಿಷಯವನ್ನು ಪ್ರಸ್ತಾಪಿಸಬೇಕು. ಮತ್ತು

ಅವರ ಮುಖ್ಯ ಸೇವಕರು ಅವರ ಮರಣಾನಂತರ ಖೊಟ್ಟಿ ಸಹಿಮಾಡಿ, ಸುಳ್ಳು ದತ್ತಕ ಕಾರ್ಯ ನಿರ್ವಹಿಸಿದ್ದನ್ನೂ, ಮೋಸದಿಂದ ರಾಜ್ಯದ ಬೊಕ್ಕಸವನ್ನು ವಶಪಡಿಸಿಕೊಂಡದ್ದನ್ನು ತಿಳಿಸಬೇಕು. ಇದು ಥ್ಯಾಕರೆನಿಗೆ ತೀರ ಅಗತ್ಯವೆನಿಸಿತು ಮತ್ತು ಅವರ ಪ್ರದೇಶವನ್ನು ತಮ್ಮ ಅಧೀನಕ್ಕೆ ತೆಗೆದುಕೊಳ್ಳುವುದು ಸರಕಾರದ ಉದ್ದೇಶವಾಗಿದೆಯೆಂದು ಬಗೆದನು. ಒಂದು ವೇಳೆ ಸಂಸ್ಥಾನದ ವಂಶಸ್ಥರೊಬ್ಬರು ದೊರೆಯದಿದ್ದರೆ ಆ ಪ್ರದೇಶವನ್ನು ತಮ್ಮ ಅಡಳಿತಕ್ಕೆ ಒಳಪಡಿಸಿಕೊಳ್ಳಬೇಕು ಹಾಗೂ ವಿಧವೆಯಾದ ರಾಣಿಗೆ ಮತ್ತು ಮುಖ್ಯ ಸೇವಕರಿಗೆ ಸಾಕಷ್ಟು ಸೌಕರ್ಯವೂ ಕಂಪನಿಯ ಉಳಿದ ದೇಶಗಳಲ್ಲಿ ಎಲ್ಲ ಶೇತ ಸನದಿಗಳಿಗಿದ್ದಂತೆ ಮುಂದುವರಿಸಿಕೊಂಡು ಬರಬೇಕು. ದೇಸಾಯಿಯವರ ಖಾಸಗಿ ಆಸ್ತಿ ಮತ್ತು ಸಂಪತ್ತು ಮುಂತಾದವುಗಳನ್ನು ಅವರ ವಿಧವೆ ಪತ್ನಿಗೆ ಬಿಟ್ಟುಕೊಡಬೇಕು ಹೀಗೆಂದು ಯೋಚಿಸಿದ್ದಾಗ್ಲೂ ತನಿಖೆಯ ಸಂದರ್ಭದಲ್ಲಿ ಗುರುಸಿದ್ದಪ್ಪನು ಕಿತ್ತೂರಿನ ಜನರನ್ನು ಥ್ಯಾಕರೆಯ ವಿರುದ್ಧ ಎತ್ತಿಕಟ್ಟುವಂತೆ ಮಾಡಿದನು. ಕಿತ್ತೂರಿನ ಮಹಾದ್ವಾರವನ್ನು ಮುಚ್ಚಿಸಿಬಿಟ್ಟನು. ಮತ್ತು ಥ್ಯಾಕರೆಯ ಮೇಲೆ ಬಲಪ್ರಯೋಗ ಮಾಡಿದನು. ಥ್ಯಾಕರೆ ಗುಂಡಿಕ್ಕಲ್ಪಟ್ಟನು. ಆತನ ಜೊತೆಗಿದ್ದ 150 ಜನ ಸಿಪಾಯಿ ಮತ್ತು ಬಂದೂಕು ಧಾರಿಗಳು ಕಿತ್ತೂರಿನವರ ಕೈವಶವಾದರು, ಅವರ ಬಂದೂಕುಗಳು ಕಸಿದುಕೊಳ್ಳಲ್ಪಟ್ಟವು.

"ಈ ಘಟನೆಯನ್ನು ಮನಗಂಡು ಕಿತ್ತೂರಿನ ಜನರು ತತ್‌ಕ್ಷಣಕ್ಕೆ ತಮ್ಮ ದೇಸಾಯಿಯವರ ಸರಕಾರದ ಅಧೀನಕ್ಕೆ ಒಳಪಟ್ಟರು. ಹಾಗೂ ಕಿತ್ತೂರು ಒಂದು ಪ್ರತ್ಯೇಕ ಸಂಸ್ಥಾನವೆಂಬ ಭಾವನೆ ಮಾಡಿಕೊಂಡರು. ಅವರಿಗೆ ಆಗ ತಾವು ಬಹುಮಟ್ಟಿಗೆ ಬ್ರಿಟಿಷ್ ಸರಕಾರದ ರಾಜನಿಷ್ಠರೆಂಬುದರ ಸಂಪೂರ್ಣ ಅರಿವಿರಲಿಲ್ಲ. ಅವರಾಗ ದಿವಂಗತ ದೇಸಾಯಿಯವರ ಮುಖ್ಯ ಅಧಿಕಾರಗಳಿಂದ ತಪ್ಪುದಾರಿಗೆ ಎಳೆಯಲ್ಪಟ್ಟಿದ್ದರು. ಸರಕಾರದ ಸೈನ್ಯದೊಂದಿಗೆ ಅವರ ಪ್ರತಿರೋಧವು ಪೂರ್ವಾಲೋಚನೆ ಮತ್ತು ವಿದ್ರೋಹದಿಂದ ಮುಕ್ತವಾಗಿತ್ತು. ಆಡಳಿತದಲ್ಲಿದ್ದ ಗವ್ಹರ್ನರನು ಜನತೆಯ ಈ ನಿಲುಮೆಗೆ ಸಂತೋಷಪಟ್ಟವನಾಗಿ ತಪ್ಪುಮಾರ್ಗಕ್ಕೆಳೆಯಲ್ಪಟ್ಟವರನ್ನೆಲ್ಲ ಕ್ಷಮಿಸಿಬಿಟ್ಟನು. ಹೀಗೆ ಕ್ಷಮಿಸಲ್ಪಟ್ಟವರು ಸರಕಾರಕ್ಕೆ ವಿಧೇಯರಾಗಿರಬೇಕೆಂಬ ಕರಾರು ಮಾತ್ರ ಇತ್ತು. ಗುರುಸಿದ್ದಪ್ಪನೊಬ್ಬನು ಮಾತ್ರ ಕ್ಷಮೆಯ ವಿನಾಯತಿಗೆ ಒಳಪಡಲಿಲ್ಲ. ಅವನೂ ಕೂಡ ತತ್‌ಕ್ಷಣಕ್ಕೆ ತಪ್ಪೊಪ್ಪಿಕೊಂಡು ಶರಣಾಗತನಾಗಿದ್ದರೆ ಮರಣದಂಡನೆಯ ಶಿಕ್ಷೆಯಿಂದ ವಿನಾಯತಿ ಪಡೆಯಬಹುದಾಗಿತ್ತು.

"ಮುಂದಿನ ನವ್ಹೆಂಬರ 20 ರ ಒಳಗಾಗಿ ತಪ್ಪೊಪ್ಪಿಕೊಳ್ಳುವ ಬಂಡಾಯಗಾರರೆಲ್ಲರ ಇನಾಮು ಮತ್ತು ವತನ ಹಾಗೂ ಎಲ್ಲ ಶೇತ ಸನದುಗಳನ್ನು ಅವರಿಗೇ ಉಳಿಸುವ ಮತ್ತು ಯಥಾಪ್ರಕಾರವಾಗಿ ನಡೆಸಿಕೊಂಡು ಬರುವ ಅಭಯವೂ ಇತ್ತು. ದಂಗೆಯಲ್ಲಿ ಮಹತ್ವದ ಪಾತ್ರವಹಿಸಿದ ಮುಖ್ಯ ಸೇವಕರ ಬೇಡಿಕೆಯನ್ನು ಗಮನಿಸಿ, ಅವರ ಬೆಂಬಲಕ್ಕೆ ಕೆಲವೊಂದು ಅವಕಾಶ ಕಲ್ಪಿಸುವುದನ್ನು ಗಣನೆಗೆ ತೆಗೆದುಕೊಳ್ಳಲಾಗಿತ್ತು. ದಿವಂಗತ

ದೇಸಾಯಿಯವರ ಪತ್ನಿಗೆ ಸೂಕ್ತ ವರ್ಷಾಶನ ಕೊಡಲಾಗುವುದು ಮತ್ತು ಇಂಥ ಸೌಲಭ್ಯವನ್ನು ಸರಕಾರವು ಚೌಕಾಶಿಮಾಡಿ, ಸರಿಯಾದ ನಿರ್ಣಯಕ್ಕೆ ಬಂದನಂತರ ದೇಸಾಯಿಯವರ ಕುಟುಂಬದ ಇತರ ಮಹಿಳೆಯರಿಗೂ ದಯಪಾಲಿಸಲಾಗುವುದು. ದೇಸಾಯಿಯವರ ಬೊಕ್ಕಸ ಮತ್ತು ಖಾಸಗಿ ಆಸ್ತಿ ಅವರ ವಿಧವೆ ಪತ್ನಿಗೇ ಸೇರಿದುದೆಂದು ಈಗಲೂ ತಿಳಿಯಲಾಗಿತ್ತು. ಅದರ ಯಾವುದೇ ಭಾಗವು ಕೊಳ್ಳೆ ಹೊಡೆಯಲ್ಪಟ್ಟಿದ್ದರೆ ಅದನ್ನು ತುಂಬಿಕೊಡಲಾಗುವುದು.

"ಇಬ್ಬರು ಸದ್ಗೃಹಸ್ಥರ ಮತ್ತು ಇತರ ಕೈದಿಗಳ ರಕ್ಷಣೆಗೆ ಕಿತ್ತೂರಿನ ಎಲ್ಲ ಸರದಾರರು ಮತ್ತು ಸಿಪಾಯಿಗಳೇ ಜವಾಬ್ದಾರರು. ಅವರಿಗೆ ಏನಾದರೂ ಅಪಾಯ ಸಂಭವಿಸಿದರೆ ಸರದಾರರು ಮತ್ತು ಎಲ್ಲ ತಪ್ಪಿತಸ್ಥರು ಮುಂದಿನ ಅಪರಾಧಿಗಳಿಗೆ ಭಯವನ್ನುಂಟುಮಾಡುವಂತಹ ಕಠಿಣ ಶಿಕ್ಷೆಗೆ ಗುರಿಯಾಗುವರು.

"ಈ ಪ್ರಕಟಣೆಯನ್ನು ಎಲ್ಲರಿಗೂ ತಲುಪಿಸುವಂತೆ ಹಾಗೂ ಇದರ ನಿಯಮಗಳನ್ವಯ ಕಾರ್ಯಕೈಕೊಳ್ಳುವಂತೆ ಕರ್ನಲ್ ಪಿಯರ್ಸನಿಗೆ ತಿಳಿಸಬೇಕು. ಕಮಿಶನರರಿಂದ ಒಂದು ಕಾಗದವು – ತಾವೇನು ಕ್ರಮ ಕೈಕೊಂಡೆವೆಂಬುದನ್ನು ತಿಳಿಯುವಂತೆ ಮಾಡಲು – ಮುಖ್ಯ ಜಹಗೀರದಾರರಿಗೆ ಮತ್ತು ಕೊಲ್ಲಾಪುರದ ಮಹಾರಾಜರಿಗೆ ಹೋಗಬೇಕು. ಅವರನ್ನವಲಂಬಿಸಿದವರು ಬಂಡಾಯಗಾರರೊಂದಿಗೆ ಸೇರಿಕೊಳ್ಳುವುದನ್ನು ತಡೆಯುವಂತೆ ಅವರಿಗೆ ಸೂಚನೆಕೊಡಬೇಕು. ಇಂತಹ ಸೂಚನೆಯನ್ನು ಡನ್‌ಲಪ್ ಅವರ ಮೂಲಕ ತಲುಪಿಸಬೇಕು. ಕಮಿಶನರರ ಕಾಗದದ ಮರಾಠಿ ಪ್ರತಿಯೊಂದನ್ನು ದತ್ತು ಸ್ವೀಕರಿಸದಂತಹ ವ್ಯಕ್ತಿಗೂ ಕಳಿಸಿಕೊಡಬೇಕು.

"ಬಂಡಾಯಗಾರರೊಂದಿನ ಎಲ್ಲ ವ್ಯವಹಾರ ಮತ್ತು ಕಿತ್ತೂರನಾಡಿನ ವ್ಯವಸ್ಥೆಯ ವಿಷಯವನ್ನು ಚಾಪ್ಲಿನ್‌ನು ಬರುವವರೆಗೆ, ಯಾವುದೇ ಅಪಾಯಕ್ಕೆ ಇಡಾಗದಂತೆ ನೋಡಿಕೊಳ್ಳಲು ಕರ್ನಲ್ ಪಿಯರ್ಸನಿಗೇ ಬಿಟ್ಟುಕೊಡಬೇಕು.

"ಚಾಪ್ಲಿನ್‌ನು ಬಹುತರವಾಗಿ 15 ನೆಯ ಇಲ್ಲವೆ 20 ನೆಯ ತಾರೀಖಿಗೆ ಬೆಳಗಾವಿಯಲ್ಲಿರುವನು. ದಂಡು ತಿಂಗಳ ಕೊನೆಗೆ ಅಲ್ಲಿ ಸೇರುವುದು. ಇದಕ್ಕೂ ಮೊದಲು ಶರಣಾಗತಿಯು ನಡೆಯುವಂತಿಲ್ಲ. ಕಿತ್ತೂರಿನ ಕೋಟೆಯ ರಕ್ಷಕ ಪಡೆ ಅಲ್ಲಿಂದ ನುಣುಚಿಕೊಳ್ಳದಂತೆ ಎಲ್ಲ ಪ್ರಯತ್ನವನ್ನೂ ಮಾಡಲು ಕರ್ನಲ್ ಪಿಯರ್ಸನಿಗೆ ತಿಳಿಸಲಾಗಿತ್ತು. ವಿಶೇಷವಾಗಿ ಅವರು ಅಲ್ಲಿಂದ ಅಡವಿ ಸೇರದಂತೆ ನೋಡಿಕೊಳ್ಳಲೂ ಸೂಚಿಸಲಾಗಿತ್ತು. ತಲೆ ತಪ್ಪಿಸಿಕೊಳ್ಳುವವರನ್ನು ತಡೆಗಟ್ಟುವಷ್ಟು ಸಾಮರ್ಥ್ಯವುಳ್ಳ ಸೈನ್ಯವನ್ನು ತೆಗೆದುಕೊಂಡು ಹೋಗುವುದಕ್ಕಿಂತ, ಇಡೀ ಪ್ರದೇಶವನ್ನೆ ಸ್ವಾಧೀನ ಪಡಿಸಿಕೊಳ್ಳುವಂಥ ಸೈನ್ಯವೆಲ್ಲ ಕೂಡಿದೊಡನೆಯೇ ಅಲ್ಲಿಗೆ ತೆರಳುವುದು ಹೆಚ್ಚು ಸೂಕ್ತ. ಆವರೆಗೆ ಆ ಕಾರ್ಯವನ್ನು ತಡೆಹಿಡಿಯುವುದೇ – ಅದು ಒಂದು ವೇಳೆ ಒಂದು ಪಕ್ಷದ ಕಾಲಾವಧಿಯದಾಗಿದ್ದರೂ ಉತ್ತಮ ಎಂದೂ ತಿಳಿಸಲಾಗಿತ್ತು.

“ಆ ಸಂದರ್ಭಕ್ಕೆ ಅಗತ್ಯವೆಂದು ಕಮಾಂಡರ್–ಇನ್–ಚೀಫ್ ಅವರೊಂದಿಗೆ ಆಲೋಚಿಸಿದಂತೆ, ಸೈನ್ಯ ವ್ಯವಸ್ಥೆ ಹಾಗೂ ಅವುಗಳ ಸಂಭವನೀಯ ತಾರೀಖುಗಳನ್ನು ಈ ಕೆಳಗೆ ಇರುವ ಪಟ್ಟಿಯಲ್ಲಿ ಕೊಡಲಾಗಿದೆ:

| ದಳ | ಎಲ್ಲಿಂದ | ಎಲ್ಲಿಗೆ | ತಲುಪುವ ತಾರೀಖು |
|---|---|---|---|
| 6ನೆಯ ಎನ್. ಆಯ್ | ಸಾತಾರಾ | ಬೆಳಗಾವಿ | 24ನೆಯ ನವ್ಹೆಂಬರ |
| ಕುದುರೆಯ ಫಿರಂಗಿದಳ | ಪುಣೆ | ಬೆಳಗಾವಿ | 24ನೆಯ ನವ್ಹೆಂಬರ |
| 7ನೆಯ ಎಂ.ಎಲ್.ಟಿ. | ಸೋಲ್ಲಾಪುರ | ಬೆಳಗಾವಿ | 11ನೆಯ ನವ್ಹೆಂಬರ |
| ಅಶ್ವದಳ | | | |
| 23ನೆಯ ಎಂ.ಎನ್.ಆಯ್. | | | |
| 50ಫಿರಂಗಿ ದಳದವರು | | | |
| ಪ್ರಥಮ ಯುರೋಪಿಯನ್ | | | |
| ಪಡೆ ಮೂರು ಎನ್. | ಮುಂಬಯಿ | ವೆಂಗುರ್ಲಾ | – |
| ಆಯ್. | | | |
| ಒಂದು ಕಂಪನಿ ಅಥವಾಫಿರಂಗಿದಳ | | | |
| ಎರಡು ಕಂಪನಿಗಳಎಚ್.ಎಂ. | | | |
| ನಾಲ್ಕನೆಯ ಪಡೆ | | | |
| ಪ್ರಥಮ ಪಡೆ ಎನ್. | ಬಳ್ಳಾರಿ | ಬೆಳಗಾವಿ | – |
| ಆಯ್. | | | |

“ಒಂದು ವೇಳೆ ಬೆಳಗಾವಿಯಲ್ಲಿದ್ದ ಫಿರಂಗಿಗಳ ಹಾಗು ಅವುಗಳ ಸಂಗ್ರಹದ ಕೊರತೆಯಾಗಿರುವುದು ಅಂಕಿ–ಅಂಶಗಳಿಂದ ಮುಂಬಯಿಯಲ್ಲಿ ಗೊತ್ತಾದರೆ ಆ ಕೊರತೆಯನ್ನು ಪ್ರಾಂತಾಧಿಪತ್ಯದಿಂದ ಪೂರೈಸಿಕೊಡ ಬೇಕಾಗುವುದು.

“ಬಂಡಿಗಳನ್ನು ಕಲೆಹಾಕುವ ಕಾಲಾವಧಿಯ ಬಗ್ಗೆ ಅನಿಶ್ಚಿತತೆ ಇರುವುದರಿಂದ ಬಳ್ಳಾರಿ ಮತ್ತು ಮುಂಬೈಯಿಂದ ಬರುವ ಸೈನ್ಯದಳಗಳ ಬಗ್ಗೆ ಯಾವ ತಾರೀಖನ್ನೂ ನಿಗದಿಮಾಡಿರಲಿಲ್ಲ. ಆದರೆ ಮೊದಲನೆಯದು ಆ ತಿಂಗಳ 25ನೆಯ ತಾರೀಖಿಗೆ ಕರ್ನಲ್ ಪಿಯರ್ಸನಿಂದ ಪೂರೈಸಲ್ಪಟ್ಟಿತು. ಉಳಿದವು ನವ್ಹೆಂಬರದ ಅಂತ್ಯದೊಳಗಾಗಿ ಬೆಳಗಾವಿಯಲ್ಲಿ ರುವುದರ ಸಾಧ್ಯತೆಯಿತ್ತು.

“ಗಂಭೀರ ಪರಿಣಾಮವನ್ನುಂಟುಮಾಡುವ ಸಮಯ ಆಗಲೇ ಸನ್ನಿಹಿತವಾಗಿದ್ದರಿಂದ, ನಾನು ಮೇಲೆ ವಿವರಿಸಿದ ಕ್ರಮ ಕೈಕೊಳ್ಳಲು ಕಮಿಷನರಿಗೆ ವಿನಂತಿಸಿಕೊಂಡೆ. ಮಾನ್ಯ ಕಮಾಂಡರ್–ಇನ್–ಚೀಫ್ ಅವರು ಕಾರ್ಯಾಚರಣೆಗಾಗಿ ಸಂಬಂಧಿಸಿದ ಸೈನ್ಯ ವ್ಯವಸ್ಥೆಗೆ ಅಗತ್ಯವಾದ ಆಜ್ಞೆಯನ್ನು ಹೊರಡಿಸಿದರು.”

ವಾರಿ ಇಲ್ಲವೆ ನೆರೆಯ ಯಾವುದೇ ಅರಣ್ಯಪ್ರದೇಶದಲ್ಲಿ ಬಂಡಾಯಗಾರರು ರಕ್ಷಣೆ ಪಡೆಯಲು ಪ್ರಯತ್ನಿಸಬಹುದೆಂದು ಭಾವಿಸಿ, ಅದನ್ನು ತಡೆಯಲು ತನ್ನ ಅಧೀನದಲ್ಲಿರುವ ಎರಡು ದಳಗಳನ್ನು, ತನ್ನ ಜಿಲ್ಲೆಯ ದಕ್ಷಿಣ ಭಾಗದ ಸುಮಾರಿನಲ್ಲಿ ಕಾವಲಿಡಲು ಕರ್ನಲ್ ಕೆನಡಿಗೆ ನಿರ್ದೇಶನವೀಯಲಾಗಿತ್ತು.

ವರಿಷ್ಠ ಸರಕಾರದ ಅಗತ್ಯದಂತೆ ಗೈರುಹಾಜರಿಯಲ್ಲುಳಿದ ಎರಡು ಮುಖ್ಯ ಸೈನ್ಯದಳಗಳ, ಮೊವ್ ಮತ್ತು ಅಸ್ಸರಗರಕ್ಕೆ ಕಳಿಸಲ್ಪಟ್ಟ ಮೂರು ಸ್ಥಳೀಯ ಸೈನ್ಯದಳಗಳ ಕೊರತೆ ಮತ್ತು ಸೊಲ್ಲಾಪುರಕ್ಕೆ ಕಳಿಸಲ್ಪಟ್ಟ ದಕ್ಷಿಣ ಮಹಾರಾಷ್ಟ್ರ ಪ್ರದೇಶದ ಎರಡು ಸೈನ್ಯದಳಗಳ ಕೊರತೆಯನ್ನು ತುಂಬಿಕೊಡಲಾಗದ ಮದ್ರಾಸ ಸರಕಾರದ ಅಸಹಾಯ ಪರಿಸ್ಥಿತಿ ಇವು ಆ ಭಾಗದಲ್ಲಿ ಸೈನ್ಯದ ಅಭಾವವನ್ನುಂಟುಮಾಡಿ ಗಮನಾರ್ಹವಾದ ತೊಂದರೆಯನ್ನುಂಟು ಮಾಡಿದವು.

ವಿಳಂಬಮಾಡದೆ ಸೊಲ್ಲಾಪುರದಲ್ಲಿರುವ ಸೈನ್ಯದ ಒಂದು ಭಾಗವನ್ನು ಸಾತಾರೆಗೆ ಕಳಿಸುವುದು ಆಗ ಬಹುಮಟ್ಟಿಗೆ ಅವಶ್ಯವೆನಿಸಿತು. ಕಡೆಗಣಿಸಲ್ಪಟ್ಟಿದ್ದ ಆ ಸ್ಥಳವು ಸೈನ್ಯದ ಎರಡು ತುಕಡಿಗಳಿಗಿಂತ ಕಡಿಮೆಯಿಲ್ಲದಷ್ಟು ಸೈನ್ಯವನ್ನು ಯಾವಾಗಲೂ ಹೊಂದಿತ್ತು.

ವಾಯಿದೆ ಮುಗಿದರೆ ಬಂಡಾಯಗಾರರಿಗೆ ಶರಣಾಗತರಾಗಲು ಮನ ಒಲಿಸ ಬೇಕಾದುದಿಲ್ಲ. ದೇಶೀಯ ಸೈನ್ಯವನ್ನು ಮುಂಬೈಯಿಂದ ಡೆಕ್ಕನಕ್ಕೆ ಕಳಿಸಿಕೊಡಬೇಕು ಮತ್ತು ಅದರ ಸ್ಥಳದಲ್ಲಿ ಪೋರ್ತುಗೀಸ್ ಸೈನ್ಯಬಲವನ್ನು ಕರೆತಂದು ಇರಿಸಬೇಕು.

ತೀವ್ರ ಸಂತಾಪವನ್ನು ಸೂಚಿಸುವ ಗವ್ಹರ್ನರರ ಸಂದೇಶದೊಡನೆ ಥ್ಯಾಕರೆಯ ಮರಣದ ವಿಷಯವನ್ನು ಮದ್ರಾಸ ಸರಕಾರಕ್ಕೆ ತಿಳಿಸಬೇಕು. ಅದರಲ್ಲಿ ಗವ್ಹರ್ನರರು ವ್ಯಕ್ತಪಡಿಸಿದ ಶ್ರೇಷ್ಠತಮ ಪ್ರತಿಭೆಯ, ಮಹತ್ವದ ಸಾರ್ವಜನಿಕ ಸೇವೆಮಾಡುವ ಮಹತ್ವಾಕಾಂಕ್ಷೆಯುಳ್ಳ ವ್ಯಕ್ತಿಯು ನಮ್ಮನ್ನಗಲಿದ್ದು – ಆತನು ಸಂಬಂಧಿಸಿದ ಪ್ರದೇಶಕ್ಕೂ ಅವನು ಬಹು ಬೆಲೆಯುಳ್ಳ ಸೇವೆ ಸಲ್ಲಿಸಿದ ಪ್ರದೇಶಕ್ಕೂ ಅತ್ಯಂತ ದುರದೃಷ್ಟಕರವಾದ ನಷ್ಟವಾಗಿದೆ ಎಂಬುದನ್ನು ಉಲ್ಲೇಖಿಸಬೇಕು.

ಮುಂಬಯಿಗೆ ಮರಳಿದೊಡನೆಯೇ ಗವ್ಹರ್ನರನು ಕರ್ನಲ್ ಪಿಯರ್ಸನಿಗೆ ಅಗತ್ಯವಿರುವಷ್ಟು ಸೈನ್ಯವನ್ನು ಕಳಿಸಲು ಕಮಾಂಡರ್ – ಇನ್ – ಚೀಫ್ ಆಗಿರುವ ಸರ್ ಅಲೆಕ್ಸಾಂಡರ್ ಕ್ಯಾಂಬೆಲ್‌ನಿಗೆ ಆದೇಶವಿತ್ತನು. ಅಲ್ಲದೆ ತಮ್ಮ ತಮ್ಮ ಸೈನ್ಯದ ತುಕುಡಿಗಳನ್ನು ಕಿತ್ತೂರಿಗೆ ಕಳಿಸಿಕೊಡಲು ಬಳ್ಳಾರಿ, ಗೂಟಿ, ಬೆಂಗಳೂರು ಮತ್ತು ಅರ್ಕಾಟಗಳ ಸೈನ್ಯಠಾಣೆಗಳಿಗೆ ಸಂದೇಶ ಕಳಿಸಿದನು. ಮೈಸೂರು ಸೈನ್ಯದ ಸುಮಾರು 1,000 ಸಿಲೆದಾರ ಕುದುರೆಗಳನ್ನು ಕಳಿಸಿ ಕೊಡಲು ಮೈಸೂರಿನಲ್ಲಿಯ ಬ್ರಿಟಿಷರ ಪ್ರತಿನಿದಿಯಾದ ಕೋಲೆಯವರಿಗೆ ಕೇಳಿಕೊಳ್ಳಲು ಮುಖ್ಯ ಕಾರ್ಯದರ್ಶಿಗಳವರಿಗೂ ಒಂದು ಸಂದೇಶವನ್ನು ಕೂಡ ಆತನು ಕಳಿಸಿದನು. ಹೈದರಾಬಾದಿನಲ್ಲಿಯ ಬ್ರಿಟಿಷ್ ಪ್ರತಿನಿಧಿಗೂ ಸೈನ್ಯದ ಒಂದು ದಳವನ್ನು ನವ್ಹೆಂಬರ ಮೊದಲನೆಯ ವಾರದಲ್ಲಿ ಕಳಿಸಿಕೊಡಲು ಕೇಳಲಾಯಿತು. ಪಶ್ಚಿಮ ಭಾಗದಿಂದ ಕಿತ್ತೂರಿನ ಮೇಲೆ ದಾಳಿ ಮಾಡುವ ದೃಷ್ಟಿಯಿರಿಸಿಕೊಂಡು ಸೈನ್ಯದ ತುಕುಡಿಗಳನ್ನು ಹೊನ್ನಾವರ ಮತ್ತು ಸದಾಶಿವಗಡಕ್ಕೆ ಕಳಿಸುವಂತೆ ಮಲಬಾರ ಮತ್ತು ಕನ್ನಡ ಜಿಲ್ಲೆಗಳಲ್ಲಿ ಸೈನ್ಯಾಧಿಪತಿಯಾಗಿರುವ ಲೆಫ್ಟನಂಟ್ ಕರ್ನಲ್ ವಾಘ ಅವರಿಗೆ – ಮದ್ರಾಸಕ್ಕೆ – ಪತ್ರಗಳನ್ನೂ ಬರೆಯಲಾಯಿತು. ಈ ಎಲ್ಲ

ವ್ಯವಸ್ಥೆಯನ್ನು ಮಂಗಳೂರಿನಲ್ಲಿ ಮುಖ್ಯ ಕಲೆಕ್ಟರರಾದ ಮಿ.ಟಿ. ಬಾಬಿಂಗ್ಟನ್ ಅವರ ಮುಖಾಂತರ ಮಾಡಲಾಯಿತು.

ಆಮೇಲೆ ನಿಧಾನವಾಗಿ ರಾಣಿ ಚೆನ್ನಮ್ಮ ಮತ್ತು ಆಕೆಯ ಅನುಯಾಯಿಗಳು ಬ್ರಿಟಿಷರೊಂದಿಗೆ ಕಾದಾಡುವುದು ವ್ಯರ್ಥಸಾಹಸವೆಂಬುದನ್ನು ಅರಿಯತೊಡಗಿದರು. ಹಾಗಿದ್ದರೂ ಅವರು ತಮ್ಮ ತತ್ವಕ್ಕೆ ಅಂಟಿಕೊಂಡಿದ್ದರು. ಮತ್ತು ಉಚ್ಚ ಅಧಿಕಾರಿಗಳಿಂದ ಕೆಲವೊಂದು ಆಶ್ವಾಸನೆಗಳು ದೊರೆಯದೆ ಬ್ರಿಟಿಷ್ ಅಧಿಕಾರಿಗಳಿಗೆ ಶರಣುಹೋಗಲು ಒಪ್ಪದವರಾಗಿದ್ದರು. ಎಲ್‌ಫಿನ್‌ಸ್ಟನ್‌ನಿಂದ ಉತ್ತರ ದೊರಕಿದಮೇಲೆ ನವ್ಹೆಂಬರ 4 ನೆಯ ತಾರೀಖಿಗೆ ರಾಣಿ ಚೆನ್ನಮ್ಮನು ತನ್ನ ವಕೀಲ ಶ್ರೀ ಗೋವಿಂದ ಶ್ರೀನಿವಾಸನನ್ನು ಧಾರವಾಡದ ಹಂಗಾಮಿ ಕಲೆಕ್ಟರನಾದ ಮಿ. ಮನ್ರೋ ಅವರ ಕಡೆಗೆ ಖುದ್ದಾಗಿ ಸಂಗತಿಗಳನ್ನು ವಿವರಿಸಲು ಕಳಿಸಿದಳು. ಮರುದಿನ ಶುಭಸಂಕೇತವಾಗಿ ರಾಣಿ ಚೆನ್ನಮ್ಮ ಹಿಂದಿನ ಯುದ್ಧದಲ್ಲಿ ತನ್ನ ಸೆರೆಯಾಳಾಗಿರುವ ನಲವತ್ತು ಜನ ಯುರೋಪಿಯನ್ ಸೈನಿಕರನ್ನು ಬಿಡುಗಡೆಮಾಡಿದಳು. ಈ ಸೈನಿಕರು ಧಾರವಾಡಕ್ಕೆ ಮರಳಿ ಅಲ್ಲಿ ಬೀಡುಬಿಟ್ಟಿದ್ದ ಲೆಫ್ಟನಂಟ್ ಕರ್ನಲ್ ಮೆಕ್‌ಲಾಯಿಡನ ಸೈನ್ಯವನ್ನು ಕೂಡಿಕೊಂಡರು.

ಮನ್ರೋ ಕಾಗದ ಬರೆದು ಸ್ಟೀವನ್ಸನ್ ಹಾಗು ಎಲಿಯಟ್‌ರ ಸ್ಥಿತಿಯನ್ನು ಚಾಪ್ಲಿನ್‌ನಿಗೆ ತಿಳಿಸಿದನು ಮತ್ತು ವಿಷಯವನ್ನು ವಿಕೃತಗೊಳಿಸದಂತೆ ವಿವೇಚನಾಪರನಾಗಿರಬೇಕೆಂದೂ ವಿನಂತಿಸಿಕೊಂಡನು.

ಈ ಮಧ್ಯೆ ಎಷ್ಟು ಸಾಧ್ಯವೋ ಅಷ್ಟು ಜನ ದೇಸಾಯಿಯವರನ್ನು ಮತ್ತು ಅವರ ಅನುಯಾಯಿಗಳನ್ನು ಕಳಿಸಿ, ಕಿತ್ತೂರಿನಲ್ಲಿಯ ದಂಗೆಯನ್ನು ನಿಗ್ರಹಿಸಲು ಅವರಿಂದ ನೆರವು ಪಡೆಯಬೇಕೆಂದು ಎಡಿನ್‌ನಿಗೆ ಚಾಪ್ಲಿನ್‌ನು ತಿಳಿಸಿದನು. ಕಿತ್ತೂರಿನ ಮುಂದಾಳುಗಳನ್ನು ಕಂಡು, ಅವರು ಬ್ರಿಟಿಷರಿಗೆ ಅಧೀನರಾಗಲು ಒಡಂಬಡಿಸುವಂತೆ ಯತ್ನಿಸಲು ಚಾಪ್ಲಿನ್‌ನು ಮನ್ರೋನಿಗೂ ತಿಳಿಸಿದನು.

ಮನ್ರೋ ರಾಣಿ ಚೆನ್ನಮ್ಮನ ಕಾಗದಕ್ಕೆ ಸಪ್ಟೆಂಬರ 7ರಂದು ಉತ್ತರಿಸಿ, ಇಬ್ಬರು ಅಧಿಕಾರಿಗಳ ಬಿಡುಗಡೆ ಮಾಡುವುದರ ಬುದ್ಧಿವಂತಿಕೆಯ ಬಗ್ಗೆ ಸೂಚಿಸಿ ಆಕೆಯ ಮೇಲೆ ಪ್ರಭಾವಬೀರಲು ಯತ್ನಿಸಿದನು. ಉತ್ತರದ ಪೂರ್ತಿ ಪಾಠ ಇಂತಿದೆ:

"ನಿಮ್ಮ ಕಾಗದ ಮುಟ್ಟಿತು. ಅದರ ಅಭಿಪ್ರಾಯ ತಿಳಿಯಿತು. ವೈಷಮ್ಯವನ್ನು ಅಪೇಕ್ಷಿಸುವುದಿಲ್ಲವೆಂಬುದಾಗಿ ನೀವು ಬರೆದಿರುವಿರಿ. ನಿಮ್ಮ ಕೋಟೆಯಲ್ಲಿ ಇಬ್ಬರು ವ್ಯಕ್ತಿಗಳನ್ನು ಬಂಧಿಸಿರುವುದರ ಪ್ರತಿಕ್ರಿಯೆ ಪ್ರತಿದಿನ ತೀಕ್ಷ್ಣವಾಗುತ್ತಲಿದೆ. ಅವರ ನಿರಂತರ ಬಂಧನವು ನಿಮಗೆ ಯಾವ ಲಾಭವನ್ನು ತಂದುಕೊಡುವ ಸಂಭವವಿಲ್ಲವೆಂದು ನಾನು ಖಚಿತವಾಗಿ ಹೇಳಬಲ್ಲೆ. ಈ ಘಟನೆ ಸರಕಾರವನ್ನು ಅಗೌರವಕ್ಕೆ ಗುರಿಮಾಡುವಂತಹದು. ಆ ವ್ಯಕ್ತಿಗಳು ಹಿಂದಿನಿಂದ ನಡೆದ ಕಿತ್ತೂರಿನ ಘಟನೆಗಳೊಂದಿಗೆ ಗಾಢ ಸಂಬಂಧವುಳ್ಳವರು. ಅವರ ಬಿಡುಗಡೆಯಿಂದ – ಸರಕಾರವನ್ನು ಚೆನ್ನಾಗಿಬಲ್ಲ ಅವರಿಂದ – ನಿಮಗೆ ಉಪಯೋಗವಾಗುವುದು. ಅವರು ನಿಮ್ಮ ಪರವಾಗಿ ವಾದಿಸುವರು. ಆದ್ದರಿಂದ ಸರಕಾರದ

ದಯೆಗೆ ನೀವು ಪಾತ್ರರಾಗಲು ಅವರನ್ನು ಬಿಡುಗಡೆ ಮಾಡುವುದೊಂದೇ ಮಾರ್ಗವೆಂದು ಅನಿಸುತ್ತದೆ.

"ಅದಕ್ಕಾಗಿ ಅವರನ್ನು ನನ್ನ ಕಡೆಗೆ ಕಳಿಸಲು ವಿನಂತಿಸುತ್ತೇನೆ. ಮತ್ತು ನಾನು ಕಿತ್ತೂರಿನ ವಿಷಯವಾಗಿ ವಿವರಿಸುವವರೆಗೆ ಹಾಗೂ ನಿಮ್ಮ ಅಪೇಕ್ಷೆಗಳನ್ನು ಸರಕಾರಕ್ಕೆ ತಿಳಿಸಿಕೊಡುವವರೆಗೆ ನಿಮ್ಮ ಕಾರಭಾರಿಗಳು ಕಾಯಬೇಕು. ಇದು ಪ್ರಥಮ ಪ್ರಾಶಸ್ತ್ಯದ ಕೆಲಸ. ಇದು ಅಧಿಕಾರವಿಲ್ಲದ ವ್ಯಕ್ತಿ ಮೂಲಕ ನಿರ್ಧರಿಸುವಂತಹದಲ್ಲ. ಮೂವರು ಇಲ್ಲವೆ ನಾಲ್ವರು ನಿಮ್ಮ ಕಾರಭಾರಿಗಳನ್ನು ಕಳಿಸಿರಿ. ಅವರೊಂದಿಗೆ ವಸ್ತು ಸ್ಥಿತಿಯನ್ನು ಕುರಿತು ಚರ್ಚಿಸುತ್ತೇನೆ. ಅವರ ಅಡ್ಡಬರುವಿಕೆಯಿಂದ ವಿಷಯಗಳನ್ನು ಹೊಂದಿಸಿಕೊಳ್ಳಲು ಬರುವುದಿಲ್ಲ. ಅವರ ಮರಳುವಿಕೆಗೆ ಅಡ್ಡಿಯಿಲ್ಲ. ಅವರನ್ನು ಸುರಕ್ಷಿತವಾಗಿ ಜಹಾಗೀರಿಗೆ ತಿರುಗಿ ಕಳಿಸಿ ಕೊಡಲಾಗುವುದು. ಈ ಬಗ್ಗೆ ನೀವು ಚೆನ್ನಾಗಿ ಬಲ್ಲವರಾಗಿರುವಿರಿ. ಇದಕ್ಕೂ ಹೆಚ್ಚಿಗೆ ನಾನು ಹೇಳುವದೇನಿದೆ?"

ರಾಣಿ ಚೆನ್ನಮ್ಮ ಮತ್ತು ರಾಣಿ ವೀರವ್ವ ನವ್ಹೆಂಬರ್ 12ರಂದು ಒಂದು ಉತ್ತರವನ್ನು ಕಳಿಸಿದರು. ಇದು ರಾಣಿಯ ಪತ್ರಗಳ ಅತ್ಯುತ್ತಮ ಮಾದರಿಯಾಗಿದೆ. ಇದು ಆಕೆಯ ಅದಮ್ಯ ಕೆಚ್ಚು ಹಾಗು ಆತ್ಮಗೌರವಗಳನ್ನು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತದೆ. ಅವುಗಳೊಂದಿಗೆ ಇದು ಆಕೆಯ ರಾಜಕೀಯ ಚಾತುರ್ಯದ ಅನುನಯ ಮತ್ತು ಗಾಂಭೀರ್ಯಗಳನ್ನು ತಿಳಿಸದಿರದು. ಆ ಪತ್ರದ ಕಚ್ಚಾ ಭಾಷಾಂತರ ಹೀಗಿದೆ:

"ನೀವು ಕಳಿಸಿದ ಕಾಗದ ಮುಟ್ಟಿದೆ. ಅದರ ಇಂಗಿತ ವೇದ್ಯವಾಗಿದೆ. ಇಬ್ಬರು ವ್ಯಕ್ತಿಗಳನ್ನು ನಾವು ಕೈದಿಗಳಾಗಿಟ್ಟುಕೊಂಡಿರುವುರಿಂದ ನಮಗಾಗುವ ಅನಾನುಕೂಲತೆಯ ಬಗ್ಗೆ ನಿಮಗೆ ತಿಳಿಯಲಾರದೆಂದೂ ಸರಕಾರದ ಮೇಲೆ ಪ್ರತಿಫಲನಗೊಳಿಸುವ ಪರಣಾಮವೊಂದೇ ಈ ಪರಿಸ್ಥಿತಿಗಿದ್ದದ್ದು ಎಂದೂ ಬರೆದಿರುವಿರಿ. ಇದಕ್ಕೆ ನಾವು ಇಬ್ಬರು ವ್ಯಕ್ತಿಗಳ ಬಂಧನವು ನಮ್ಮ ಸಂಸ್ಥಾನಕ್ಕೆ ಉಪಯುಕ್ತವಾದದ್ದೆಂದು ತಿಳಿಯಬಯಸುತ್ತೇವೆ. ಅವರ ಮೂಲಕ ಹಾಗೂ ಅವರ ಸರಕಾರೀ ಪ್ರತಿನಿಧಿತ್ವದಿಂದ ನಮ್ಮ ಸಂಸ್ಥಾನವನ್ನು ಅದರ ಪ್ರಾಚೀನ ಪದ್ಧತಿಯಂತೆ ಮುಂದುವರಿಸಿಕೊಂಡು ಹೋಗಲು ವ್ಯವಸ್ಥೆಯಾಗಬೇಕಾಗಿದೆ. ಈ ಆಶೆಯಿಂದ ಅವರನ್ನು ಇರಿಸಿಕೊಳ್ಳಲಾಗಿದೆ. ಈ ಪ್ರಕರಣದ ಎಲ್ಲ ವಿಷಯವೂ ಈ ಸದ್ಗೃಹಸ್ಥರಿಗೆ ತಿಳಿದಿದೆ. ಅವರು ಸಂಸ್ಥಾನದ ಕಾರ್ಯಕಲಾಪಗಳನ್ನು ನಡೆಸಕೊಂಡು ಹೊಗುವ ಅಧಿಕಾರವನ್ನು ಪಡೆದು ಥ್ಯಾಕರೆಯವರ ಏಜಂಟರಾಗಿ ನೇಮಿಸಲ್ಪಟ್ಟಿದ್ದಾರೆ.

"ಅವರಿಬ್ಬರ ಬಂಧನವು ಸರಕಾರವನ್ನು ಅಗೌರವದಿಂದ ಕಂಡಂತಾಗುತ್ತದೆಂಬ ನಿಮ್ಮ ಅಭಿಪ್ರಾಯಕ್ಕೆ ನಾವು ಉತ್ತರಿಸುವುದಿಷ್ಟು: ಇದೆಂದೂ ನಮ್ಮ ಅಪೇಕ್ಷೆಯಾಗಿಲ್ಲ. ಅಥವಾ ದೀರ್ಘಕಾಲಿಕವಾದ ನಮ್ಮ ಹಾಗು ಬ್ರಿಟಿಷರೊಂದಿಗಿನ ಸ್ನೇಹ ಸಂಬಂಧವನ್ನು ಕಡೆದುಕೊಳ್ಳುವುದಾಗಿಲ್ಲ. ರಾಜಿ ಮಾಡಿಕೊಳ್ಳುವ ಉದ್ದೇಶದಿಂದ ತಮ್ಮ ಸಾಹೇಬರ(ಮಿ.ಥ್ಯಾಕರೆ) ಅಪೇಕ್ಷೆಯನ್ನು ಯಥಾವತ್ತಾಗಿ ಅನುಸರಿಸಿಯೇ ನಾವು ಈವರೆಗೆ

ನಡೆದುಕೊಂಡಿದ್ದೇವೆ. ಹಾಗಿದ್ದರೂ ಇಂಥ ಪರಿಸ್ಥಿತಿಯನ್ನು ಅವರು ಉಂಟುಮಾಡಿದ್ದಾರೆ. ಇದಕ್ಕೆ ನಮ್ಮ ಬಳಿಯಿರುವ ಪರಿಹಾರವೇನು?

"ಕಾರಭಾರಿಗಳನ್ನು ಸಂದರ್ಶಿಸುವ, ಅವರೊಂದಿಗೆ ಎಲ್ಲ ಕಾರ್ಯವನ್ನು ವ್ಯವಸ್ಥೆಗೊಳಿಸುವ ಮತ್ತು ಅದನ್ನು ಸರಕಾರಕ್ಕೆ ವರದಿ ಮಾಡುವ ಬಗ್ಗೆ ನೀವು ಬಿನ್ನವಿಸಿಕೊಂಡುದಕ್ಕೆ ನಮ್ಮ ಉತ್ತರವಿಷ್ಟು: ನೀವು ಎಲ್ಲ ವಿಷಯವನ್ನೂ ನಿಮ್ಮ ತಿಳುವಳಿಕೆಗೆ ಪತ್ರಗಳ ಮೂಲಕ ತಂದುಕೊಟ್ಟಿದ್ದೇವೆ. ನಮಗೆ ಕಾರಭಾರಿಗಳ ಸುರಕ್ಷಿತತೆಯ ಬಗ್ಗೆ ಶಂಕೆಯಿಲ್ಲ. ಅವರನ್ನು ನಿಮ್ಮೆಡೆಗೆ ಕಳಿಸಿಕೊಡುತ್ತೇವೆ. ನಮ್ಮ ಸಂಸ್ಥಾನದ ಬಗ್ಗೆಯಿರುವ ಪೂರ್ವದ ಸದ್ಭಾವನೆಗಳು ಮುಂದುವರಿಯಲಿ, ಇದಕ್ಕೂ ಹೆಚ್ಚಿಗೆ ನಾವೇನು ಬರೆಯುವುದಿದೆ? ಈ ವಿಷಯದಲ್ಲಿಯೇ ತಾವೀಗ ಮಗ್ನರಾಗಿರುವಿರಿ, ಸರಕಾರವನ್ನು ನೀವು ಪ್ರತಿನಿಧಿಸುತ್ತಿರುವಿರಿ. ಸಂಸ್ಥಾನಕ್ಕೆ ನಿಮ್ಮಿಂದ ಯಾವುದೇ ರೀತಿಯಿಂದ ಪ್ರಯೋಜನವಾಗುವುದೆಂದು ನಾವು ಬಗೆದಿದ್ದೇವೆ. ಈ ಲೆಕ್ಕದ ಮೇಲೆ ನಾವು ಶಂಕೆಗೆ ಒಳಗಾಗಲಾರೆವು. ಗೋವಿಂದ ಶ್ರೀನಿವಾಸರು ಪ್ರತ್ಯಕ್ಷವಾಗಿ ಉಳಿದ ವಿಷಯವನ್ನು ತಿಳಿಸುವರು."

1824 ನವ್ಹೆಂಬರ 14 ನೆಯ ತಾರೀಖಿಗೆ ಹಂಗಾಮಿ ಕಲೆಕ್ಟರನಾಗಿದ್ದ ಮನ್ರೋ ಈ ಕೆಳಗಿನ ತನ್ನ ಟಿಪ್ಪಣಿಯ ಕಾಗದದೊಂದಿಗೆ ಚಾಪ್ಲಿನ್‌ನಿಗೆ ಆ ಕಾಗದವನ್ನು ಕಳಿಸಿಕೊಟ್ಟನು:

> "ಈ ಪತ್ರದಲ್ಲಿ ಒಕ್ಕಣಿಕೆಯನ್ನು ನೋಡಿ ನಾನು ವ್ಯಸನಪಟ್ಟಿದ್ದೇನೆ. ಮ್ಯಾನೇಜರರ ಪ್ರತಿಷ್ಠೆಯ ಮಾತು ಕಿತ್ತೂರಿನ ಕಡೆಗೆ ಹೊರಟ ಸೈನ್ಯವನ್ನು ಕಡಿಮೆ ಮಾಡುವ ವಿಷಯವನ್ನು ಸೂಚಿಸುತ್ತಿದ್ದು, ಅದು ನನಗಿನ್ನೂ ರಕ್ತಪಾತವನ್ನೇ ಸೂಚಿಸುವಂತೆ ತೋರುತ್ತದೆ. ಈ ಪತ್ರದ ಜೊತೆಗಿರುವ ಕಾಗದ ಕಳೆದ ದುರದೃಷ್ಟಕರ ಘಟನೆಗಳ ಬಗ್ಗೆ ಸಂಚುಗಾರರ ಮುಖಂಡನ ಭಾವನೆ ಏನೆಂಬುದನ್ನು ವ್ಯಕ್ತಪಡಿಸುತ್ತದೆ. ಅದರಿಂದ ನಾವು ನಮ್ಮ ಕೋರಿಕೆಯನ್ನು ಈಡೇರಿಸಿಕೊಳ್ಳುವುದನ್ನು ನಿರೀಕ್ಷಿಸಲಾಗದು. ಅವರು ಹೇಗಿದ್ದಾರೆಂಬುದನ್ನು ನೆನಪಿನಲ್ಲಿಡಬೇಕು. ನಾಲ್ವರು ಪ್ರಮುಖ ಅಧಿಕಾರಿಗಳ ಸೇವೆಯನ್ನು ನಷ್ಟಗೊಳಿಸಿದ ಅವರ ಕಾರ್ಯವು ಮರೆತು ಬಿಡುವಂತಹದಾಗಿಲ್ಲ. ಕಾರಕೂನನೊಂದಿಗೆ ನಾನು ಸಂಭಾಷಣೆ ಬೆಳೆಸಲಿಲ್ಲ. ಯಾಕೆಂದರೆ ಅವರ ಕಾಗದದಲ್ಲಿ ಎಲ್ಲ ವಿಷಯವೂ ಇದೆಯೆಂದೂ ಅದನ್ನೇ ತಾನು ತಿಳಿಸುವುದಾಗಿಯೂ ಆತನು ಹೇಳಿದನು. ಕಾಗದ ತಂದ ಅವನಿಗೆ ಕಾಗದದ ಬಗ್ಗೆ ನಾನೇನೂ ಉತ್ತರಿಸಲಿಲ್ಲ. ಮ್ಯಾನೇಜರನಿಗೆ ಸಂಬಂಧಿಸಿದ ಹೆಚ್ಚಿನ ದೂರಿನ ವ್ಯವಸ್ಥೆಗಾಗಿ ಮನವೊಲಿಸುವ ಕಾರ್ಯದಲ್ಲಿ ನಾವಿನ್ನೂ ತೊಡಗಿರುವಾಗ, ಆ ಕಾಗದಕ್ಕೆ ಉತ್ತರಿಸಿದರೆ ನಮ್ಮ ಸಂಧಿಕಾರ್ಯ ವ್ಯರ್ಥಗೊಳಿಸಿದಂತಾಗುತ್ತಿತ್ತು."

ಈ ಕಾಗದ ಚಾಪ್ಲಿನ್‌ನನ್ನು ರೇಗಿಸಿದ್ದು ಅಷ್ಟಿಷ್ಟು ಪ್ರಮಾಣದ್ದಾಗಿರಲಿಲ್ಲ. ಅವನು ಸ್ವತಃ ಮುಂಬಯಿಗೆ ತೆರಳಿದನು, ಗವ್ಹರ್ನರ ಎಲ್‌ಫಿನ್‌ಸ್ಟನ್‌ರೊಂದಿಗೆ ಚರ್ಚಿಸಿದನು. ಎಲ್‌ಫಿನ್‌ಸ್ಟನ್‌ರು ಈತನಿಗೆ ಬೆಳಗಾವಿಗೆ ತೆರಳಿ, ಅಲ್ಲಿಯ ಪರಿಸ್ಥಿತಿಯನ್ನು ಹತ್ತಿರದ

ಮೂಲಗಳಿಂದ ಅಧ್ಯಯನ ಮಾಡಲು ತಿಳಿಸಿದರು ಮತ್ತು ಬಂಡಾಯಗಾರರನ್ನು ಹತ್ತಿಕ್ಕಲು ಅವಶ್ಯವಾದ ಕ್ರಮವನ್ನು ಕೈಕೊಳ್ಳಲೂ ಹೇಳಿದರು. ಬ್ರಿಟಿಷ್ ಸೈನ್ಯ ಸಂಪೂರ್ಣ ಸುಸಜ್ಜಿತವಾಗಿ ಸಿದ್ಧವಾದೊಡನೆ ಕಿತ್ತೂರಿಗೆ ಮುತ್ತಿಗೆ ಹಾಕಬೇಕೆಂಬ ನಿರ್ಣಯಕ್ಕೂ ಅವರಿಬ್ಬರು ಬಂದರು. ಈ ಮಧ್ಯೆ ಸಂಸ್ಥಾನಕ್ಕೆ ನ್ಯಾಯವಾದ ಹಕ್ಕುದಾರರಿಲ್ಲದ್ದರಿಂದ ಕಿತ್ತೂರ ದೇಶಗತಿಯನ್ನು ಬ್ರಿಟಿಷರ ಪ್ರದೇಶಕ್ಕೆ ಕೊನೆಯದಾಗಿ ಸೇರಿಸಿಕೊಳ್ಳಲಾಗುವುದೆಂಬ ವಿಷಯವನ್ನು ದಕ್ಷಿಣದ ದೇಸಾಯಿಯವರ ಮತ್ತು ಜಹಾಗೀರದಾರರ ಗಮನಕ್ಕೆ ತರಬೇಕೆಂದರು. ಈ ಮೊದಲು ನಿರ್ಣಯಿಸಿದಂತೆ ಸರದಾರ ಗುರುಸಿದ್ದಪ್ಪನನ್ನು ಹೊರತುಪಡಿಸಿ ಉಳಿದೆಲ್ಲ ಬಂಡಾಯಗಾರರಿಗೆ ಕ್ಷಮಾಪಣೆ ನೀಡಲು ಚಾಪ್ಲಿನ್‌ನಿಗೆ ತಿಳಿಸಲಾಯಿತು.

ಈ ನಿರ್ಣಯದ ಕಾರ್ಯಾಚರಣೆಗಾಗಿ ಎಲ್ಲ ದಿಕ್ಕುಗಳಿಂದ ಸೈನ್ಯವು ಕಿತ್ತೂರಿನ ಕಡೆಗೆ ನುಗ್ಗುವುದು ಅವಶ್ಯವಾಗಿತ್ತು. ಈ ಎಲ್ಲ ಸಲಹೆಗಳೊಂದಿಗೆ ಚಾಪ್ಲಿನ್‌ನು ಆಗ ಮುಂಬಯಿ ಮತ್ತು ಪುಣೆಗಳಲ್ಲಿ ಲಭ್ಯವಿರುವ ಬ್ರಿಟಿಷ್ ಸೈನ್ಯದ ದಳಗಳನ್ನು ಸಂಗಡ ಕರೆದುಕೊಂಡು, ಹೆಚ್ಚಿನ ಸೈನ್ಯವನ್ನು ತಮಗೆ ಅಧೀನರಾಗಿರುವ ಜಹಾಗೀರದಾರರಿಂದ ಕಲೆಹಾಕುವ ಉದ್ದೇಶವಿರಿಸಿಕೊಂಡು 1824 ನವ್ಹೆಂಬರ 17 ರಂದು ಮುಂಬಯಿಯಿಂದ ಬೆಳಗಾವಿಗೆ ಹೊರಟನು.

ನವ್ಹೆಂಬರ ಮೂರನೆಯ ವಾರದಲ್ಲಿ ರಾಣಿ ಚೆನ್ನಮ್ಮನ ಜನರು ಬ್ರಿಟಿಷ್ ಸೈನ್ಯದ ಈ ಚಲನವಲನಗಳನ್ನು ತಿಳಿದುಕೊಂಡರು. ಕಿತ್ತೂರ ಕೋಟೆಯನ್ನು ಧ್ವಂಸಗೊಳಿಸಲು ವೆಂಗುರ್ಲಾದಿಂದ ಫಿರಂಗಿದಳ ಹೊರಟಿರುವುದನ್ನು ಅವರು ಕೇಳಿ ತಿಳಿದರು. ನಿರಾಶಾದಾಯಕ ಭಾವವು ಅವರನ್ನು ಆವರಿಸತೊಡಗಿತು. ಹಾಗಿದ್ದರೂ ಕೂಡ ಅವರು ಕಿತ್ತೂರನ್ನು ರಕ್ಷಿಸಲು ಸಾಧ್ಯವಿದ್ದಷ್ಟು ದೊಡ್ಡ ಸೈನ್ಯವನ್ನು ಕಲೆಹಾಕುವ ಕಷ್ಟಸಾಧ್ಯವಾದ ಪ್ರಯತ್ನದಲ್ಲಿ ತೊಡಗಿದರು.

ಅದೇ ಹೊತ್ತಿಗೆ ಕೊಲ್ಲಾಪುರದ ರಾಜನು ಕಿತ್ತೂರಿಗೆ ನೆರವು ನೀಡುವ ಕುರಿತು ಆಲೋಚಿಸುತ್ತಿದ್ದನು. ದೂರದೃಷ್ಟಿಯುಳ್ಳ ಅವನು ಮುಂಬಯಿಯಿಂದ ಬೆಳಗಾವಿಗೆ ಹೋಗುವಾಗ ಕೊಲ್ಲಾಪುರದ ಮೇಲಿಂದಲೇ ಹಾಯ್ದು ಹೋದ ಚಾಪ್ಲಿನ್‌ನನ್ನು ಭೆಟ್ಟಿಯಾಗಲಿಲ್ಲ. ಆತನು ತಾನು ಕಾಹಿಲೆಯಾಗಿರುವುದಾಗಿ ನೆಪಹೇಳಿದನು. ಆದರೆ ತನ್ನ ಅಧಿಕಾರಿಗಳನ್ನು ಕಮಿಶನರರನ್ನು ಭೆಟ್ಟಿಯಾಗಲು ಹಾಗು ಉಪಚರಿಸಲು ಕಳಿಸಿಕೊಟ್ಟನು. ಅವನ ನಿಜವಾದ ಕಾರಣ ಬೇರೆಯಾಗಿತ್ತು. ಆತನು ಕೊನೆಯ ಗಳಿಗೆಯಲ್ಲಿ ಕಿತ್ತೂರಿನ ಬಂಡಾಯಗಾರರೊಂದಿಗೆ ಕೂಡಿಕೊಂಡು ಬ್ರಿಟಿಷರನ್ನು ನಾಶಮಾಡುವ ಉದ್ದೇಶದಿಂದ, ತನ್ನ ಸೈನ್ಯದೊಂದಿಗೆ ಸಾಧ್ಯವಿದ್ದಷ್ಟೂ ಕಿತ್ತೂರಿನ ಸಮಿಪಕ್ಕೆ ಹೋಗಲು ಬಯಸಿದ್ದನು. ಚಾಪ್ಲಿನ್‌ನಿಗೆ ಭೆಟ್ಟಿಯಾಗಿ ಮಾತಾಡುವದರಿಂದ ಅವನಿಗನುಕೂಲವಾಗುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆಯಿತ್ತು. ಅದಕ್ಕೆಂದೇ ಅವನನ್ನು ಭೆಟ್ಟಿಯಾಗಲಿಲ್ಲ. ಚಾಪ್ಲಿನ್‌ನು

ಕೊಲ್ಲಾಪುರ ಬಿಟ್ಟೊಡನೆಯೇ ಅರಸನು 5,000 ಕಾಲ್ದಳ, 1,000 ಅಶ್ವದಳ ಹಾಗೂ 7 ಗನ್ನುಗಳೊಂದಿಗೆ ಹೊರಟನು. ಯಮಕನಮರಡಿ ಸಮೀಪ ಪಾಳೆಯ ಹಾಕಲು ಬಂದುಬಿಟ್ಟನು. ಅಲ್ಲಿಂದ ಚಾಪ್ಲಿನ್‌ನಿಗೆ ಭೆಟ್ಟಿಯಾಗಬಯಸಿದುದಾಗಿ ಹೇಳಿಕಳಿಸಿದನು. ಆದರೆ ಅವನು ಚಾಣಾಕ್ಷನಾಗಿದ್ದುದರಿಂದ ಅರಸನ ಮಾತಿಗೆ ಮರುಳಾಗಲಿಲ್ಲ. ಅವನು ತನಗೆ ಭೆಟ್ಟಿಯಾಗಲು ಸಮಯವಿಲ್ಲವೆಂದೂ ಮತ್ತು ಭೆಟ್ಟಿಗೆ ಬರಬೇಕಾದ ಅಗತ್ಯವಿಲ್ಲವೆಂದೂ ಕೂಡಲೇ ಉತ್ತರಿಸಿದನು. ಆದಾಗ್ಯೂ ಅರಸನು ಮನೋಳಿಗೆ ಬಂದು, ಅಲ್ಲಿ ಬೀಡುಬಿಟ್ಟು ಮುಂದಿನ ಬೆಳವಣಿಗೆಯನ್ನು ನಿರೀಕ್ಷಿಸತೊಡಗಿದನು.

ಚಾಪ್ಲಿನ್‌ನು ಕೆಲವು ಸ್ಥಳಗಳಲ್ಲಿ ವಸತಿ ಮಾಡಿದನು. ಬ್ರಿಟಿಷರಿಗೆ ನಿಷ್ಠರಾಗಿರುವ ಕೆಲವು ದಕ್ಷಿಣದ ಅಧಿಪತಿಗಳಿಗೆ ಹೇಳಿಕಳಿಸಿದನು. ಅವರ ಸೈನ್ಯಗಳನ್ನು ಕಲೆಹಾಕಿ, ಬೆಳಗಾವಿಗೆ ಹೊರಟನು. ದಕ್ಷಿಣದ ಅಧಿಪತಿಗಳಲ್ಲಿ ಸಾಂಗ್ಲಿಯ ಪಟವರ್ಧನ, ಜಮಖಂಡಿ ಹಾಗೂ ಮುಧೋಳದ ಅರಸರು ಮತ್ತಿತರರು ಇದ್ದರು. ಅವನು ಬೆಳಗಾವಿಗೆ ನವ್ಹೆಂಬರ 22 ನೆಯ ತಾರೀಖಿಗೆ ಬಂದು ಮುಟ್ಟಿದನು.

ಆಗ ಗವ್ಹರ್ನರರಾಗಿದ್ದ ಎಲ್‌ಫಿನ್‌ಸ್ಟನ್ ಬಂಡಾಯಗಾರರಿಗೆ ಕ್ಷಮಾದಾನವೀಯಲು ಘೋಷಿಸಲಾಗುವ ಜಾಹೀರನಾಮೆಯ ಬರೆವಣಿಗೆಯಲ್ಲಿ ಅವಶ್ಯವೆನಿಸಬಹುದಾದ ಬದಲಾವಣೆಗಳನ್ನು ಮಾಡಿಕೊಳ್ಳಲು ಚಾಪ್ಲಿನ್‌ನಿಗೆ ಅಧಿಕಾರವೀಯಲು ನಿರ್ಧರಿಸಿದರು ಮತ್ತು ಪರಿಸ್ಥಿತಿಯು ಗಂಭೀರವಾಗಿದ್ದರೆ ಮಾರ್ಶಲ್ ಲಾ ಕೂಡ ಜಾರಿಗೆ ತರಲು ಅವನಿಗೆ ಅಧಿಕಾರ ಕೊಟ್ಟರು. ಗವ್ಹರ್ನರರ ಆಜ್ಞೆಯನ್ನು ತಿಳಿಯಪಡಿಸುವ ಚಾಪ್ಲಿನ್‌ನ ಕಾರ್ಯದರ್ಶಿಯಾದ ನ್ಯೂನ್‌ಹ್ಯಾಮ್‌ನು ಬರೆದ – ನವ್ಹೆಂಬರ 22 ನೆಯ ತಾರೀಖಿನ ಕಾಗದ ಹೀಗಿದೆ:

"ಕಿತ್ತೂರಿಗೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲಿ ಸದ್ಯಕ್ಕೆ ನಿಮ್ಮ ನಡತೆಯ ನಿಬಂಧನೆಯ ಕಾಯಿದೆಗಳನ್ನು ಗೊತ್ತುಪಡಿಸುವ ಕಾನೂನಿನ ಕರಡು ಲೇಖನ ಮಾನ್ಯ ಗವ್ಹರ್ನರರಿಂದ ಬಂದಿದೆ. ಬಂಡಾಯಗಾರರ ನಿಜವಾದ ನಡವಳಿಕೆಯ ಪರಿಚಯ ನಿಮಗೆ ಚೆನ್ನಾಗಿರುವುದ ರಿಂದ ಅವರಿಗೆ ಮಂಜೂರ ಮಾಡಬೇಕಾದ ನಿಯಮಗಳಲ್ಲಿ, ನಿಮಗೆ ಅವಶ್ಯವೆನಿಸಿದರೆ ಮಾರ್ಪಡಿಸಕೊಳ್ಳಬೇಕೆಂದು ತಿಳಿಸಲು ನನಗೆ ಆದೇಶವಿತ್ತಿದ್ದಾರೆ. ನಿಮಗೆ ಉಚಿತವೆನಿಸಿದಂತೆ ಕಾನೂನಿನ ಕರಡು ಲೇಖನದ ಅಂತಃಸತ್ವಕ್ಕೆ ಹೊಂದುವಂತೆ ಬದಲಾವಣೆ ಮಾಡಿಕೊಳ್ಳುವ ಅಧಿಕಾರವನ್ನು ಗವ್ಹರ್ನರರು ನಿಮಗೆ ದಯಪಾಲಿಸಿದ್ದಾರೆ.

"ಮಾರ್ಶಲ್ ಲಾವನ್ನು ಜಾರಿಗೊಳಿಸುವಂಥ ಪರಿಸ್ಥಿತಿಯ ನಿರ್ಮಾಣವಾಗಿದ್ದುದು ನಿಮಗೆ ಕಂಡುಬಂದರೆ ಅದನ್ನು ಜಾರಿಗೊಳಿಸಲು ಈ ಮೂಲಕ ಗವ್ಹರ್ನರರು ನಿಮಗೆ ಅನುಮತಿಯಿತ್ತಿದ್ದಾರೆ. ಈ ಸಂಬಂಧವಾಗಿ ನಿಮ್ಮ ಮಾಹಿತಿಗಾಗಿ ಹಾಗೂ ಮಾರ್ಗ ದರ್ಶನಕ್ಕಾಗಿ ಈ ಸರಕಾರದ ಅಧೀನದಲ್ಲಿರುವ ಹಳೆಯ ಪ್ರದೇಶಗಳಿಗೆ ಅನ್ವಯವಾಗುವ ಕ್ರಿ.ಶ.1820ರ ಕಾಯಿದೆ ನಂ.1 ರ ಒಂದು ಪ್ರತಿಯನ್ನು ನಿಮಗೆ ಕಳಿಸಲು ಅವರು ತಿಳಿಸಿದ್ದಾರೆ."

ಸಂಧಾನಗಳು ನಡೆದಿರುವಾಗಲೂ ಬ್ರಿಟಿಷರು ತಮ್ಮ ಯುದ್ಧ ಸಿದ್ಧತೆಯನ್ನು ಸಡಿಲುಗೊಳಿಸಿರಲಿಲ್ಲ. ಆದಾಗ್ಯೂ ಯುದ್ಧ ಚಟುವಟಿಕೆಗಳು ನಿಲ್ಲಿಸಲ್ಪಡಬೇಕೆಂಬ ವಿಷಯ ಹೇಗೋ ಗೊತ್ತಾಯಿತು. ಕರ್ನಲ್ ಮೆಕ್‌ಲಾಯಿಡನ ನೇತೃತ್ವದಲ್ಲಿ ಬ್ರಿಟಿಷ್ ಪಡೆಗಳು ಕಿತ್ತೂರಿನ ಪೂರ್ವಕ್ಕೆ ಸುಮಾರು ಆರುಮೈಲು ದೂರವಿರುವ ತಡಕೋಡ ಗ್ರಾಮಕ್ಕೆ ಹೊದವು ಮತ್ತು ಅಲ್ಲಿ ಅವು ಬೀಡು ಬಿಟ್ಟವು. ಕಿತ್ತೂರಿನ ಕೋಟೆಯು ಬಹಳ ಗಟ್ಟಿಮುಟ್ಟಾದದ್ದೆಂದು ತಿಳಿದುಕೊಂಡಿದ್ದ ಕರ್ನಲ್ ಪಿಯರ್ಸನು, ಕೋಟೆಯನ್ನು ಭೇದಿಸಲು ಫಿರಂಗಿಯ ದಳ ಅವಶ್ಯವೆಂದು ಭಾವಿಸಿದನು. ಅದಕ್ಕಾಗಿ ಫಿರಂಗಿ ದಳದ ಅಧಿಕಾರಿಯಾಗಿದ್ದ ಮದ್ರಾಸಿನ ಕರ್ನಲ್ ಸೀಲಿ ಅವರಿಗೆ, ಅದನ್ನು ಕಿತ್ತೂರಿಗೆ ಕಳಿಸಕೊಡುವ ವ್ಯವಸ್ಥೆಮಾಡಲು ಆಜ್ಞೆಯಿತ್ತನು. ಕರ್ನಲ್ ಪಿಯರ್ಸನು ತೀವ್ರ ಕಾಯಿಲೆಗೆ ಒಳಗಾದನು. ಅದಕ್ಕಾಗಿ ಸೊಲ್ಲಾಪುರದಲ್ಲಿದ್ದ ಕರ್ನಲ್ ಡಿಕನ್‌ನು ಅವನ ಸ್ಥಳಕ್ಕೆ ನೇಮಿಸಲ್ಪಟ್ಟನು. ಕರ್ನಲ್ ಸೀಲಿ 24ನೆಯ ತಾರೀಖಿನಂದು ಬೆಳಗಾವಿಗೆ ಬಂದನು. ಮತ್ತು ಅಂದೇ ಫಿರಂಗಿ ದಳವನ್ನು ಎಳೆದುಕೊಂಡು ಬರಲು ತಕ್ಕ ಸಂಖ್ಯೆಯ ಭಾರ ಎಳೆಯುವ ಎತ್ತುಗಳೊಡನೆ ಹಿಂದಿರುಗಿದನು. ಆ ಫಿರಂಗಿ ದಳವನ್ನು ಕಿತ್ತೂರಿನ ಪಶ್ಚಿಮಘಟ್ಟದ ಆಚೆಕಡೆಗೆ ತರಬೇಕಾಗಿತ್ತು. ಬೆಳಗಾವಿಯಲ್ಲಿ ಬೀಡುಬಿಟ್ಟಿದ್ದ ಚಾಪ್ಲಿನ್‌ನು ಈ ಬೆಳವಣಿಗೆಯನ್ನು ನ್ಯೂನ್‌ಹ್ಯಾಮನಿಗೆ ತನ್ನ 24 ನೆಯ ನವ್ಹೆಂಬರ್ 1824ರ ಕಾಗದದಲ್ಲಿ ವರದಿಮಾಡಿದನು:

"ನಿನ್ನೆ ನಿಮ್ಮೊಂದಿಗೆ ಮಾತನಾಡಿದನಂತರ ಕೆಲವು ಕಾರಣಗಳಿಂದ ಅಧಿಕೃತವೆಂದು ನಾನು ನಂಬುವಂಥ ವರದಿಗಳು ಕಿತ್ತೂರಿನಿಂದ ಬಂದಿವೆ. ಒಬ್ಬರು ಲೆಕ್ಕಮಾಡಿದಂತೆ 1,000 ಜನರ, ಮೂರು ಸೇನಾಪಡೆಗಳು ಕೋಟೆಯಿಂದ ಹೊರಗೆ ಕಳಿಸಲ್ಪಟ್ಟಿವೆ. ಅವುಗಳ ಉದ್ದೇಶ ತಮಗೆ ಎದುರಾಗುವ ನಮ್ಮ ಸೈನ್ಯವನ್ನು ಅಡ್ಡಗಟ್ಟುವುದು ಮತ್ತು ನಾಶಗೊಳಿಸುವುದು ಹಾಗೂ ದೇಶವನ್ನು ಪ್ರಕ್ಷುಬ್ಧಗೊಳಿಸುವದಾಗಿದೆಯೆಂದು ತಿಳಿದು ಬಂದಿದೆ. ಆದರೆ ಈ ಬುದ್ಧಿವಂತಿಕೆ ನಡೆಯಲಾರದೆಂಬ ಭರವಸೆ ನನಗಿದೆ.

"2. ಇಂದು ಬೆಳಗಿನಲ್ಲಿ ಕರ್ನಲ್ ಸೀಲಿ ಅವರ ಸೇನಾಪಡೆ ವೆಂಗುರ್ಲಾದಿಂದ ಇಲ್ಲಿಗೆ ಬಂದಿದೆ. ಅವರು ತಮ್ಮೊಂದಿಗೆ ತಂದ ಎತ್ತುಗಳ ನೆರವಿನಿಂದ ಫಿರಂಗಿಯ ದಳವನ್ನು ಕಿತ್ತೂರಿಗೆ ಕಳಿಸಿಕೊಡುವಲ್ಲಿ ಇನ್ನು ವಿಲಂಬವಾಗದು. ಒಂದು ಪ್ರಯಾಣದಲ್ಲಿ ಎಳೆದುಕೊಂಡು ಹೋಗುವಷ್ಟು ಎತ್ತುಗಳಿಲ್ಲದ್ದರಿಂದ ಎರಡು ಪ್ರಯಾಣಗಳಲ್ಲಿ ಅದು ಸಾಗಿಲ್ಪಡುತ್ತದೆ. ಅಗತ್ಯವೆನಿಸಿದರೆ ಬಂಡಾಯಗಾರರೊಂದಿಗೆ ಅತ್ಯಂತ ಪರಿಣಾಮಕಾರಿ ಕ್ರಮ ತೆಗೆದುಕೊ ಳ್ಳುವ ನಿರ್ದಿಷ್ಟ ಸಮಯದಲ್ಲಿ, ವಿಲಂಬಮಾಡದೆ ಮಾನ್ಯ ಗವ್ಹರ್ನರರ ಕಟ್ಟಳೆಯಲ್ಲಿ ನಿರ್ದೇಶಿಸಿದಂಥ ಜಾಹೀರನಾಮೆಯನ್ನು ಅವರಿಗೆ ಮುಟ್ಟಿಸುವೆ.

"3. ಮಿ.ಸ್ಟಿವನ್ಸನ್ ಮತ್ತು ಮಿ. ಇಲಿಯಟ್ ಇವರ ಸೆರೆಮನೆ ವಾಸವನ್ನು ಕಳೆದ ನಾಲ್ಕು ದಿನಗಳಲ್ಲಿ ಹೆಚ್ಚಿಸಲಾಗಿದೆ. ಕಿತ್ತೂರಿನ ಪೂರ್ವಕ್ಕೆ ಸುಮಾರು ಆರುಮೈಲು ಅಂತರದಲ್ಲಿ ನಮ್ಮ ಸ್ವಾಧೀನದಲ್ಲಿರುವ ತಡಕೋಡ ಗ್ರಾಮದಲ್ಲಿ ಕರ್ನಲ್ ಮೆಕ್‌ಲಾಯಿಡ್‌ನ ಸೈನ್ಯ ಬೀಡು ಬಿಟ್ಟಿದ್ದರಿಂದ ತೋರಿಕೆಗಾಗಿ ಅವರಿಗೆ ಈ ಕ್ರಮವನ್ನು ಅನುಸರಿಸುವುದು ಅವಶ್ಯವಾಯಿತು.

"4. ಕಿತ್ತೂರಿನಿಂದ ಒಬ್ಬ ವಕೀಲನು ನನ್ನ ಕಡೆಗೆ ಕಳಿಸಲ್ಪಡುವನೆಂದು ತಿಳಿದಿದೆ. ಈ ಸುದ್ದಿ 20ನೆಯ ತಾರೀಖಿನಿಂದ ಗೊತ್ತಾಗಿದೆಯಾದರೂ ಈವರೆಗೆ ಯಾರೂ ನನ್ನ ಕಡೆಗೆ ಬಂದಿಲ್ಲ."

ಯೋಜನೆಯನ್ವಯ ಎಲ್ಲ ಬ್ರಿಟಿಷ್ ಸೈನ್ಯಪಡೆಗಳು ಅಲ್ಲಿಗೆ ಬಂದವು ಮತ್ತು 1824 ನವ್ಹೆಂಬರ 25ಕ್ಕೆ ಎಲ್ಲ ಸಿದ್ಧತೆಯೂ ಪೂರ್ಣಗೊಂಡಂತಾಯಿತು. ಖಾನಾಪುರದಲ್ಲಿಯ ನೇತೃತ್ವ ವಹಿಸಲು ಮದ್ರಾಸಿನ ಲೆಫ್ಟನಂಟ್ ಕರ್ನಲ್ ವಾಕರ್‌ನನ್ನು ನೇಮಿಸಲಾಯಿತು. ಖಾನಾಪುರವು ಬ್ರಿಟಿಷರ ಅಧೀನದಲ್ಲಿತ್ತು. ಬೆಳಗಾವಿಯಲ್ಲಿಯ ಸೈನ್ಯದ ಅಧಿಪತ್ಯವನ್ನು ಮೆಜರ್ ಟ್ರಿವನ್ಸನ್ ವಹಿಸುವವನಾಗಿದ್ದನು. ಮೂರು ಕಡೆಗಳಿಂದ ಮೂರು ಕವಲಾಗಿರುವ ಬಿಗಿಯಾಗಿ ಹಿಡಿದುಕೊಳ್ಳುವ ಸಾಧನೆಯ ಬ್ರಿಟಿಷರ ತಂತ್ರವು ರೂಪಿಸಲ್ಪಟ್ಟಿತು. ಬೆಳಗಾವಿಯಿಂದ ಉತ್ತರದ ಕಡೆಯಿಂದ, ಧಾರವಾಡದಿಂದ ತಡಕೋಡ ಮೂಲಕ(ಕಿತ್ತೂರಿನಿಂದ 10 ಕಿ.ಮೀ. ಅಂತರದಲ್ಲಿ ತಡಕೋಡದಲ್ಲಿ ಕರ್ನಲ್ ಮೆಕ್‌ಲಾಯಿಡ್ ನೇತೃತ್ವದಲ್ಲಿ ಬೀಡುಬಿಟ್ಟಿದ್ದ ಸೈನ್ಯದ ಮೂಲಕ) ಆಗ್ನೇಯ ದಿಕ್ಕಿನಿಂದ ಮತ್ತು ಖಾನಾಪುರದ ಪಶ್ಚಿಮ ದಿಕ್ಕಿನಿಂದ ಸೈನ್ಯ ಪಡೆಗಳು ಏಕಕಾಲಕ್ಕೆ ಕಿತ್ತೂರಿಗೆ ಹೊರಡಲು ಮತ್ತು ಮೂರೂ ಕಡೆಯಿಂದ ಮುತ್ತಿಗೆ ಹಾಕಲು ಸಿದ್ಧವಾಗಿದ್ದವು. ಬೆಳಗಾವಿಯ ಹೆಡ್‌ಕ್ವಾರ್ಟರ್‍ಸ ಫೀಲ್ಡ ಫೋರ್ಸು ದುಆಬದ ಅಸಿಸ್ಟಂಟ್ ಕ್ವಾರ್ಟರ್ ಮಾಸ್ತರ್ ಜನರಲ್‌ರಾಗಿದ್ದ ಮಿ. ಅಯ್. ಅಯ್. ಓ. ಡೋನೋಝು ಅವರಿಂದ ಸೈನ್ಯ ಚಲಾವಣೆಯ ವಿವರವಾದ ಸಲಹೆಗಳು ಬಂದವು. ಆ ಸಲಹೆಗಳು ಈ ಕೆಳಗಿನಂತಿದ್ದವು:

"ಖಾನಾಪುರದಲ್ಲಿಯ ಸೈನ್ಯದ ನೇತೃತ್ವ ವಹಿಸಿ ಬಂದಮೇಲೆ, ಗರಗಿನಲ್ಲಿ ಸೈನ್ಯಾಧಿಕಾರಿಯಾದ ಲೆಫ್ಟನಂಟ ಕರ್ನಲ್ ಮೆಕ್‌ಲಾಯಿಡ್‌ನ ಆಜ್ಞೆಯಂತೆ ಹಿರಿಯ ಅಧಿಕಾರಿ ನಿಮ್ಮನ್ನು ಕೂಡಿಕೊಳ್ಳುವನು. ಬೆಳಗಾವಿ ಮತ್ತು ಧಾರವಾಡದಿಂದ ಬಂದ ಸೈನ್ಯಗಳೊಂದಿಗೆ ಕೂಡಿಕೊಂಡು ಮಾರ್ಜನ್ನಿನಲ್ಲಿ ವಿವರಿಸಿದಂತೆ ಪೂರ್ತಿಯಾಗಿ ಕಿತ್ತೂರಿನ ಮೇಲೆ ಏಕಕಾಲಕ್ಕೆ ನೀವು ದಾಳಿಮಾಡಬೇಕು. ಅದರಿಂದ ಒಂದು ಕ್ಷೇತ್ರಮಾನದಲ್ಲಿ ಕಿತ್ತೂರಿನ ಕೋಟೆಯನ್ನು ಪೂರ್ಣವಾಗಿ ಮುತ್ತಿಗೆ ಹಾಕಬಲ್ಲಿರಿ. ಹೀಗೆ ಮಾಡುವುದರಿಂದ ನೀವು ಪ್ರಥಮಘಟ್ಟದ ಮಹತ್ವದ ವಿಷಯವಾಗಿ ಕಿತ್ತೂರಿನಿಂದ ಮತ್ತು ಪಶ್ಚಿಮ ಅಡವಿಯ ಕೋಟೆಯ ಕಡೆಯಿಂದ ಪಾರಾಗಿ ಹೋಗುವ ಬಂಡಾಯಗಾರರನ್ನು ಪ್ರತಿಬಂಧಿಸುವುದನ್ನು ಸಾಧಿಸುವಿರಿ. ಹಾಗೆಯೇ ಬಂಡಾಯಗಾರರ ಕುಟುಂಬದಿಂದ ಕೂಡಿದ ಸುತ್ತಲಿನ ಹಳ್ಳಿಗಳಿಂದ ಹಾಗು ಶಮಶೇರಘರ ಕೋಟೆಯಿಂದ ಪಾರಾಗುವವರನ್ನು ತಡೆಯುವಿರಿ. ನಿಮ್ಮ ಕಾರ್ಯದ ಈ ಭಾಗವನ್ನು ಅಶ್ವದಳಗಳಿಂದ ಚೆನ್ನಾಗಿ ನಿರ್ವಹಿಸಬಹುದು ಮತ್ತು ಅವರ ತ್ವರಿತಗತಿಯ ಚಲನವಲನಗಳನ್ನು ಸುವ್ಯವಸ್ಥಿತವಾಗಿ ಅಣಿಗೊಳಿಸಿದ ಕಾಲ್ದಳದ ಸಹಾಯದಿಂದ ನಿರ್ಬಂಧಿಸಬಹುದು.

"ಇದಲ್ಲದೆ ಬೇರೆ ಆಶ್ಚರ್ಯಕರವಾದ ಪ್ರಯತ್ನಗಳನ್ನೂ ನಿರೀಕ್ಷಿಸಲಾಗಿದೆ. ಆ ಕಾರಣಕ್ಕಾಗಿ ನಮ್ಮ ಅತ್ಯಂತ ಮಹತ್ವದ ಸ್ಥಳಗಳು ಭದ್ರವಾಗಿರಬೇಕು. ಈ ಭದ್ರತೆ ಹೆಚ್ಚಾಗಿ

ಸುರಕ್ಷಿತತೆಗಳ ಒಂದು ಸರಪಣಿಯಂತಿರಬೇಕು. ಗೊಂದಲಕ್ಕೀಡಾಗದೆ ಹಿಮ್ಮೆಟ್ಟಿದಾಗ ವೈರಿಗಳನ್ನು ಅವರ ರಕ್ಷಕ ಸ್ಥಳದಿಂದ ಹೊರಗೆಳೆಯಬಹುದು. ಅವರನ್ನು ಗುಂಡಿಗೆ ಆಹುತಿಮಾಡಬಹುದು. ಮತ್ತು ಅವರ ಬೆಂಬಲಿಗರ ಮೇಲೆ ಕ್ರಮ ಕೈಕೊಳ್ಳಬಹುದು. ಭದ್ರವಾದ ಬೆಂಬಲವಿಲ್ಲದೆ ಯಾವುದೇ ಸೈನ್ಯ ಮುಂದುವರಿಯಕೂಡದು, ಅಡಿಗೆಯ ವ್ಯವಸ್ಥೆ ಅಥವಾ ಇನ್ನಿತರ ಇಂಥ ಯಾವುದೇ ಕಾರ್ಯಕ್ರಮದ ಬಗ್ಗೆ ಅವರಿಗೆ ತೊಂದರೆ ಇರಕೂಡದು.

"ಮೇಜರ ಟ್ರಿವನ್ಸನ್ ನೇತೃತ್ವದ ಸೈನ್ಯಪಡೆಗಳು ನಾಳೆ ಬೆಳಗಿನಲ್ಲಿ ಬೆಳಗಾವಿಯಿಂದ ಹೊರಡುವವು. ನಿರೀಕ್ಷಿಸಲ್ಪಟ್ಟಂತೆ ಒಂದು ಸಾವಿರ ಮೈಸೂರು ಕುದುರೆಗಳು ಅಲ್ಲಿಗೆ ಬರುತ್ತವೆ. ಕಿತ್ತೂರಿಗೆ ಮುತ್ತಿಗೆ ಹಾಕುವ ಸಂದರ್ಭದಲ್ಲಿ ಅವುಗಳ ಉಪಯೋಗವನ್ನು ನೀವು ಪಡೆಯಬೇಕು."

ಯುದ್ಧ ಚಟುವಟಿಕೆಗಳ ಮೇಲ್ವಿಚಾರಣೆ ಮಾಡಲು ಸ್ವತಃ ಚಾಪ್ಲಿನ್‌ನು ದಿನಾಂಕ 28 ನವ್ಹೆಂಬರ 1824 ಕ್ಕೆ ತಡಕೋಡಕ್ಕೆ ಬಂದನು. ಅವನು ಮದ್ರಾಸ ಅಶ್ವಸೇನೆಯ ದಳಪತಿಯಾದ ಕರ್ನಲ್ ವಾಕರ್‌ನಿಗೆ ಕಿತ್ತೂರು ಕೋಟೆಯನ್ನು ಮುತ್ತಿಗೆ ಹಾಕುವ ಹೊಣೆಯನ್ನು ಹೊರಿಸಿದನು. ಕಿತ್ತೂರನ್ನು ಅಕ್ರಮಿಸುವ ಚಟುವಟಿಕೆಗಳು ಬಿರುಸಿನಿಂದ ಬ್ರಿಟಿಷ್ ಸೈನ್ಯದ ಘಟಕಗಳಲ್ಲಿ ನಡೆದವು. ಚಾಪ್ಲಿನ್‌ನು ನ್ಯೂನ್‌ಹ್ಯಾಮ್‌ರಿಗೆ ದಿನಾಂಕ 29 ರಂದು ಒಂದು ವಿವರವಾದ ಕಾಗದ ಬರೆದು, ತಾನು ದಿನಾಂಕ 17ರಂದು ಮುಂಬಯಿಯಿಂದ ಹೊರಬಂದಂದಿನಿಂದ ನಡೆದ ಎಲ್ಲ ಘಟನೆಗಳನ್ನು ವಿವರಿಸಿದನು. ಕೆಳಗೆ ಉದ್ಧರಿಸಿದ ಅವನ ಪತ್ರದ ಸೂಕ್ತ ಅವತರಣಿಕೆಯು ಕುತೂಹಲಕರವಾಗಿದೆ:

"ನಾನು ಮಾರ್ಗಮಧ್ಯದಲ್ಲಿ ಈಗತಾನೆ ತಮ್ಮ ತಮ್ಮ ಎಂದಿನ ಸ್ಥಳಗಳಿಗೆ ಹಿಂದಿರುಗಿದ, ದೇಶದ ಈ ಭಾಗದ ಬಹಳಷ್ಟು ಜನ ಪಟವರ್ಧನರನ್ನು ಕೆಲವು ಜನ ಇತರ ಜಹಾಗೀರದಾರರನ್ನು ಸಂದರ್ಶಿಸಿದೆನು. ಚಿಂತಾಮಣಿರಾವ್ ಅವರು ನನ್ನನ್ನು ಭೆಟ್ಟಿ ಯಾಗದುದಕ್ಕೆ ಕ್ಷಮಾಪಣೆ ಎಂಬಂತೆ ತಮ್ಮ ಚಿರಂಜೀವನು ಕಾಯಿಲೆಯಿರುವ ವಿಷಯವನ್ನು ತಿಳಿಸಿದರು. ಜಮಖಂಡಿ ಗೋಪಾಲರಾವ್ ಅವರು ಬೆಳಗಾವಿಯ ದಾರಿಯಲ್ಲಿ ನನ್ನ ಭೆಟ್ಟಿಯನ್ನು ತಪ್ಪಿಸಿಕೊಂಡು, ಆ ಸ್ಥಳದಿಂದ ಮುಂದೆ ಬಂದ ನನಗೆ ನಮ್ಮೊಂದಿಗೆ ಬರಲು ಅವಕಾಶ ಕಲ್ಪಿಸಿಕೊಡಬೇಕೆಂದು ಬಹಳ ಜರೂರಾಗಿ ವಿನಂತಿ ಮಾಡಿಕೊಂಡರು. ಅವರ ಮನನೋಯಿಸಬಾರದೆಂದು, ಅವರ ಅಪೇಕ್ಷೆಯನ್ನು ನಿರಾಕರಿಸಲು ನಾನು ಅಸಮರ್ಥ ನಾದೆನು. ಅವರ ಕೋರಿಕೆಯನ್ನು ಮನ್ನಿಸುವಲ್ಲಿ ನನಗೆ ಅನುಮಾನ ಉಂಟಾಗಲಿಲ್ಲ. ನಾನು ಅವರ ಸ್ನೇಹಪರವಾದ ಉದ್ದೇಶವನ್ನು ಆತ್ಮವಿಶ್ವಾಸದಿಂದ ಸ್ವೀಕರಿಸಿದೆನು. ಈಗವರು ಸುಮಾರು 250 ಕುದುರೆಗಳೊಂದಿಗೆ ನನ್ನೊಂದಿಗೆ ಬೀಡು ಬಿಟ್ಟಿದ್ದಾರೆ. ಕೊಲ್ಲಾಪುರ ರಾಜರ ವರ್ತನೆಯು ಅಸಮಾಧಾನಕ್ಕೆ ಹೊರತಾದರೂ, ಅನುಮಾನದಿಂದ ಮುಕ್ತವಾದುದೂ ಆಗಿಲ್ಲವೆಂದು ತಿಳಿಸಲು ವ್ಯಸನಪಡುತ್ತೇನೆ. ನಾನು ಬೆಳಗಾವಿಗೆ ಬರುವಾಗ ಆತನ ರಾಜಧಾನಿಯನ್ನು ಧಾಟುವಾಗ ಅವನು ಕಾಯಿಲೆಯಾಗಿರುವುದಾಗಿ ಅಥವಾ

ಕಾಯಿಲೆಯಾಗಿರುವಂತೆ ನೆಪಹೇಳಿ, ತನ್ನ ಕೆಲವು ಅಧಿಕಾರಿಗಳನ್ನು ನನ್ನ ಭೆಟ್ಟಿಗೆ ಕಳಿಸಿದನು. ತಾನು ವೈಯಕ್ತಿಕವಾಗಿ ಭೆಟ್ಟಿಯಾಗದುದಕ್ಕೆ ಅವನು ಕೇಳಿದ ಕ್ಷಮಾಪಣೆಯ ಕೋರಿಕೆಗೆ ಅವನು ಭೆಟ್ಟಿಯಾಗದುದಕ್ಕೆ ಅಸಂತುಷ್ಟಿಯನ್ನು ವ್ಯಕ್ತಪಡಿಸುವದಕ್ಕೆ ನನ್ನಲ್ಲಿ ಕಾರಣಗಳಿರಲಿಲ್ಲ. ನಾನು ಬೆಳಗಾವಿಗೆ ಬಂದಮೇಲೆ ಆತನು ತನ್ನ ತೀವ್ರವಾದ ಕಾಯಿಲೆಯಿಂದ ಒಮ್ಮೆಲೆ ಗುಣಹೊಂದಿರುವುದು ಮತ್ತು ಕೊಲ್ಲಾಪುರದ ಬಾಯಡೊವಜರ ಅವರ ಸಲಹೆಗೆ ವ್ಯತಿರಿಕ್ತವಾಗಿ 5,000 ಕಾಲ್ದಳ 1,000 ಕುದುರೆಗಳು ಮತ್ತು 7 ಗನ್ನುಗಳೊಡನೆ ನನ್ನನ್ನು ಕಾಣುವ ಉದ್ದೇಶದಿಂದ ಹೊರಟಿರುವದಾಗಿ ತಿಳಿದುಬಂದಿತು. ಅವನಿಂದ ಈ ಬಗೆಯ ಸಮಾಚಾರ ನನಗೆ ಮುಟ್ಟಿದೊಡನೆಯೇ ನಾನು ಒಂದು ಕಾಗದ ಬರೆದು ತಿಳಿಸಿದೆನು. ಅದರಲ್ಲಿ ನಿಮ್ಮನ್ನು ಕಾಣುವುದು ಸಂತೋಷದಾಯಕವಾದುದೆಂದು ಹೇಳಿ, ನನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದೆನು. ಹಾಗೆಯೇ ನನ್ನ ಸಮಯವೆಲ್ಲ ಬಹಳಷ್ಟು ಕಾರ್ಯದಿಂದ ತುಂಬಿದ್ದರಿಂದ ಈ ನಮ್ಮ ಭೆಟ್ಟಿಯು ವ್ಯವಹಾರಿಕವಾಗದೆಂದು ತಿಳಿಸಿದನು. ಇದನ್ನು ಮನ್ನಿಸಬೇಕೆಂದೂ ವಿನಂತಿಸಿಕೊಂಡೆ. ಕೊನೆಯ ಸುದ್ದಿ ಬಂದಾಗ ಅವನು ಯಮಕನಮರಡಿಯಲ್ಲಿರುವುದಾಗಿ ತಿಳಿಯಿತು. ನನ್ನ ಕಾಗದ ಕೈಸೇರಿದ ಮೇಲು ಅವನಿನ್ನೂ ಮುಂದುವರಿದಂತೆ ತಿಳಿದುಬಂದಿತು. ನಮ್ಮಲ್ಲಿ ಉಪಸ್ಥಿತನಿದ್ದ ಅವನ ವಕೀಲನಿಗೆ 'ಅರಸನು ಇಷ್ಟೊಂದು ಸೈನ್ಯದೊಂದಿಗೆ, ಈ ಸಮಯದಲ್ಲಿ ಹೊರಟಿರುವುದು ಅತ್ಯಂತ ಅಕಾಲದ, ಅವಿವೇಕದ ವರ್ತನೆಯಾಗಿದೆ. ಅವನು ಹೀಗೆಯೇ ಮುಂದುವರಿದರೆ ಕಿತ್ತೂರಿನ ಬಂಡಾಯಗಾರರಿಗೆ ಪ್ರೋತ್ಸಾಹಿಸುವ ಉದ್ದೇಶದಿಂದಲೇ ಹೊರಟಿದ್ದಾನೆಂದು ನಾನು ನಂಬಲೇಬೇಕಾಗುತ್ತದೆ' ಎಂದು ತಿಳಿಸಿದೆ. ಈ ಸ್ಥಳದಿಂದ ಆಗ್ನೇಯಕ್ಕೆ ಸುಮಾರು 25 ಮೈಲು ದೂರದಲ್ಲಿರುವ ಮತ್ತು ಆತನ ಅಧೀನದಲ್ಲಿರುವ ಮನೋಳಿಗೆ ಆತನು ಹೊರಡಲು ಸಿದ್ಧನಾದ ಅಥವಾ ಹೊರಟ ವಿಷಯ ಇಂದು ನನಗೆ ಗೊತ್ತಾಗಿದೆ. ಇದು ಸತ್ಯವೇ ಆಗಿದ್ದಾದರೆ, ಇದು ಕೊನೆಯಪಕ್ಷ ಬಂಡಾಯಗಾರರಿಗೆ ನಿಜವಾಗಿ ಬೆಂಬಲವನ್ನು ನೀಡದಿದ್ದರೂ ಆತ್ಮಸ್ಥೈರ್ಯವನ್ನು ತಂದುಕೊಡುವ ಕಾರ್ಯ ವಾಗಿದೆ ಎಂದು ತಿಳಿಸಿ, ಎಚ್ಚರಿಕೆಕೊಟ್ಟು, ಆಮೇಲೆ ಖಾತ್ರಿ ಮಾಡಿಕೊಳ್ಳಬೇಕೆಂದು ನನಗೆನಿಸಿದೆ. ಕಿತ್ತೂರಿನ ಕಾರ್ಯ ಮುಗಿದ ಮೇಲೆ, ಅವನನ್ನು ಕರೆಯಿಸಿ ಈ ವರ್ತನೆಯ ಬಗ್ಗೆ ವಿಚಾರಿಸುವುದು ನನ್ನ ದೃಷ್ಟಿಯಲ್ಲಿ ಯೋಗ್ಯವೆನಿಸುತ್ತದೆ. ಈ ಮಧ್ಯೆ ಒಂದುವೇಳೆ ಹಗೆತನದಲ್ಲದ ಕಾರ್ಯಕಲಾಪಗಳಿದ್ದರೂ ಆತನ ಕಾರ್ಯಚಟುವಟಿಕೆ ಗಳ ಮೇಲೆ ಕಟ್ಟುನಿಟ್ಟಾದ ನಿಗಾ ಇಡಬೇಕು. ಸದ್ಯದ ಸಂಧಿಕಾಲದಲ್ಲಿ ಇವನ ಹಗೆತನ ಅನಿಷ್ಟ ಪರಣಾಮಬೀರುವ ಸಾಧ್ಯತೆಯಿದೆ."

ಕರ್ನಲ್ ಮೆಕ್‌ಲಾಯಿಡ್‌ನ ನೇತೃತ್ವದ ಸೈನ್ಯವು ನವ್ಹೆಂಬರ 30 ನೆಯ ತಾರೀಖಿಗೆ ಕಿತ್ತೂರಿನ ತೀರ ಸಮೀಪಕ್ಕೆ ಬಂದಿತು. ಅನೇಕ ಯುದ್ಧಗಳಲ್ಲಿ ತನ್ನ ಧೈರ್ಯಕ್ಕಾಗಿ ಹೆಸರು ಪಡೆದ, ಭಾರತದ ಕರಾವಳಿ ಪ್ರದೇಶದಲ್ಲಿ ಸಮರ್ಥ ಸೈನ್ಯಾಧಿಕಾರಿ ಆಡಳಿತಗಾರನೆಂದು ಪ್ರಸಿದ್ಧನಾದ, ಧಾರವಾಡದ ಹಂಗಾಮಿ ಕಲೆಕ್ಟರನಾದ ಮಿ.ಜಾನ್ ಮನ್ರೋ ಲೆಫ್ಟನಂಟ್

ಕರ್ನಲ್ ಮೆಕ್‌ಲಾಯಿಡ್‌ನನ್ನು ಕೂಡಿಕೊಂಡನು. ಬೆಳಗಾವಿಯಿಂದ ಕರ್ನಲ್ ಟ್ರಿವನ್ಸನ್‌ನ ಸೇನಾಧಿಪತ್ಯದ ಸೈನ್ಯ ಮತ್ತು ಕೊಲ್ಲಾಪುರದಿಂದ ಲೆಫ್ಟನಂಟ್ ಕರ್ನಲ್ ವಾಕರನ ಸೇನಾಧಿಪತ್ಯದ ಸೈನ್ಯ ಇವು ಕೂಡ ಬಂದು, ಕಿತ್ತೂರಿನ ಸುತ್ತ ಪಾಳ್ಯ ಹೂಡಿರುವವು. ಮರುದಿನ ಡಿಸಂಬರ 1ನೆಯ ತಾರೀಖಿಗೆ ಫಿರಂಗಿಯ ದಳ ಬರುವುದನ್ನು ನಿರೀಕ್ಷಿಸಲಾಗಿತ್ತು. ಕಿತ್ತೂರಿನಿಂದ ಸುಮಾರು ಒಂದೂವರೆ ಮೈಲಿನಷ್ಟು ತ್ರಿಜ್ಯದ ಪ್ರದೇಶದಲ್ಲಿ ಮೈಸೂರು, ಚಿತ್ರದುರ್ಗ, ಮದ್ರಾಸ್, ಅರ್ಕಾಟ್, ಸೊಲ್ಲಾಪುರ, ಸಾತಾರಾ, ಮುಂಬೈ, ಪುಣೆ ಮತ್ತು ವೆಂಗುರ್ಲಾಗಳಿಂದ ಸೈನ್ಯ ಪಡೆಗಳು ಬಂದು ಗುಂಪುಗೂಡಿವೆ. ರಾಣಿ ಚೆನ್ನಮ್ಮನ ಸೇವಕರು ಈ ಎಲ್ಲ ವಿಷಯವನ್ನು ಅವಳಿಗೆ ತಿಳಿಸಿದರು. ಸುಮಾರು 25,000 ಬ್ರಿಟಿಷ್ ಸೈನಿಕರು ಕಿತ್ತೂರನ್ನು ಸುತ್ತುಗಟ್ಟಿದುದನ್ನು ಆಕೆ ತಿಳಿದಳು. ಇಷ್ಟು ದೊಡ್ಡದಾದ ಬ್ರಿಟಿಷ್ ಸೈನ್ಯದೊಂದಿಗೆ ಹೋರಾಡಲು ಆಕೆಗೆ ತಮ್ಮ ಸೈನ್ಯ ಅತಿ ಸಣ್ಣದೆಂಬುದರಲ್ಲಿ ಯಾವ ಸಂದೇಹವೂ ಇರಲಿಲ್ಲ. ಹಾಗಿದ್ದರೂ ಆಕೆ ನಿರಾಶಳಾಗಲಿಲ್ಲ. ಮನೋಳಿಗೆ ಬಂದ ಕೊಲ್ಲಾಪುರ ಸೈನ್ಯವು ಕಿತ್ತೂರಿಗೆ ಸಹಾಯಮಾಡಲು ಕಾಯುತ್ತಿರುವ ವಿಷಯವನ್ನು ಅರಿತ ರಾಣಿಯು, ಅವಸರದಿಂದ ಕೆಲವು ದೂತರನ್ನು ಅಲ್ಲಿಗೆ ಕಳಿಸಿದಳು. ಆ ಸಮಯದಲ್ಲಿ, ಅವಳಿಗಿರುವ ಆಸೆ ಅದೊಂದೇ ಆಗಿತ್ತು. ಈ ವಿಷಯವನ್ನು ಅತ್ಯಂತ ಹತ್ತಿರದಿಂದ ಗಮನಿಸುತ್ತಿದ್ದ ಚಾಣಾಕ್ಷ ರಾಜಕಾರಣಿಯಾದ ಚಾಪ್ಲಿನ್‌ನು ಕೊಲ್ಲಾಪುರ ಸೈನ್ಯವು ಕಿತ್ತೂರಿನ ಸಹಾಯಕ್ಕೆ ಬರುವುದೆಂಬ ಸಂಶಯ ಉಳ್ಳವನಾಗಿದ್ದನು. ಮೈಸೂರಿನ ಅಶ್ವದಳದ ಕ್ಯಾಪ್ಟನ್ ಕೋಲ್‌ನಿಗೆ ಬರೆದ ಆತನ ಡಿಸಂಬರ 1ನೆಯ ತಾರೀಖಿನ ಪತ್ರದಲ್ಲಿ ಈ ವಿಷಯವಿದೆ:

"ಕಿತ್ತೂರು ತನ್ನ ಗೋಪುರದಿಂದ ಇಡೀ ದಿನ ಗುಂಡುಹಾರಿಸಿ ಪ್ರತಿರೋಧಿಸಲು ಪ್ರಾರಂಭಿಸಿದೆ. ಕೊಲ್ಲಾಪುರದ ಅರಸನು ಕಿತ್ತೂರಿನ ಬಂಡಾಯಗಾರರಿಗೆ ಸಹಾಯಮಾಡಲು ಬರುವನೆಂದು ಗ್ರಹಿಸಲು ನನ್ನ ಕಡೆಗೆ ಕೆಲವು ಕಾರಣಗಳಿವೆ. ಆದ್ದರಿಂದ ನೀವು ಕೃಪೆಮಾಡಿ ಇನ್ನೊಂದು ಅಶ್ವದಳವನ್ನು ನೆರೆಯ ಪ್ರದೇಶದ 500 ಕಾಲಾಳುಗಳೊಡನೆ ಕಳಿಸಿ ಕೊಡಬೇಕು. ಅಶ್ವದಳವು ಕ್ಲೊಸ್ಪೆಟ್ ಕುದುರೆ ಮತ್ತು ಗನ್ನುಗಳನ್ನು ಹೊಂದಿದ್ದರೆ ನಮ್ಮ ಕಾರ್ಯಾಚರಣೆಯನ್ನು ತಡೆಗಟ್ಟುವ ಯಾವುದೇ ಶತ್ರುವನ್ನು ನಿರ್ಬಂಧಿಸಲು ಬಹಳ ಉಪಯುಕ್ತವಾಗುವುದು."

ರಾಣಿ ಚೆನ್ನಮ್ಮನ ದೂತರು ಕೋಟೆಯ ಈಶಾನ್ಯ ದಿಕ್ಕಿನ ಬಾಗಿಲಿನಿಂದ ಮನೋಳಿಗೆ ಧಾವಿಸಲು ಯತ್ನಸಿದರಾದರೂ ಬ್ರಿಟಿಷ್ ಸೈನಿಕರಿಂದ ತಡೆಹಿಡಿಯಲ್ಪಟ್ಟರು. ಅಲ್ಲಿ ಸಣ್ಣ ಕದನ ಸಂಭವಿಸಿತು. ಕೋಟೆಯ ಗೋಪುರದಿಂದ ಕಾವಲುಗೈಯುತ್ತಿದ್ದ ಸೈನಿಕರಿಂದ ಕೆಲವರ ಮೇಲೆ ಗುಂಡುಹಾರಿಸಲಾಯಿತು. ಈ ಗುಂಡುಹಾರಿಸುವಿಕೆಯಿಂದ ಇಬ್ಬರು ಅಶ್ವದಳದ ಸೈನಿಕರು ಹಾಗು ಅವರ ಕುದುರೆಗಳು ಕೊಲ್ಲಲ್ಪಟ್ಟವು. ಬ್ರಿಟಿಷರನ್ನು ಉದ್ರೇಕಗೊಳಿಸಲು ಇಷ್ಟು ಸಾಕಾಯಿತು. ಅವರು ಕೋಟೆಗೆ ಗುಂಡಿಟ್ಟರು ಮತ್ತು ತಮ್ಮ ತೀವ್ರ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದರು. ಇಡೀದಿನ ಬಿಡುವಿಲ್ಲದೆ ಪರಸ್ಪರ ಗುಂಡಿನ ಮಳೆಗರೆದರು.

ಕಿತ್ತೂರಿನ ವಕೀಲನು ಹೆಚ್ಚು ಅನುಕೂಲಕರವಾದ ರೀತಿಯಲ್ಲಿ ಚಾಪ್ಲಿನ್‌ನೊಡನೆ ಇನ್ನೂ ಸಂಧಾನ ನಡೆಸಿದ್ದನು. ವೈರವನ್ನು ಪ್ರದರ್ಶಿಸಿದ್ದುದಕ್ಕೆ ಕೋಪಿಸಿಗೊಂಡ ಚಾಪ್ಲಿನ್‌ನು ಕಿತ್ತೂರಿನ ಬಂಡಾಯಗಾರರು ಡಿಶಂಬರ 1ನೆಯ ತಾರೀಖಿನ ಮಧ್ಯರಾತ್ರಿಯ ಒಳಗೆ ಶರಣಾಗತರಾಗದಿದ್ದರೆ ತನ್ನ ಸೈನ್ಯಕ್ಕೆ ಕಿತ್ತೂರ ಕೋಟೆಯನ್ನು ಎಲ್ಲ ಕಡೆಗಳಿಂದ ಮುತ್ತಿಗೆ ಹಾಕಲು ಮತ್ತು ಧ್ವಂಸಮಾಡಲು ಆಜ್ಞೆ ಮಾಡುವುದಾಗಿ ವಕೀಲನಿಗೆ ತಿಳಿಸಿದನು. ಅವನು ಇತ್ತೀಚಿನ ಪರಿಸ್ಥಿತಿಯ ವಿಷಯವಾಗಿ ನ್ಯೂನ್‌ಹ್ಯಾಮನಿಗೆ ಒಂದು ವಿವರವಾದ ವರದಿ ಕಳಿಸಿದನು ಮತ್ತು ಬ್ರಿಟಿಷ್ ಅಧಿಕಾರಿಗಳು ಮುಕ್ತಗೊಳಿಸಲ್ಪಡದಿದ್ದರೆ ಹಾಗೂ ಕಿತ್ತೂರಿನ ಮುಖಂಡರು ತಮ್ಮ ಆಯುಧಗಳನ್ನು ಕೆಳಗಿಡದಿದ್ದರೆ ತಾನು ಕೈಕೊಳ್ಳಲಪೇಕ್ಷಿಸಿದ ಕ್ರಮಗಳ ರೂಪರೇಷೆಯನ್ನು ಅದರಲ್ಲಿ ತಿಳಿಸಿದನು.

ಅಂದಿನ ಮುಂಜಾವಿನಲ್ಲಿ ಚಾಪ್ಲಿನ್‌ನು ಇಬ್ಬರು ಬ್ರಿಟಿಷ್ ಅಧಿಕಾರಿಗಳು 10 ಗಂಟೆಯ ಒಳಗೆ ಹಿಂದಿರುಗಿ ಬರದಿದ್ದರೆ ಕಿತ್ತೂರಿನ ಸಮಸ್ತ ಸೈನ್ಯವನ್ನು ಸಂಹರಿಸಲಾಗುವುದೆಂದು ರಾಣಿ ಚೆನ್ನಮ್ಮನಿಗೆ ಹೇಳಿಕಳಿಸಿದನು. ರಾಣಿ ಚೆನ್ನಮ್ಮನು ತನ್ನ ಅಧಿಕಾರಿಗಳೊಂದಿಗೆ ಸಮಾಲೋಚಿಸಿದಳು. ತಾತ್ಪೂರ್ತಿಕವಾಗಿ ಎಲ್ಲ ಬಗೆಯ ವೈರವನ್ನು ನಿಲ್ಲಿಸಿ, ಅದರಿಂದ ಹೆಚ್ಚಿನ ಅವಕಾಶವನ್ನು ಪಡೆಯಲು ನಿರ್ಧರಿಸಿದಳು. ಮುಂದೆ ಯುದ್ಧವಿಲ್ಲವೆಂಬುದಕ್ಕೆ ಬ್ರಿಟಿಷರು ಒಪ್ಪಿಕೊಂಡರೆ ಆ ಇಬ್ಬರು ವ್ಯಕ್ತಿಗಳನ್ನು ಸುರಕ್ಷಿತವಾಗಿ ಬಿಟ್ಟುಕೊಡಲು ಒಪ್ಪಿರುವುದಾಗಿ ರಾಣಿಯು ತಮ್ಮ ವಕೀಲನ ಮೂಲಕ ಹೇಳಿಕಳಿಸಿದಳು. ಇಬ್ಬರು ಅಧಿಕಾರಿಗಳು ಸುರಕ್ಷಿತವಾಗಿ ತಮಗೆ ಒಪ್ಪಿಸಲ್ಪಟ್ಟರೆ ಎಲ್ಲ ವೈರವನ್ನು ನಿಲ್ಲಿಸುವುದಾಗಿ ಗೌರವಪೂರ್ವಕವಾಗಿ ಕಿತ್ತೂರ ವಕೀಲನಿಗೆ ಚಾಪ್ಲಿನ್‌ನು ಭರವಸೆಯಿತ್ತನು. ಮತ್ತು ಸಂಧಾನ ಮುಂದುವರಿಸುವುದಾಗಿ ತಿಳಿಸಿದನು. ಈ ಮಾತಿನನ್ವಯ 2ನೆಯ ತಾರೀಖಿನ ಸಂಜೆ 9 ಗಂಟೆಗೆ ಸ್ಟೀವನ್ಸನ್ ಮತ್ತು ಇಲಿಯಟ್‌ರು ಸುರಕ್ಷಿತವಾಗಿ ಬ್ರಿಟಿಷರ ವಾಸಸ್ಥಳಕ್ಕೆ ಕಳಿಸಲ್ಪಟ್ಟರು. ಕಿತ್ತೂರ ಸಂಸ್ಥಾನದ ಅಸ್ತಿತ್ವವನ್ನು ಹೊಡೆದು ಹಾಕುವ ಮತ್ತು ಅದನ್ನು ಬ್ರಿಟಿಷ್ ಆಡಳಿತಕ್ಕೆ ಕೂಡಿಸಿಬಿಡುವ ಪ್ರಕಟನೆಯಲ್ಲಿಯ ನಿಯಮವನ್ನು ರದ್ದುಗೊಳಿಸಿ, ಕಿತ್ತೂರ ಸಂಸ್ಥಾನವನ್ನು ಯಥಾಪ್ರಕಾರ ಮುಂದುವರಿಸುವ ಕುರಿತು ಕಿತ್ತೂರ ವಕೀಲರು ಈಗಲು ಉತ್ಕಟೇಚ್ಛೆಯಿಂದ ಪ್ರತಿವಾದಿಸುತ್ತಿದ್ದರು. ಸ್ಟೀವನ್ಸನ್ ಮತ್ತು ಇಲಿಯಟ್‌ರೂ ಕೂಡ ಅವರ ಬೇಡಿಕೆಯನ್ನು ಸಹಾನುಭೂತಿಯಿಂದ ಆಲೋಚಿಸಲು ಕೇಳಿಕೊಂಡರು. ಚಾಪ್ಲಿನ್‌ನು ಈ ಬೆಳವಣಿಗೆಯನ್ನು ವರದಿಮಾಡುತ್ತ ಡಿಶಂಬರ 2ನೆಯ ತಾರೀಖಿಗೆ ನ್ಯೂನ್‌ಹ್ಯಾಮ್‌ನಿಗೆ ಹೀಗೆ ಬರೆದನು:

"ಇಬ್ಬರು ಸದ್ಗೃಹಸ್ಥರು ಇಂದು 9 ಗಂಟೆಗೆ ನಮ್ಮಲ್ಲಿಗೆ ಕಳಿಸಲ್ಪಟ್ಟರೆಂದು ತಿಳಿಸಲು ಬಹಳ ಸಂತೋಷವೆನಿಸುತ್ತದೆ. ಈ ಶರಣಾಗತಿಯ ಕಾರ್ಯವು ನನ್ನ ಷರತ್ತಿನ ಉಳಿದ ಭಾಗವನ್ನು ಸರಿಹೊಂದಿಸುವ ತೀವ್ರ ಉದ್ದೇಶವನ್ನು ಹೊಂದಿದೆಯೆಂದು ನನಗನಿಸುತ್ತದೆ. ಸದ್ಯಕ್ಕೆ ವಕೀಲರು ಸಂಸ್ಥಾನವು ಮುಂದುವರಿಯಬೇಕು ಮತ್ತು ಪ್ರಕಟಣೆಯಲ್ಲಿ ಘೋಷಿತವಾದ ಮಾತುಗಳಿಗಿಂತ ಹೆಚ್ಚು ಅನುಕೂಲಕರವಾದುದನ್ನು ಮಾಡಬೇಕು ಎಂಬುದರ ಕಡೆಗೆ

ಲಕ್ಷ್ಯಪೂರೈಸಲು ಅಲ್ಲಿಯ ಮುಖಂಡರು ತಮ್ಮ ಪ್ರತಿಭಟನೆ ವ್ಯಕ್ತಪಡಿಸುವುದರ ಕಡೆಗೆ ವಾಲಿದ್ದಾರೆ. ಅವರಿಗೆ ತಮ್ಮ ನಿಯಂತ್ರಣಕ್ಕೊಳಪಡದ ಸೈನ್ಯಾಧಿಪತ್ಯದ ಈಗ ಪಾಸಾದ ಮಸೂದೆಯನ್ನು ಸರಿಪಡಿಸುವುದು ಬೇಕಾಗಿದೆ. ನಾನು ಪ್ರಕಟಣೆಯಲ್ಲಿಯ ಷರತ್ತುಗಳಲ್ಲಿ ಯಾವುದೇ ಸಾರಭೂತ ಬದಲಾವಣೆ ಮಾಡಲಾರೆನೆಂದು ಅವರಿಗೆ ಅಂತಿಮವಾಗಿ ತಿಳಿಸಿದ್ದೇನೆ. ಆದರೆ ಮಿ.ಸ್ಟೀವನ್ಸನ್ ಮತ್ತು ಇಲಿಯಟ್‌ರನ್ನು ಚೆನ್ನಾಗಿ ನೋಡಿಕೊಂಡುದು ದಕ್ಕೆ ಮತ್ತು ಕೊನೆಯದಾಗಿ ಅವರಿಬ್ಬರನ್ನು ಬಂಧಮುಕ್ತರನ್ನಾಗಿ ಮಾಡಿದುದಕ್ಕೆ ನಾನು ಷರತ್ತುಗಳ ಪ್ರತಿಯೊಂದು ಅಂಗವನ್ನು ಬಹಳ ಉದಾರವಾಗಿ ಗಮನಿಸುತ್ತಿದ್ದೇನೆ. ತಕ್ಕ ಏರ್ಪಾಟಾದರೆ ಕೋಟೆಯು ಬಿಟ್ಟುಕೊಡಲ್ಪಡಬೇಕು. ಮತ್ತು ಕೋಟೆಯ ರಕ್ಷಕ ಸೈನ್ಯವು ನಾಳೆ ಮುಂಜಾನೆ 10 ಗಂಟೆಗೆ ಶರಣು ಬರಬೇಕು.

"ಮಿ.ಸ್ಟೀವನ್ಸನ್ ಮತ್ತು ಇಲಿಯಟ್‌ರ ಜೊತೆಗೆ ಬಂದ ಸಂಸ್ಥಾನದಿಂದ ಪ್ರತಿನಿಧಿಸಲ್ಪಟ್ಟ ವಕೀಲ ಮತ್ತು ಇತರರು ಇನ್ನೂ ನನ್ನ ಡೇರೆಯಲ್ಲಿರುವಾಗಲೇ ಕೋಟೆಯಿಂದ ಅನೇಕ ಗನ್ನುಗಳು ಹಾರಿಸಲ್ಪಟ್ಟವು. ಕುದುರೆ ಹಾಗೂ ಕಾಲ್ದಳದ ಒಂದು ಗುಂಪು ನಮ್ಮ ಕಾವಲು ಪಡೆಯೊಂದರ ಕಡೆಗೆ ಧಾವಿಸುತ್ತಿತ್ತು. ಅದನ್ನು ನಮ್ಮ ಆರರಲ್ಲಿ ಒಂದಾದ ಫಿರಂಗಿಯ ಗುಂಡುಗಳಿಂದ ಹಿಮ್ಮೆಟ್ಟಿಸಲಾಯಿತು. ಅನಂತರ ಎಲ್ಲ ರೀತಿಯಿಂದ ಗುಂಡು ಹಾರಿಸುವುದು ನಿಂತಂತಾಯಿತು. ಎರಡೂ ಕಡೆಯವರು ತಮ್ಮ ತಮ್ಮ ಪರಿಮಿತಿಗನುಗುಣವಾಗಿ ಮೇಲೆ ಸೂಚಿತವಾದ ನಾಳೆಯ ಅವಧಿಯವರೆಗೆ ಯುದ್ಧವನ್ನು ಸ್ಥಗಿತಗೊಳಿಸಲು ಒಪ್ಪಿಕೊಂ ಡಿದ್ದಾರೆ. ಈ ಒಪ್ಪಂದವು ವೈರಿಗಳ ಕಡೆಯಿಂದ ಪೂರೈಸಲ್ಪಡುವ ಭರವಸೆ ನನಗಿಲ್ಲವೆಂದು ತಿಳಿಸಲು ವಿಷಾದವೆನಿಸುತ್ತದೆ. ಯಾಕೆಂದರೆ ಅವರ ಜನರು ಶಿಸ್ತಿಗೊಳಗಾದವರಲ್ಲವೆಂಬುದು ಗೊತ್ತಿದ್ದ ಮಾತಾಗಿದೆ.

"ಪರಿಸ್ಥಿತಿ ಹೀಗಿದ್ದರೂ ನಾವು ನಮ್ಮ ಪ್ರಕಟನೆಗೆ ಪ್ರಚಾರಕೊಡಲು ಮಾಡುತ್ತಿರುವ ಪ್ರಯತ್ನದಲ್ಲಿ ಭಾಗಶಃ ಯಶಸ್ವಿಯಾಗಿದ್ದೇವೆ. ಆದ್ದರಿಂದ ಭಯಪಡಬೇಕಾದ ಕಾರಣವಿಲ್ಲ. ಕೋಟೆಯೊಂದಿಗಿನ ಹೊರಗಿನ ಹಳ್ಳಿಗಳ ಸಂಪರ್ಕ ಕಡಿದುಹೋಗಿದೆ. ಗುರುಸಿದ್ದಪ್ಪನ ಕೈಯೊಳಗಿಂದ ಪ್ರಥಮವಾಗಿ ಹಾದುಹೋಗುವ ಕಾಗದಗಳನ್ನೆಲ್ಲ ಅವರಲ್ಲಿಯೇ ನಿಗ್ರಹಿಸಲ್ಪಟ್ಟಿದ್ದರಿಂದ ಹೊರಗಿನ ಪತ್ರಗಳೀಗ ಒಳಗೆಹೋಗಿ ಮುಟ್ಟುವಂತಿಲ್ಲ. ಈತನೊಬ್ಬನೇ ಕ್ಷಮಾದಾನಕ್ಕೆ ಹೊರತಾದವನು.

"ನಾನು ಮಿ.ಸ್ಟೀವನ್ಸನ್ ಮತ್ತು ಇಲಿಯಟ್‌ರ ಜೊತೆಗೆ ಬಂದ ಜನರೆದುರಿಗೆ ಇಂದು ಮುಂಜಾನೆ ಅದನ್ನು ಓದಿದ್ದೇನೆ. ಜನರು ಬಹು ಸಂಖ್ಯೆಯಲ್ಲಿ ಕೂಡಿದ್ದರು. ಅದರ ವಿಷಯವು ಈಗ ಅದರಲ್ಲಿ ಆಸಕ್ತಿಯುಳ್ಳ ಜನರಿಗೆಲ್ಲ ಸ್ಪಷ್ಟವಾಗಿದೆ.

"ಮೇಲೆ ಹೇಳಿದ ವ್ಯಕ್ತಿಗಳು ಕೋಟೆಯಿಂದ ಹೊರಹೋಗಲು ಅಪ್ಪಣೆ ದೊರಕಿಸುವ ಮೊದಲು ಸಂಸ್ಥಾನದ ಪರವಾಗಿ ಮಧ್ಯಸ್ಥಿಕೆ ಮಾಡಲು ಆಣೆಯಿಟ್ಟುಕೊಂಡಿದ್ದಾರೆ. ಅವರು ಅದರನ್ವಯ ಎಲ್ಲವನ್ನೂ ನ್ಯಾಯ ಸಮ್ಮತವಾಗಿ ಬಗೆಹರಿಸುವುದಾಗಿ ಹೇಳಿದ್ದಾರೆ.

ಗುರುಸಿದ್ದಪ್ಪನ ಒಳ್ಳೆಯ ಉಪಚಾರವನ್ನು ಹಾಗೂ ಮುಖ್ಯ ಅಧಿಕಾರವುಳ್ಳವರು ಆತನ ಕೈಯಲ್ಲಿರುವಾಗ ಅವನು ವಿಧ್ವಂಸಕ ಕೃತ್ಯಕ್ಕೆ ತೊಡಗದಿರುವ ಸಂಯಮ ತೋರಿಸಿದ್ದನ್ನೂ ಅವರು ಗಮನಕ್ಕೆ ತಂದಿದ್ದಾರೆ.

"ಕರ್ನಲ್ ಡಿಕನ್ ಫಿರಂಗಿ ದಳದೊಂದಿಗೆ ಇಂದು ಮುಂಜಾನೆ ನಮ್ಮ ಪಾಳಯದಿಂದ 4 ಮೈಲಿನ ಅಂತರದಲ್ಲಿ ಬಂದು ಮುಟ್ಟಿದ್ದಾನೆ. ಗನ್ನುಗಳ ಬರುವಿಕೆಯ ಪ್ರಗತಿಯು ನಿರೀಕ್ಷಿಸಿದುದಕ್ಕಿಂತ ಹೆಚ್ಚು ವಿಲಂಬವಾಗಿದೆ. ಯಾಕೆಂದರೆ ಜೌಗುನೆಲವನ್ನು ದಾಟಲು ಕೆಲವು ತೊಂದರೆಗಳುಂಟಾಗಿವೆ."

ಈ ಮಧ್ಯೆ ಕರ್ನಲ್ ಡಿಕನ್‌ನ ನೇತೃತ್ವದಲ್ಲಿ ಫಿರಂಗಿಯ ದಳ ಡಿಸಂಬರ 2ನೆಯ ತಾರೀಖಿನ ಬೆಳಗಿನಲ್ಲಿ ಅಲ್ಲಿಗೆ ಬಂದಿತು. ಆ ಇಬ್ಬರು ಅಧಿಕಾರಿಗಳನ್ನು ಸುರಕ್ಷಿತವಾಗಿ ಹಿಂದಿರುಗಿಸಿದ್ದರಿಂದ ವಂಚಕನೂ ಸಂಶಯ ಸ್ವಭಾವದವನೂ ಆದ ಚಾಪ್ಲಿನ್‌ನು ವೈರವನ್ನು ನಿಲ್ಲಿಸಿಬಿಡಬೇಕೆಂಬ ತನ್ನ ವಚನವನ್ನು ಪಾಲಿಸಲಿಲ್ಲ. ಅವನು ನಿರ್ದುಷ್ಟವಾದ ಮತ್ತು ಸೊಕ್ಕಿನ ನಿರ್ಣಯವನ್ನು ಕೈಕೊಂಡನು. ಪ್ರಕಟನೆಯ ಪ್ರತಿಯೊಂದು ಶಬ್ದವೂ ಆದರಿಸಲ್ಪಡಬೇಕೆಂದು ಒತ್ತಾಯಿಸಿದನು. ಕಿತ್ತೂರ ಸೈನ್ಯವು ಶರಣಾಗತವಾಗಬೇಕು. ಕಿತ್ತೂರಿನ ಅಧಿಪತಿಗಳು ಪ್ರಕಟನೆಯಲ್ಲಿ ನಮೂದಿಸಿದ ಎಲ್ಲ ಷರತ್ತುಗಳನ್ನು ಸ್ವೀಕರಿಸಬೇಕು. ಅವನು ಇನ್ನೂ ಮುಂದುವರಿದು, ಒಂದುವೇಳೆ ಸೈನ್ಯವು ಡಿಸಂಬರ, 3ನೆಯ ತಾರೀಖಿನ 10 ಗಂಟೆಯ ಹೊತ್ತಿಗೆ ಶರಣುಬರದಿದ್ದರೆ ಫಿರಂಗಿಯದಳ ಕೋಟೆಯನ್ನು ಗಂಡುಹಾರಿಸಿ ಧ್ವಂಸಮಾಡಲು ಪ್ರಾರಂಭಿಸುವುದೆಂದು ಹೆದರಿಕೆ ಹಾಕಿದನು. ಡಿಸಂಬರ 2ನೆಯ ತಾರೀಖು ಇಡೀದಿನ ಆಗೊಮ್ಮೆ ಈಗೊಮ್ಮೆ ಗುಂಡು ಹಾರುತ್ತಲೇ ಇತ್ತು. 3ನೆಯ ತಾರೀಖಿನ ಮುಂಜಾನೆ ಮತ್ತೆ ರಾಣಿ ಚೆನ್ನಮ್ಮ ಮತ್ತು ವೀರವ್ವ ಕೂಡಿ ಮುಂದೆ ಯುದ್ಧ ನಡೆಸುವುದಿಲ್ಲ ಎಂಬ ವಚನವನ್ನು ಮೀರಿ, ವಿಶ್ವಾಸಘಾತವೆಸಗಿದ್ದನ್ನು ಎತ್ತಿ ತೋರಿಸುತ್ತ ಕಾಗದ ಬರೆದರು : ಸಂಸ್ಥಾನವು ಮುಂದುವರಿಯಲು ಭರವಸೆ ನೀಡಿದ ಆತನ ಮಾತನ್ನು ನೆನಪಿಗೆ ತುಂದುಕೊಟ್ಟರು. ಆ ಪತ್ರ ಹೀಗಿದೆ:

"ನಿಮ್ಮ ನಿನ್ನೆಯ ಪತ್ರ ಮುಟ್ಟಿದೆ. ನರಸಿಂಗರಾವ ಮುಜಮುದಾರ ಅವರ ಮೂಲಕ ತಿಳಿಸಿದ ವಿಷಯ ನಮ್ಮ ಗಮನಕ್ಕೆ ಬಂದಿದೆ. ಸಂಸ್ಥಾನದ ವಿಷಯವಾಗಿ ಲಾಭದಾಯಕವೆನಿಸುವ ಲಕ್ಷಣಗಳಾವವೂ ನಮಗೆ ಕಂಡು ಬರಲಿಲ್ಲ. ಸರಕಾರಕ್ಕೆ ನಿಷ್ಠರಾಗಲು ಕೋಟೆಯ ಎಲ್ಲ ಜನರು ಮುಂದೆ ಬರಬೇಕೆಂದು ನೀವು ಅಪೇಕ್ಷಿಸುತ್ತೀರಿ. ಇದಕ್ಕೆ ತಪ್ಪಿದರೆ ಅವರ ಪ್ರಾಣಗಳು ರಕ್ಷಿಸಲ್ಪಡಲಾರದೆಂದು ತಿಳಿಸಿರುವಿರಿ.

"ಮಿ.ಥ್ಯಾಕರೆಯು ತನ್ನ ನಿರ್ದಾಕ್ಷಿಣ್ಯದಿಂದ ನಮಗೆ ಇಂಥ ಪರಿಸ್ಥಿತಿಯನ್ನು ತಂದುಕೊಟ್ಟನು. ಪ್ರಾಚೀನ ಪರಂಪರೆಯಂತೆ ಎಲ್ಲವೂ ನೀವು ಬಂದ ಮೇಲೂ ಮುಂದುವರಿಯುವದೆಂದು ನಾವು ಬಹಳವಾಗಿ ಅಪೇಕ್ಷಿಸಿದ್ದೆವು. ಆದರೆ ನೀವು ಬೇರೆಯೇ ಆಲೋಚನೆ ಮಾಡಿರುವಿರಿ. ನಿಮ್ಮ ವ್ಯಕ್ತಿಗಳನ್ನು ಬಿಡುಗಡೆ ಮಾಡಿದರೆ ಯುದ್ಧ

ನಡೆಯದೆಂದು ನೀವು ಬರೆದಿದ್ದಿರಿ. ಈ ಭರವಸೆಯ ಮೇಲಿಂದ ಆ ಸದ್ಗ್ರಹಸ್ಥರನ್ನು ನಾವು ಬಿಡುಗಡೆ ಮಾಡಿದೆವು. ಆಮೇಲೆ ನಿಮ್ಮ ಕುದುರೆಗಳು ಮುನ್ನುಗ್ಗತೊಡಗಿದವು. ನಿಮ್ಮ ತೋಪುಗಳು ನಮ್ಮ ಮೇಲೆ ಗುಂಡು ಸುರಿಸಲು ಸಿದ್ಧವಾಗಿ ನಿಂತವು. ಆಮೇಲೆ ರಕ್ಷಕ ದಳವಾಗಿ ನಮ್ಮ ಕುದುರೆಗಳನ್ನು ಕಳಿಸಬೇಕಾಯಿತು. ನಿಮ್ಮ ನಾಲ್ಕು ತೋಪುಗಳು ಅವರ ಮೇಲೆ ಗುಂಡುಹಾರಿಸಿದವು. ನಾವು ಆಮೇಲೆ ಎರಡು ಗನ್ನುಗಳನ್ನು ಹಾರಿಸಿದೆವು. ಮೊದಲು ನಿಮ್ಮಿಂದ ಆಕ್ರಮಣವಾಗದೆ ನಾವೇನೂ ಆಕ್ರಮಣ ಮಾಡುವ ತಪ್ಪು ಮಾಡಿಲ್ಲ.

"ಕೋಟೆಯನ್ನು ತೆರವು ಮಾಡಬೇಕೆಂಬುದು ನಿಮ್ಮ ಅಪೇಕ್ಷೆಯಾಗಿದೆ. ಇದಕ್ಕೆ ನಮ್ಮ ಉತ್ತರವಿಷ್ಟು. ನೀವು ನಮ್ಮ ಮೇಲಿನವರೆಂದು ಭಾವಿಸಿದ್ದೇವೆ. ನೀವು ನಮ್ಮನ್ನು ಈ ಸ್ಥಿತಿಗೆ ತರುತ್ತೀರೆಂದು ನಾವು ತಿಳಿದಿರಲಿಲ್ಲ. ನಾವು ಇಂದು 10 ಗಂಟೆಯೊಳಗಾಗಿ ನಿಮಗೆ ಶರಣಾಗತರಾಗಬೇಕು ಮತ್ತು ಸರಕಾರಕ್ಕೆ ನಿಷ್ಠರಾದವರೆಂದು ಘೋಷಿಸಬೇಕು. ಇಲ್ಲವಾದರೆ ನಮ್ಮ ಮೇಲೆ ದಾಳಿ ಮಾಡುವುದಾಗಿ ನೀವು ಬರೆದಿರುವಿರಿ. ಈ ಹಿಂದೆ ಯುದ್ಧ ಮಾಡುವದಿಲ್ಲವೆಂದೂ ಥ್ಯಾಕರೆಯವರ ನಡಾವಳಿಯ ಬಗ್ಗೆ ವಿಚಾರಿಸಲು ಸಂತೋಷದಿಂದ ಒಪ್ಪಿರುವುದಾಗಿಯೂ ಮತ್ತು ಸಂಸ್ಥಾನವನ್ನು ನಮಗೆ ಕಾಯಂಗೊಳಿ ಸುವುದಾಗಿಯೂ ನಿಮ್ಮಿಂದ ತಿಳಿಸಲ್ಪಟ್ಟಿತ್ತು. ನಿಮ್ಮ ಹಿಂದಿನ ಕಾಗದದಲ್ಲಿ ಇಂಥ ಕ್ರಮಗಳ ಯಾವ ಸುಳಿವೂ ಇರಲಿಲ್ಲ. ನಾವು ಬ್ರಿಟಿಷ್ ಸರಕಾರಕ್ಕೆ ನಿಷ್ಠರಾಗಿಬೇಕೆಂಬುದು ನೀವು ಅಪೇಕ್ಷಿಸುವಿರಿ. ನಾವು ಜನರಲ್ ವೆಲ್ಲೆಸ್ಲಿಯ ಜೊತೆಗಿದ್ದೆವು ಮತ್ತು ಆಯುಧ ಸಹಿತ ನೆರವು ನೀಡಿದ್ದೆವು. ನಾವು ಬೆಳಗಾವಿ ಗವ್ಹರ್ನರ ಮೇಜರ ಜನರಲ್ ಸರ್ ಥಾಮಸ್ ಮನ್ರೋ ಅವರಿಗೆ ಸಹಕಾರಿಗಳಾಗಿ ಕಾರ್ಯಮಾಡಿದ್ದೆವು. ನಾವು ನೀಡಿದ ಸಹಾಯದ ಬಗ್ಗೆ ತೃಪ್ತಿಪಟ್ಟುಕೊಂಡ ಅವರು ಸಂಸ್ಥಾನವನ್ನು ವಂಶಪಾರಂಪರ್ಯವಾಗಿ ಮುಂದುವರಿಸಿ ಕೊಂಡು ಹೋಗಲು ಸನದು ನೀಡಿದ್ದರು. ಆ ಸನದು ಇಂದಿನವರೆಗು ಜಾರಿಯಲ್ಲಿದೆ. ವಿಚಾರಣೆಯನ್ನು ಬದಿಗಿಟ್ಟು ನಮ್ಮ ಮೇಲೆ ದಾಳಿಮಾಡಬೇಕೆನ್ನುವ ನಿಮ್ಮ ವಿಚಾರಕ್ಕೆ ಸಧ್ಯ ನಾವೇನು ಉತ್ತರ ಬರೆಯಬೇಕು? ನೀವು ಮೇಲಿನವರು ನಮ್ಮ ಬೆಂಬಲಿಗರೆಂದು ಹೆಸರಾದ ನೀವು ನಮ್ಮ ಪ್ರದೇಶವನ್ನು ಪಡೆಯಲು ನಿಮಗೆ ತಿಳಿದಂತೆ ಮಾಡಿರಿ. ನಮ್ಮನ್ನವಲಂಬಿಸಿದ 1,000 ಜನರನ್ನು ಈ ಕಾರ್ಯಾಚರಣೆಯ ಕಾಲಕ್ಕೆ ಗೌರವದಿಂದ ಕಾಣಬೇಕಾಗುವುದು. ನಾವು ಯುದ್ಧ ಮಾಡುವುದಕ್ಕೆ ಸಂಪೂರ್ಣವಾಗಿ ವಿರೋಧವಾಗಿ ರುವ ವಿಷಯ ತಿಳಿಸಿದ್ದೇವೆ. ನೀವು ನಮ್ಮ ಈ ಅನಿಸಿಕೆಯನ್ನು ಉಪೇಕ್ಷಿಸಿ ವೈರಭಾವವನ್ನು ವ್ಯಕ್ತಪಡಿಸುತ್ತಿರುವಿರಿ. ನಮಗೆ ಕೊಡಲ್ಪಟ್ಟ ಕಾಲಾವಧಿಯು ಮುಕ್ತಯಗೊಳ್ಳುವುದು. ನಮ್ಮ ಹತ್ತಿರ ಇದಕ್ಕೆ ಉಪಾಯವೇನಿದೆ? ಇದು ನಿಮ್ಮ ಇಷ್ಟಕ್ಕೆ ಬಿಟ್ಟುಕೊಟ್ಟ ಮಾತಾಗಿದೆ.

"ಸಂಸ್ಥಾನದ ಮುಂದುವರಿಯುವಿಕೆಗೆ ಕುಂದುಬಾರದಂತೆ ತಮಗೆ ಅನುಕೂಲವೆನಿಸಿದ ಕ್ರಮವನ್ನು ಕೈಕೊಳ್ಳಿರಿ."

ಚಾಪ್ಲಿನ್‌ನು ತಾನು ಮುಂಚೆಯೇ ನಿರ್ಧರಿಸಿದಂತೆ ಈ ಕಾಗದವನ್ನು ಅಲಕ್ಷಿಸಿದನು ಮತ್ತು ತನ್ನ ನಿರ್ಣಯದ ಬಗ್ಗೆ ಆತನು ಬಹಳ ಕಠೋರವಾಗಿದ್ದನು. ಅವನು ಡಿಸಂಬರ್ 3ನೆಯ ತಾರೀಖು 11 ಗಂಟೆಯವರೆಗೆ ಕಾಯ್ದನು. ನಂತರ ಕಿತ್ತೂರ ಸೈನಿಕರು ಶರಣುಬರುವವರೆಗೆ ಮತ್ತು ಕೋಟೆಯು ಸ್ವಾಧೀನವಾಗುವವರೆಗೆ ಯುದ್ಧ ನಡೆಸಬೇಕೆಂದು ಕರ್ನಲ್ ಡಿಕನ್‌ನಿಗೆ ಆಜ್ಞೆ ಮಾಡಿದನು. ಅಂದೇ ಬಂಡಾಯಗಾರರ ಬಗ್ಗೆ ಯಾವುದೇ ಸಹಾನುಭೂತಿ ಹೊಂದಿದ ಕಿತ್ತೂರಿನ ಜನರನ್ನು ಹೆದರಿಸಲು ಮಾರ್ಶಲ್ ಲಾ ಜಾರಿಗೊಳಿಸುತ್ತ, ಜಾಹಿರನಾಮೆಯನ್ನು ಕೂಡ ಪ್ರಕಟಪಡಿಸಿದನು.

ಮೇಲಿನ ಕಾಗದವು ಬರೆಯಲ್ಪಟ್ಟಾಗ, ಅವನಿಗೆ ಆತನು ತಿಳಿಸಿದ ವಿಚಾರಗಳು ನಿರಾಕರಿಸಲ್ಪಟ್ಟ ಸಂಗತಿಯಿಂದ ಕೂಡಿದ ಒಂದು ಉತ್ತರವೂ ಕೋಟೆಯ ಕಡೆಯಿಂದ ಬಂದಿತ್ತು. ಒಂದು ಕಾಗದದೊಂದಿಗೆ ತಾನು ತಿಳಿದ ವಿಷಯದ ಒಂದು ಅನುವಾದಿತ ಪ್ರತಿಯನ್ನೂ ಅತನು ಕಳಿಸಿದನು. ಆ ಪತ್ರ ಆತನ ಸಲಹೆಗಳಿಂದ ಕೂಡಿತ್ತು.:

"ಅಗತ್ಯವೆನಿಸುವಂಥ ಪರಿಸ್ಥಿತಿ ಉಂಟಾದಾಗ ದಕ್ಷಿಣ ಮಹಾರಾಷ್ಟ್ರ ಪ್ರದೇಶದಲ್ಲಿ ಮಾರ್ಶಲ್ ಲಾವನ್ನು ಘೋಷಿಸಲು ಸರಕಾರದಿಂದ ಅಧಿಕಾರ ಪಡೆದಿದ್ದು, ಈಗ ಆ ಪರಿಸ್ಥಿತಿಯುಂಟಾಗಿದೆಯೆಂದು ನಾನು ತಿಳಿದಿದ್ದೇನೆ. ಮತ್ತು ಆ ಪ್ರಕಟನೆಯನ್ನು ಕೂಡಲೆ ಪರಿಣಾಮಕಾರಿಯಾಗಿ ಜಾರಿಗೊಳಿಸುವೆನು. ಬ್ರಿಟಿಷ್ ಸರಕಾರಕ್ಕೆ ನಿಷ್ಠರಾಗಿದ್ದರೂ, ಬ್ರಿಟಿಷ್ ಸರಕಾರದೊಂದಿಗೆ ಬಹಿರಂಗವಾಗಿ ವೈರವನ್ನು ತೋರಿಸಿದವರು ಅಥವಾ ಬಹಿರಂಗವಾಗಿ ಸರಕಾರಕ್ಕೆ ವಿರುದ್ಧವಾಗಿ ಬಂಡಾಯಗಾರರಿಗೆ ನೆರವು ನೀಡಿದವರು ಇಲ್ಲವೆ ಗೊತ್ತುಪಡಿಸಿದ ಪ್ರದೇಶದ ಯಾವುದೇ ಭಾಗದಲ್ಲಿ ಬ್ರಿಟಿಷರ ಶತ್ರುಗಳಿಗೆ ಬಹಿರಂಗವಾಗಿ ನೆರವು ನೀಡುವ ಮತ್ತು ಅವರ ಕೃತ್ಯಗಳಿಗೆ ಬೆಂಬಲಿಸುವ ಯಾವತ್ತೂ ಜನರು ಅಪರಾಧಿಗಳೆಂದು ಪರಿಗಣಿಸಲ್ಪಟ್ಟಾಗ ಈ ಪ್ರಕಟನೆಯನ್ವಯ ಮಿಲಿಟರಿ ಕೋರ್ಟಿನ ಮೂಲಕ ಪ್ರಯತ್ನಿಸಲು ಅಧಿಕಾರವಿರುವುದು."

ಸ್ನೇಹಭಾವದಿಂದ ರಾಜಿಮಾಡಿಕೊಳ್ಳುವ ಎಲ್ಲ ಪ್ರಯತ್ನಗಳೂ ವಿಫಲವಾದವು. ಆಗ ರಾಣಿ ಚೆನ್ನಮ್ಮ ಯುದ್ಧ ಮಾಡುವುದನ್ನು ನಿರ್ಣಯಿಸಿದಳು. ಮತ್ತು ಕೊಲ್ಲಾಪುರದ ಸೈನ್ಯವು ತನ್ನ ನೆರವಿಗೆ ಬರುವುದಾದರೆ ಅದನ್ನು ಸಾಧ್ಯವಿದ್ದಷ್ಟು ಹೊತ್ತು ನಿರೀಕ್ಷಿಸಬೇಕೆಂದಳು. ಅದಕ್ಕಾಗಿ ಅವಳು ತನ್ನ ಸರದಾರರನ್ನು ಕಳಿಸಿಕೊಟ್ಟಳು. ನಿಷ್ಠಾವಂತ ಸರದಾರರು ಮತ್ತು ಸೈನಿಕರು ತಮ್ಮ ಅಚ್ಚುಮೆಚ್ಚಿನ ರಾಣಿಗಾಗಿ ಮತ್ತು ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಕೊನೆಯ ಮನಷ್ಯನವರೆಗೆ ಹೋರಾಡುವುದಾಗಿ ಪ್ರತಿಜ್ಞಾಪೂರ್ವಕವಾಗಿ ರಾಣಿ ಚೆನ್ನಮ್ಮನಿಗೆ ಭಾಷೆಕೊಟ್ಟರು. ಅವರು ಯುದ್ಧಕ್ಕೆ ಸನ್ನದ್ಧರಾದರು; ರಣರಂಗವು ಸಿದ್ಧವಾಯಿತು.

ಈ ಮಧ್ಯೆ ಬ್ರಿಟಿಷರ ಸೈನ್ಯದ ಒಂದು ಆಗಂತುಕ ಭಾಗವು ರಾಣಿ ಚೆನ್ನಮ್ಮನ ಸೈನಿಕರಿಂದ ಭದ್ರವಾಗಿ ರಕ್ಷಿಸಲ್ಪಡುತ್ತಿದ್ದ ಕೆಮ್ಮನಮರಡಿಯ ಪಶ್ಚಿಮದ ಕಡೆಗೆ ಕಾಲುಚಾಚಿತು. 25,000 ಜನರಿಗಿಂತ ಹೆಚ್ಚಿರುವ ಬಲಾಢ್ಯವಾದ ಬ್ರಿಟಿಷ್ ಸೈನ್ಯವು ಕೆಮ್ಮನಮರಡಿಯ ಸುತ್ತ

ಹಬ್ಬಿಕೊಂಡಿತು. ಕೆಲವು ದಳಗಳು ರಣಗಟ್ಟಿಕೆರೆಯ ಕಡೆಗೆ ನಡೆದವು. ಹೀಗೆ ಕಿತ್ತೂರಿನ ಭದ್ರಸ್ಥಳವಾದ ಕೆಮ್ಮನಮರಡಿಯು ಬ್ರಿಟಿಷ್ ಸೈನ್ಯದಿಂದ ಸುತ್ತುವರಿಯಲ್ಪಟ್ಟಿತು. ಮೂರೂ ಕಡೆಗಳಿಂದ ಅವರು ಮುನ್ನುಗ್ಗಲು ಪ್ರಾರಂಭಿಸಿದರು. ಕರ್ನಲ್ ಡಿಕನ್‌ನು, ಕರ್ನಲ್ ವಾಕರ್, ಲೆಫ್ಟನಂಟ್ ಕರ್ನಲ್ ಮೆಕ್‌ಲಾಯಿಡ್, ಲೆಫ್ಟನಂಟ್ ಕರ್ನಲ್ ಮನ್ರೊ, ಲೆಫ್ಟನಂಟ್ ಟ್ರೆವನ್ಸನ್ ಇವರ ನೆರವಿನಿಂದ ಬ್ರಿಟಿಷ್ ಸೈನ್ಯದ ಸೇನಾಧಿಪತ್ಯವಹಿಸಿದ್ದರೆ, ಕಿತ್ತೂರ ಸೈನ್ಯದ ದಂಡಾಧಿಪತಿಯಾಗಿ ಸರದಾರ ಗುರುಸಿದ್ದಪ್ಪನಿದ್ದನು. ಅವನಿಗೆ ಅವರಾದಿ ವೀರಪ್ಪ, ಗೋಲಂದಾಜ ಹಿಮ್ಮತಸಿಂಗ್, ನರಸಿಂಹರಾವ, ಗುರುಪುತ್ರಪ್ಪ, ಅಪ್ಪಣ್ಣ ದೇಶಗಾಂವ, ಸಂಗೊಳ್ಳಿ ರಾಯಣ್ಣ, ಬಿಚಗತ್ತಿ ಚೆನಬಸಪ್ಪ ಮತ್ತು ಗಜವೀರ ಇವರು ಸಹಾಯಕರಾಗಿದ್ದರು. ಇವರು ಕಿತ್ತೂರ ಯೋಧರಲ್ಲಿ ಸುಪ್ರಸಿದ್ಧರು.

ಡಿಸಂಬರ್ 3ರಂದು ಇಡೀದಿನ ಗುಂಡುಹಾರಿಸುವುದು ಮುಂದುವರಿಯಿತು. ಭಾರವಾದ ಆಯುಧಗಳನ್ನು ಹೊಂದಿದ, ಮದ್ದಾನೆಯಂಥ ಬ್ರಿಟಿಷ್ ಸೈನ್ಯವು ಬ್ರಿಟಿಷ್ ಸರಕಾರವು ಕಿತ್ತೂರಿನ ಮಣ್ಣಿನ ಮಕ್ಕಳನ್ನು ಬಂಡಾಯಗಾರರೆಂದು ಪರಿಗಣಿಸಿ ಅವರನ್ನು ನಿಗ್ರಹಿಸುವ ಏಕಮೇವ ಘನೋದ್ದೇಶದಿಂದ ಒಂದೇ ಸಮನೆ ಕೆಮ್ಮನಮರಡಿಯ ಮೇಲೆ ದಾಳಿ ನಡೆಸಿತು. ಆಗ ಕಿತ್ತೂರಿನ ಧೀರ ಬಂಟರು ಅಪ್ರತಿಮರಾಗಿ ಕಂಡುಬಂದರು. ಕಡಿಮೆ ಸಂಖ್ಯೆಯ, ಸಾಧನಗಳ ಕೊರತೆಯಿರುವ ಕಿತ್ತೂರಿನ ಕಲಿಗಳು ತಮ್ಮ ಮಾತೃಭೂಮಿಯ ಮತ್ತು ಸ್ವಾತಂತ್ರ್ಯದ ಪ್ರೇಮದಿಂದ ಅಭೇದ್ಯರಾಗಿ, ಅಜೇಯ ರಕ್ಷಕರಾಗಿ ನಿಂತರು. ಅವರು ಎಂದಿನಂತೆ ಧೀರತನದಿಂದ ಹೋರಾಡಿದರು. ಅವರು ಧೈರ್ಯದಿಂದ, ನಿರ್ಧಾರದಿಂದ ಮತ್ತು ಕಲಿತನದಿಂದ ಹೋರಾಡಿದರು. ವೈರಿಗಳ ಆಕ್ರಮಣಕ್ಕೆ ತುತ್ತಾಗುವ ಮುನ್ನ ಪ್ರತಿಯೊಬ್ಬನು ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಿದ್ದನು. ರಾಣಿ ಚೆನ್ನಮ್ಮನ ಮಾತುಗಳು ಇನ್ನೂ ಅವರ ಕಿವಿಗಳಲ್ಲಿ ನಿನದಿಸುತ್ತಿದ್ದವು. ಬ್ರಿಟಿಷ್ ಸೈನಿಕರ ಮೇಲೆ ಅವರು ಹುಚ್ಚು ಧೈರ್ಯದಿಂದ ನುಗ್ಗಿದರು. ಮತ್ತು ಅವರ ಸಂಹಾರ ಮಾಡಿದರು. ಭೀಕರವಾದ ಕೈ-ಕೈ ಯುದ್ಧ ನಡೆಯಿತು. ಬ್ರಿಟಿಷ್ ಮತ್ತು ಕಿತ್ತೂರು ಇವೆರಡೂ ಕಡೆಯ ಸೈನಿಕರು ಗಣನೀಯವಾಗಿ ಕೆಮ್ಮನಮರಡಿಯ ಸುತ್ತಲಿನ ರಣರಂಗದಲ್ಲಿ ಸತ್ತುಬಿದ್ದರು. ಡಿಸಂಬರ್ 3ನೆಯ ತಾರೀಖಿನ ರಾತ್ರಿಯ ಹೊತ್ತಿಗೆ ಕೆಮ್ಮನಮರಡಿಯ ಕೊತ್ತಲವು ಬರೀ ಎಲುವಿನ ಹಂದರವಾಗಿಬಿಟ್ಟಿತು. ಕೆಲವು ಜನ ಬದುಕಿ ಉಳಿದ ಸೈನಿಕರು ಕಿತ್ತೂರ ಕೋಟೆಯ ಪೂರ್ವದ ಕಡೆಗಿರುವ ಗಡಾದಮರಡಿಯ ಪೂರ್ವಕ್ಕೆ ಹಿಮ್ಮೆಟ್ಟಿದರು. 4ನೆಯ ತಾರೀಖು ಮುಂಜಾನೆ ಬ್ರಿಟಿಷ್ ಸೈನಿಕರು ಗಡಾದಮರಡಿಯಮೇಲೆ ಎರಗಿದರು. ಅಲ್ಲಿ ಕಿತ್ತೂರಿನ ಯೋಧರು ಕೆಚ್ಚೆದೆಯಿಂದ ಕಾದಾಡಿದರು. ಸರದಾರ ಗುರುಸಿದ್ದಪ್ಪನು ಗಡಾದಮರಡಿಯ ಅಳುವರಿಯಿಂದ ಸೈನ್ಯಕ್ಕೆ ನಿರ್ದೇಶನ ನೀಡುತ್ತಿದ್ದನು. ರಾಣಿ ಚೆನ್ನಮ್ಮನು ಕೋಟೆಯ ಒಳಗಡೆ ಸೈನ್ಯವನ್ನು ನಿಲ್ಲಿಸಿಕೊಂಡು, ವೈರಿಗಳನ್ನು ಒಳಗಿನಿಂದಲೇ ಪ್ರತಿರೋಧಿಸುವ ಸಿದ್ಧತೆಯಲ್ಲಿ ತೊಡಗಿದ್ದಳು. ಡಿಸಂಬರ್ 4 ನೆಯ ತಾರೀಖಿನ ಇಡೀ ಮುಂಜಾವು ಕಿತ್ತೂರ ಸೈನಿಕರು ಗಡಾದಮರಡಿಯನ್ನು ಕೈವಶಮಾಡಿ

ಕೊಳ್ಳಲು ಹೆಣಗಾಡಿದರು. ಆದರೆ ಬೇಗನೇ ಸೋಲಿಸಲ್ಪಟ್ಟರು. ಬಹಳಷ್ಟು ಜನ ಕಿತ್ತೂರ ಸೈನಿಕರು ಕೊಲ್ಲಲ್ಪಟ್ಟರು. ಬದುಕಿ ಉಳಿದ ಕೆಲವರು ಕೋಟೆಗೆ ಹಿಂದುರಿಗಿದರು. ಅದು ಅವರ ಕೊನೆಯ ಆಸೆಯ ತಾಣವಾಗಿತ್ತು.

ಬಹುಮಂದಿ ವೈರಿಗಳನ್ನು ಕೊಂದ ಕರ್ನಲ್ ಡಿಕನ್‌ನು ಕೋಟೆಯ ಕಡೆಗೆ ಮುಂದುವರಿಯಲು ಆಜ್ಞೆಯಿತ್ತನು ಮತ್ತು ಫಿರಂಗಿಯ ದಳವನ್ನು ಅದರ ಕಾರ್ಯಕ್ಕೆ ಅಣಿಗೊಳಿಸಿದನು. ಅದು ಕೋಟೆಯ ಮುಖ್ಯ ಪ್ರವೇಶ ದ್ವಾರದ ಹತ್ತಿರಕ್ಕೆ ನಡೆಯಿತು. ದಿನದುದ್ದಕ್ಕೂ ಕೋಟೆಯ ಮೇಲೆ ಭಾರೀ ಸಿಡಿಗುಂಡುಗಳನ್ನು ಹಾರಿಸಲಾಯಿತು. ಮತ್ತು ಪರಸ್ಪರ ತೆರಪಿಲ್ಲದ ಗುಂಡಿನ ಕಾಳಗ ನಡೆಯಿತು. ಕಿತ್ತೂರಿನ ಸೈನ್ಯವು ಕೋಟೆಯನ್ನು ರಕ್ಷಿಸಲು ಹೆಣಗುತ್ತಿತ್ತಾದರೂ ಮೇಲಾಧಿಕಾರಿಗಳಿಂದ ವಿಶ್ವಾಸಘಾತಕ ಕೃತ್ಯ ನಡೆದಿತ್ತು. ಮದ್ದು ಕೆಡಿಸಲ್ಪಟ್ಟಿತ್ತು; ಅದು ನಿಷ್ಪ್ರಯೋಜಕವೂ ಆಗಿತ್ತು. ಕೊನೆಗಾಲವು ಸನ್ನಿಹಿತವಾಯಿತು. ಹೊರಗಿನಿಂದ ನೆರವು ಬರುವುದೆಂಬ ರಾಣಿ ಚೆನ್ನಮ್ಮನ ಆಸೆಯು ನುಚ್ಚುನುರಾಯಿತು. ಕೊಲ್ಲಾಪುರದ ಛತ್ರಪತಿಯು ನುಣುಚಿಕೊಳ್ಳತೊಡಗಿದನು. ಅವನು ಯಾವುದೇ ನಿರ್ಣಯಕ್ಕೆ ಬರುವ ಮುನ್ನವೇ ಬ್ರಿಟಿಷರು ಕಿತ್ತೂರನ್ನು ದಮನಮಾಡಿದರು. ರಾಣಿ ಚೆನ್ನಮ್ಮನಿಗೆ ಯಾವ ಆಸೆಯೂ ಉಳಿಯಲಿಲ್ಲ. ಯುದ್ಧ ಭೂಮಿಯಲ್ಲಿ ಮರಣಹೊಂದುವುದೇ ಸಂತೋಷಪ್ರದ ವಾದದ್ದೆನಿಸಿತು. ಮರಣವೂ ಕೂಡ ಆಕೆಯನ್ನು ವಂಚಿಸಿತು. ಆಕೆಯ ಸ್ವಜನರ ವಿಸ್ವಾಸದ್ರೋಹದಿಂದ ಕಿತ್ತೂರಿನ ತೋಪುಗಳ ಗರ್ಜನೆಯು ನಿಂತುಹೋಯಿತು. ಅದಾಗ್ಯೂ ದ್ರೋಹಿಗಳು ಮುಕ್ತವಾಗಿ ಹೋಗಲು ಆಸ್ಪದ ದೊರೆಯಲಿಲ್ಲ. ರಾಣಿ ಚೆನ್ನಮ್ಮನ ಕೋಪೋದ್ರಿಕ್ತ ನಿಷ್ಠಾವಂತ ಸರದಾರರು ದ್ರೋಹಿಗಳಾದ ಕನ್ನೂರ ವೀರಸಂಗಪ್ಪ ಮತ್ತು ಹುರಕಡ್ಲಿ ಮಲ್ಲಪ್ಪ ಇವರನ್ನು ಶೋಧಿಸಿ ತೆಗೆದರು ಮತ್ತು ಅವರನ್ನು ಆನೆಯ ಕಾಲಿನಿಂದ ತುಳಿಸಿಬಿಟ್ಟರು.

ಕಿತ್ತೂರಿನ ಸೈನಿಕರು ಕೋಟೆಯ ಹಿಂಬದಿಯಿಂದ ಹೋರಾಡುವುದನ್ನು ಮುಂದುವರಿಸಿದರು. ಡಿಸಂಬರ್ 4 ನೆಯ ತಾರೀಖಿನ ರಾತ್ರಿಯ ಕೊನೆಯ ಜಾವದಲ್ಲಿ ಕೋಟೆಯು ಭೇದಿಸಲ್ಪಟ್ಟತು; ಬ್ರಿಟಿಷರು ಒಳಗೆ ನುಗ್ಗಿದರು. ಒಳಗಿನ ಕೆಲವು ಸೈನಿಕರು ಪ್ರತಿರೋಧಿಸಲು ಯತ್ನಿಸಿದರು. ಆದರೆ ಬೇಗನೇ ಸೋಲಿಸಲ್ಪಟ್ಟರು. ಕೆಲವರು ಬಂಧನಕ್ಕೊಳಗಾದರು; ಇನ್ನು ಕೆಲವರು ಪಾರಾದರು. ಆದರೆ ಅವರಲ್ಲಿ ಅನೇಕರು ತಮ್ಮ ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಹೊರಾಡುತ್ತಲೇ ಅಸುನೀಗಿದರು. ಡಿಸಂಬರ್ 5ನೆಯ ತಾರೀಖಿನ ಬೆಳಗಿನ ಜಾವದಲ್ಲಿ ಕೋಟೆಯು ಬ್ರಿಟಿಷ್ ಸೈನ್ಯದ ವಶವಾಯಿತು. ಸಾವಿರಾರು ಜನರು ಸಂಹರಿಸಲ್ಪಟ್ಟರು. ಬ್ರಿಟಿಷರ ಕಡೆಗೂ ಅನೇಕ ಪ್ರಾಣಹಾನಿಯುಂಟಾಯಿತು. ಹಂಗಾಮಿ ಕಲೆಕ್ಟರ್ ಮಿ. ಮನ್ರೋ ವಿಧಿವಶದಿಂದ ಗಾಯಗೊಂಡು, ಧಾರವಾಡಕ್ಕೆ ಒಯ್ಯಲ್ಪಟ್ಟನು ಮತ್ತು ಅಲ್ಲಿಯೇ ಡಿಸಂಬರ್ 11ರಂದು ಮಡಿದನು.

ಕಿತ್ತೂರನ್ನು ರಕ್ಷಿಸುವ ಪ್ರಯತ್ನವೆಲ್ಲ ವಿಫಲವಾದಾಗ ಮತ್ತು ಅಲ್ಲಿಯೇ ಸೈನ್ಯವು ದಮನಗೊಳಿಸಲ್ಪಟ್ಟಾಗ ಕೋಟೆಯಿಂದ ಕೆಲವು ಸರದಾರರು ಪಾರಾದರು. ಅವರಲ್ಲಿ

ಅವರಾದಿ ವೀರಪ್ಪ, ಕಿಂಕೇರಿ ವೆಂಕಣ್ಣ ಮತ್ತು ಕಮ್ಮಾ ಇಮಾಮ ಇವರಿದ್ದರು. ಅವರು ಶಮಶೇರಘರದ ಪಶ್ಚಿಮದ ಕಡೆಯ ಅಡವಿಗೆ ಓಡಿಹೋದರು. ಬದುಕಿದ್ದ ಕೆಲವು ಹೋರಾಟಗಾರರು ಶರಣು ಬರುವಂತೆ ಮರ್ದಿಸಲ್ಪಟ್ಟರು. ಇಂಥವರಲ್ಲಿ ಸರದಾರ ಗುರುಸಿದ್ದಪ್ಪ ಮತ್ತು ಸಂಗೊಳ್ಳಿ ರಾಯಣ್ಣ ಇವರಿದ್ದರು. ಗುಪ್ತವಾಗಿ ಸಾಗಿಸಲ್ಪಟ್ಟ ಬ್ರಿಟಿಷರ ಹಣವು ತನ್ನ ಪಾತ್ರವನ್ನು ನಿರ್ವಹಿಸಿತು. ರಾಣಿ ಚೆನ್ನಮ್ಮನು ತನ್ನ ಶೂರ ಸರದಾರರ ಒತ್ತಾಯಕ್ಕೆ ಒಪ್ಪಿಕೊಂಡು, ತನ್ನ ಸೊಸೆ ವೀರವ್ವ ಮತ್ತು ಜಾನಕೀಬಾಯಿಯವರೊಂದಿಗೆ ಕೋಟೆಯ ಈಶಾನ್ಯ ಬಾಗಿಲಿನಿಂದ ಪಾರಾಗಿ ಸಂಗೊಳ್ಳಿಗೆ ಹೋಗಲು ಯತ್ನಿಸಿದಳು. ಆದರೆ ಅವರು ಬ್ರಿಟಿಷ್ ಸೈನಿಕರ ಕೈವಶರಾದರು. ಅವರೀರ್ವರೂ ಬ್ರಿಟಿಷರ ಸೆರೆಯಾಳುಗಳಾದರು. ಈ ಗೆಲುವಿನಿಂದ ಸ್ವಾಭಾವಿಕವಾಗಿ ಉಬ್ಬಿಹೋದ ಚಾಪ್ಲಿನ್‌ನು ನ್ಯೂನ್‌ಹ್ಯಾಮ್‌ನಿಗೆ ಅಂದೇ ಒಂದು ವಿವರವಾದ ಕಾಗದ ಬರೆದು, ನಡೆದ ಕಥೆಯನ್ನೆಲ್ಲ ವಿವರಿಸಿದನು :

"ಕಿತ್ತೂರಿನ ಶರಣಾಗತಿಯ ವಿಷಯವಾಗಿ ನಿನ್ನೆ ಕಳಿಸಿದ ನನ್ನ ಕಾಗದವನ್ನು ತಮ್ಮ ಗಮನಕ್ಕೆ ತರುತ್ತ, ಮಾನ್ಯ ಗವ್ಹರ್ನರರ ಮಾಹಿತಿಗಾಗಿ ಈ ವಿಷಯವನ್ನು ತಿಳಿಸುತ್ತಿದ್ದೇನೆ. ಕೋಟೆಯನ್ನು ಪೂರ್ತಿಯಾಗಿ ನಿನ್ನೆ ರಾತ್ರಿ ವಶಪಡಿಸಿಕೊಳ್ಳಲಾಯಿತು. ಅದು ಕಾವಲು ಪಡೆಯಿಂದ ರಕ್ಷಿಸಲ್ಪಟ್ಟಿತ್ತು. ಆದಾಗ್ಯೂ ಅವರು ಶರಣುಬರುವಂತೆ ಮಾಡುವ ಕರ್ನಲ್ ಡಿಕನ್‌ನ ಪ್ರಯತ್ನವು ಫಲಪ್ರದವಾಯಿತು. ರಾತ್ರಿಯ ಹೊತ್ತಿನಲ್ಲಿ ಬಂಡಾಯಗಾರರ ಮುಖಂಡರ ಮುಖ್ಯಸ್ಥರು ತಮ್ಮ ಪ್ರಾಣಗಳನ್ನು ರಕ್ಷಿಸಬೇಕೆಂಬ ಕರಾರಿನ ಮೇಲೆ ಶರಣುಬಂದರು. ಉಳಿದ ಸೈನ್ಯಾಧಿಕಾರಿಗಳು ಬಹಳ ಎದೆಗುಂದಿದ್ದರು. ಅವರನ್ನು ಬೆನ್ನಟ್ಟಿ ಬಂಧಿಸಲಾಯಿತು. ಇಂದು ಬೆಳಗಿನಲ್ಲಿ ಅವರು ತಮ್ಮ ಆಯುಧಗಳನ್ನು ಕೆಳಗಿಡಲು ಒಪ್ಪಿಕೊಂಡರು. ಅದರ ಪರಿಣಾಮವಾಗಿ ಸುಮಾರು ಮುಂಜಾನೆ 8 ಗಂಟೆಗೆ ಮೇಲಿನ ಹಾಗೂ ಕೆಳಗಿನ ಕೋಟೆಗಳು ಬ್ರಿಟಿಷ್ ಸೈನ್ಯದ ವಶಕ್ಕೆ ಬಂದವು.

"ಮುಖಂಡರ ಹೆಸರುಗಳನ್ನು ಅವರೇ ಕೊಟ್ಟಂತೆ ಮಾರ್ಜಿನ್ನಿನಲ್ಲಿ ಬರೆಯಲಾಗಿದೆ.

"ಅವರಾದಿ ವೀರಪ್ಪನ ಮುಖಂಡತ್ವದ ಒಂದು ಸಣ್ಣ ಗುಂಪು ತಪ್ಪಿಸಿಕೊಂಡಂತೆ ತೋರುತ್ತದೆ. ಅವನು ಈ ಘಟನೆಯ ಉದ್ದಕ್ಕೂ ಸೈನ್ಯದ ಮುಖಂಡನಾಗಿದ್ದನು. ಸರಕಾರಕ್ಕೆ ಆತನ ವಿರೋಧವು ಅತ್ಯಂತ ಮುಖ್ಯವಾಗಿದ್ದು, ಈ ಹಿಂದಿನ ಘೋರಕೃತ್ಯಗಳಿಗೆ ಆತನೇ ಹೊಣೆಗಾರನೆಂದು ಗ್ರಹಿಸಲಾಗಿದೆ. ಅವನು ಮುನ್ಸಿಗಳ ಗುಂಪಿನ, ಗೋವಿಂದಯ್ಯ, ನಾರಾಯಣ ಮತ್ತು ಯಶವಂತ ಈ ಮೂವರು ಗುಮಾಸ್ಥರ ಮುಖ್ಯಸ್ಥನಾದ ಕಿಂಕೇರಿ ವೆಂಕಣ್ಣನೊಂದಿಗೆ ಶಮಶೇರಘರದ ಕಡೆಗೆ ಹೋಗಿರುವುದಾಗಿ ಭಾವಿಸಲಾಗಿದೆ.

"ಹುಚ್ಚು ಸಾಹಸಿಗಳ ಗುಂಪಿನ ಮುಖ್ಯಸ್ಥನಾದ ಕುಮ್ಮಾ ಇಮಾಮನು ಅದೇ ದಿಕ್ಕಿನ ಕಡೆಗೆ ಪಲಾಯನ ಮಾಡಿರುವುದಾಗಿ ತಿಳಿದಿದೆ. ಈ ವ್ಯಕ್ತಿಗಳ – ಪ್ರತಿಯೊಬ್ಬರ – ಬಂಧನಕ್ಕೆ ನಾನು ಬಹುಮಾನಗಳನ್ನು ಇಟ್ಟಿದ್ದೇನೆ.

"ಕಠಿಣ ಕ್ರಮ ಕೈಗೊಂಡರೆ ಪಲಾಯನಮಾಡಿದವರು ಗೋವಾದಲ್ಲಿಯ ಘಟ್ಟದ ಪ್ರದೇಶದಲ್ಲಿ ತಪ್ಪಿಸಿಕೊಳ್ಳಲು ಪ್ರಯತ್ನಿಸುವರು. ಅವರು ಶಮಶೇರಘರವನ್ನು ಹಿಡಿದು

ಕೊಳ್ಳುವರೆಂದು ನಾನು ಭಾವಿಸಿಲ್ಲ. ಆ ಕೋಟೆಯನ್ನು ಕೈವಶಮಾಡಿಕೊಳ್ಳಲು ನಾನು ಒಂದು ಸೈನ್ಯಪಡೆಯನ್ನು ಕಳಿಸಬೇಕೆಂದು ಕರ್ನಲ್ ಡಿಕನ್‌ನಿಗೆ ವಿನಂತಿಸಿಕೊಂಡಿದ್ದೇನೆ.

"ನನ್ನ ಸಲಹೆಯಮೇರೆಗೆ ಕರ್ನಲ್ ಡಿಕನ್‌ನು ದಿವಂಗತ ದೇಸಾಯಿಯವರ ಕುಟುಂಬದ ಹೆಣ್ಣು ಮಕ್ಕಳ ರಕ್ಷಣೆಗಾಗಿ ಅತ್ಯಂತ ವ್ಯವಹಾರಿಕವಾದ ವ್ಯವಸ್ಥೆಯನ್ನು ಮಾಡಿದ್ದಾನೆ. ಅವರಿಗೆ ಯೋಗ್ಯ ಜೀವನಾಂಶವನ್ನು ಶಿಫಾರಸುಮಾಡುವುದು ನನ್ನ ಉದ್ದೇಶವಾಗಿದೆ.

"ನಾವು ವಶಪಡಿಸಿಕೊಂಡ ಸಂಪತ್ತು ಮತ್ತು ಆಸ್ತಿಯ ವಿವರವಾದ ಪಟ್ಟಿಯನ್ನು ತಯಾರಿಸಲು ಆ ಅಧಿಕಾರಿಗಳ ಒಂದು ಕಮಿಟಿಯನ್ನು ನೇಮಿಸಲಾಗಿದೆ. ಆ ಆಸ್ತಿಯು ಸಾಕಷ್ಟಿದೆಯೆಂದು ನಾನಂದುಕೊಂಡಿದ್ದೇನೆ. ಮಿ.ಥ್ಯಾಕರೆನಿಂದ ಮೊಹರು ಮಾಡಲ್ಪಟ್ಟ ಒಂದು ಸಣ್ಣ ಭಾಗ ಮಾತ್ರ ಬಂಡಾಯಗಾರರಿಂದ ಅಪಹರಿಸಲ್ಪಟ್ಟಿರುವುದಾಗಿ ನನಗೆ ತಿಳಿದು ಬಂದಿದೆ.

"ದಿವಂಗತ ಮಿ.ಥ್ಯಾಕರೆಯು ಕಿತ್ತೂರಿನ ಪ್ರದೇಶವನ್ನು ಸ್ವಾಧೀನ ಪಡಿಸಿಕೊಳ್ಳುವ ಮತ್ತು ವ್ಯವಸ್ಥೆಮಾಡುವ ಬಗ್ಗೆ ಮಾಡಿದ ಆಜ್ಞೆಗಳನ್ನು ಜಾರಿಗೊಳಿಸಲು ಮಿ.ಸ್ಟೀವನ್ಸನ್‌ನಿಗೆ ತಿಳಿಸಲಾಗಿದೆ.

"ಸಧ್ಯಕ್ಕೆ ಬೆಳಗಾವಿ ಕೋಟೆಯಲ್ಲಿ ಅತ್ಯಂತ ಪ್ರಮುಖರಾದ ಕಿತ್ತೂರಿನ ಬಂಡಾಯಗಾರರನ್ನು ಬಂಧನದಲ್ಲಿಡಲು ನಾನು ಸೂಚಿಸುತ್ತೇನೆ. ಯಾವ ಷರತ್ತುಗಳಿಗನುಗುಣವಾಗಿ ಅವರು ಶರಣುಬರುವರೋ ಅವುಗಳನ್ನು ನನ್ನ ನಿರ್ದೇಶನಕ್ಕಾಗಿ ಸರಕಾರದ ಆಜ್ಞೆಯೊಂದಿಗೆ ಒದಗಿಸಬೇಕಾಗಿದೆ. ಅವರ ಜೀವವನ್ನು ಉಳಿಸಲೇಬೇಕು. ಆದರೆ ಅವರು ಬಹಿರಂಗವಾಗಿ ಮಾಡಿದ ಬಂಡಾಯದ ಕೃತ್ಯಕ್ಕಾಗಿ ಗವ್ಹರ್ನರಿಗೆ ಸೂಕ್ತವೆಂದು ಕಂಡುಬಂದ ಬೇರೆ ತರಹದ ಶಿಕ್ಷೆಗೆ ತಕ್ಕವರಾಗಿದ್ದಾರೆ. ಅವರು ತುಂಬ ಉನ್ಮತ್ತರಾಗಿದ್ದಾಗ್ಯೂ, ಅವರು ಅನಂತರ ಪ್ರತಿಭಟನೆಯನ್ನು ನಿಲ್ಲಿಸಿ, ರಾಜನಿಷ್ಠರಾಗಲು ಒಪ್ಪಿಕೊಂಡಿದ್ದರೆ ಅಸಮಾನ್ಯ ದಯೆ ಹಾಗೂ ಔದಾರ್ಯವನ್ನು ತೋರಿಸಲು ಸಿದ್ಧರಾಗಿದ್ದೆವು. ಅದನ್ನು ಮೀರಿ ಅವರು ವರ್ತಿಸಿದರು.

"ನಾನು ಕೊಟ್ಟ ವಾಯಿದೆಯಂತೆ ಕರ್ನಲ್ ಡಿಕನ್‌ನು ಬರುವುದಕ್ಕಿಂತ ಮೊದಲು ಮದ್ರಾಸ್ 8ನೆಯ ವಿಭಾಗದ ಕರ್ನಲ್ ವಾಕರ್ ಅವರು ನಮ್ಮೊಂದಿಗೆ ಸಹಕರಿಸಿದುದಕ್ಕೆ ಬಹಳ ಋಣಿಯಾಗಿದ್ದೇನೆಂದು ತಿಳಿಸಲು ತುಂಬ ಸಂತೋಷವಾಗುತ್ತದೆ. ನಮ್ಮ ಸಂಧಾನಗಳು ಇತ್ಯರ್ಥವಾಗದೆ ಇರುವಾಗ ಕರ್ನಲ್ ಡಿಕನ್ ಹೃತ್ಪೂರ್ವಕವಾದ ನೆರವು ನೀಡಿದ್ದನ್ನೂ ನಾನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳಬೇಕು. ಶ್ರೇಷ್ಠತಮ ಅಧಿಕಾರಿಯಾದ ಕರ್ನಲ್ ಡಿಕನ್ ಸಮರ್ಥ ಹಾಗೂ ನ್ಯಾಯಸಮ್ಮತವಾದ ವ್ಯವಸ್ಥೆಯಿಂದ ಅಲ್ಪಾವಧಿಯಲ್ಲಿ ಭದ್ರವಾದ ಕಿತ್ತೂರಕೋಟೆ ನಮ್ಮ ವಶವಾಗುವಂತೆ ಮಾಡಿದನು. ಅಸಾಧಾರಣ ದೃಢಸಂಕಲ್ಪದ ಶಕ್ತಿ ಮತ್ತು ಸಾಮರ್ಥ್ಯಗಳಿಂದ ಕೋಟೆಯ ಸಮಸ್ಯೆ ನಿವಾರಿಸಲ್ಪಟ್ಟಿತು. ಆತನ ಶಕ್ತಿ ಸಾಮರ್ಥ್ಯಗಳು ನನ್ನ ವರ್ಣನೆಗೆ ಮೀರಿದವು. ಅವು ಮಾನ್ಯ ಗವ್ಹರ್ನರರಿಂದ ಪ್ರಶಂಸಿಸಲ್ಪಡುವವೆಂಬ ಭರವಸೆ ನನಗಿದೆ.

"ವೈರಿಗಳ ಆಕ್ರಮಣ ಪ್ರವೇಶ ಸ್ಥಳವಾದ ಕೆಮ್ಮನಮರಡಿಯನ್ನು ಮುತ್ತಿಗೆ ಹಾಕುವಲ್ಲಿ 4 ನೆಯ ಮದ್ರಾಸ್ ಅಶ್ವಸೈನ್ಯದ ಕರ್ನಲ್ ಮೈಕ್‌ಲಾಯಿಡ್‌ನ ಸೇನಾಧಿಪತ್ಯದ ಸೈನ್ಯ ತೋರಿಸಿದ ಸಾಹಸವನ್ನು ಸಮೀಪದಿಂದ ಕಂಡ ನನಗೆ ನಿಸ್ಸಂದೇಹವಾಗಿ ಅತ್ಯಂತ ಸಂತೋಷವುಂಟಾಯಿತು. ಅವರ ಧೈರ್ಯ ಸಾಹಸದ ಬಗ್ಗೆ ಸಂಬಂಧಿಸಿದ ಅಧಿಕಾರಿಗಳ ಮುಖಾಂತರ ಗವ್ಹರ್ನರರ ಲಕ್ಷಕ್ಕೆ ತಂದುಕೊಡಬೇಕಾಗುವುದು.

"ನನ್ನ ಬೆಂಗಾವಲಿಗರಾದ ಕ್ಯಾಪ್ಟನ್ ಸ್ಪಿಲ್ಲರ್ ಮತ್ತು ಜೇಮಸನ್ ಇವರ ಉತ್ಸಾಹ ಮತ್ತು ಕಾರ್ಯಚಟುವಟಿಕೆಗಳ ಬಗ್ಗೆ ನನ್ನ ಪ್ರಶಂಸೆಯನ್ನು ವ್ಯಕ್ತಪಡಿಸದೆ ಈ ಕಾಗದವನ್ನು ಮುಗಿಸುವಂತಿಲ್ಲ."

ಹೀಗೆ ನಮ್ಮ ದೇಶದ ಇತಿಹಾಸದ ವೈಭವಪೂರ್ಣ ಅಧ್ಯಾಯಗಳಲ್ಲೊಂದಾದ ಕಿತ್ತೂರಿನ ಅಧ್ಯಾಯವು ಮುಕ್ತಾಯಗೊಂಡಿತು. ಕಿತ್ತೂರ ಕೋಟೆಯ ವಿಸ್ತಾರವಾದ ಬಯಲು ಕೆಚ್ಚೆದೆಯ ಸ್ವಾತಂತ್ರ್ಯಯೋಧರ ಮೃತದೇಹಗಳಿಂದ ಆಚ್ಛಾದಿತವಾಯಿತು. ಈ ಹೆಣಗಳ ರಾಶಿಯ ಮೇಲೆ ವಿದೇಶಿಧ್ವಜವು ಆಕಾಶವನ್ನು ಮುತ್ತಿದ ಹೊಗೆಯ ಮೋಡಗಳ ಮೇಲೆ 1824 ಡಿಸಂಬರ್ 5 ರಂದು ಮುಂಜಾನೆ ಹಾರಿಸಲ್ಪಟ್ಟಿತು. ಅದು ಭಗ್ನವಾದ ಕಿತ್ತೂರ ಕೋಟೆಯ ಮೇಲೆ ಹಾರಾಡುವುದು ಕಾಣತೊಡಗಿತು. ಅಸಂಖ್ಯ ಸೈನಿಕರ ಶಕ್ತಿಯಿಂದ ಕೂಡಿದ ಬ್ರಿಟಿಷರು ಸಣ್ಣ ರಾಜ್ಯದ ಸಣ್ಣ ಸೈನ್ಯವನ್ನು ನಿಸ್ಸಂದೇಹವಾಗಿ ಸೋಲಿಸಿದರು; ಸಂಹಾರಮಾಡಿದರು. ಕಿತ್ತೂರು ಅನಾಥವಾಯಿತು. ಇದು ನಮ್ಮ ದೇಶದ ಇತಿಹಾಸದಲ್ಲಿ ಅತ್ಯಂತ ಕಾಳರಾತ್ರಿಯ ದಿನಗಳಲ್ಲೊಂದು. ಆದರೆ ಈ ವೀರಕಾಳಗದಲ್ಲಿ ರಾಣಿ ಚೆನ್ನಮ್ಮನು ತೋರಿದ ಮುಖಂಡತ್ವ, ದೇಶಾಭಿಮಾನ, ಎದೆಗಾರಿಕೆ, ಕಲಿತನ ಮತ್ತು ಸ್ಥೈರ್ಯ ಈ ಸ್ಫೂರ್ತಿದಾಯಕ ಗುಣಗಳು ದೇಶದ ಈ ಭಾಗದ ಜನತೆಯ ಮುಂದಿನ ಪೀಳಿಗೆಗಳಿಗೆ ಸ್ಫೂರ್ತಿಯ ನೆಲೆಯಾಗಿವೆ. ರಾಣಿ ಚೆನ್ನಮ್ಮನಿಂದ ಹೊತ್ತಿಸಲ್ಪಟ್ಟ ಸ್ವಾತಂತ್ರ್ಯ ಪ್ರೇಮದ ಜ್ವಾಲೆಯು ಈ ಸೋಲಿನಿಂದ ನಂದಲಿಲ್ಲ. ಅದು ಕೆಲಕಾಲ ನಿರ್ವೀರ್ಯವಾಯಿತು. ಇದೊಂದು ಅಲ್ಪಕಾಲಿಕವಾದ ಸುಪ್ತಾವಸ್ಥೆ ಅಷ್ಟೆ.

# 8. ಯುದ್ಧಾನಂತರ

ಕಿತ್ತೂರ ಸೈನ್ಯವು ಸೋತೊಡನೆಯೇ ಚಾಪ್ಲಿನ್‌ನು ಬದುಕಿ ಉಳಿದ ಕೆಲವರನ್ನು ಬಂಧನದಲ್ಲಿರಿಸಿದನು. ಅವರಲ್ಲಿ ಸರದಾರ ಗುರುಸಿದ್ದಪ್ಪ ಮತ್ತು ಸಂಗೊಳ್ಳಿ ರಾಯಣ್ಣ ಪ್ರಮುಖರು. ಆಗಿನ ಕಮಿಶನರ್ ಮಿ. ಮನ್ರೋ ಇತರ ಕೆಲವು ಅಧಿಕಾರಿಗಳೊಂದಿಗೆ ಅರಮನೆಯನ್ನು ಕೊಳ್ಳೆಹೊಡೆದನು ಮತ್ತು ಎಲ್ಲ ಸಂಪತ್ತನ್ನು ಲೂಟಿ ಮಾಡಿದನು. ಬ್ರಿಟಿಷರು ಭಂಡಾರದಲ್ಲಿದ್ದ 16 ಲಕ್ಷ ರೂಪಾಯಿ ಮತ್ತು 4 ಲಕ್ಷ ಬೆಲೆಬಾಳುವ ರತ್ನಾಭರಣಗಳ ಒಟ್ಟು ಸಂಪತ್ತನ್ನು ದೋಚಿಕೊಂಡರೆಂದು ಹೇಳಲಾಗುತ್ತಿದೆ. ಅವರು ಕಿತ್ತೂರು ಸೈನ್ಯದ 3,000 ಕುದುರೆ, 2,000 ಒಂಟೆ ಮತ್ತು ಸುಮಾರು ಒಂದು ನೂರು ಆನೆಗಳನ್ನು ಹಾಗೂ ಶಿಲ್ಕು ಉಳಿದ ಯಾವತ್ತೂ ಮದ್ದು, 36 ತೋಪು, 56 ಬಂದೂಕು ಮತ್ತು ಖಡ್ಗ, ಬಿಲ್ಲು, ಬಾಣ, ಈಟಿ ಮೊದಲಾದ ಇತರ ಬಹುಸಂಖ್ಯೆಯ ಆಯುಧಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಆಗ ಕಿತ್ತೂರ ದೇಸಗತಿಗೆ 286 ಗ್ರಾಮಗಳು, 72 ಸಣ್ಣ ಸಣ್ಣ ಹಳ್ಳಿಗಳು ಸಂಬಂಧಿಸಿದ್ದವು. ಅದರ ಸುತ್ತಮುತ್ತಲಿನ ಪ್ರದೇಶದ ವಾರ್ಷಿಕ ಆದಾಯ 5 ಲಕ್ಷ ರೂಪಾಯಿ ಆಗಿದ್ದಿತು.

ರಾಣಿ ಚೆನ್ನಮ್ಮ, ಶಿವಲಿಂಗರುದ್ರ ಸರ್ಜನ ಪತ್ನಿ ವಿಧವೆ ವೀರವ್ವ, ಆಕೆಯ ಮಡಿದ ಮಗ ಶಿವಬಸವರಾಜನ ಪತ್ನಿ ವಿಧವೆ ಜಾನಕಿಬಾಯಿ ಇವರು ಅನಂತರ ಸುಮಾರು ಒಂದು ವಾರದವರೆಗೆ ಕಿತ್ತೂರಿನ ಅರಮನೆಯಲ್ಲಿ ಬಂಧಿತರಾಗಿದ್ದರು. ಅವರು ಬ್ರಿಟಿಷರಿಗೆ ಕಿತ್ತೂರು ದೇಸಗತಿಯ ಹಕ್ಕನ್ನು ಬಿಟ್ಟುಕೊಡುವ ಪ್ರಮಾಣಪತ್ರದ ಮೇಲೆ ಸಹಿ ಮಾಡಬೇಕಾದ ಒತ್ತಾಯಕ್ಕೆ ಒಳಗಾಗಿದ್ದರು. ಆಮೇಲೆ ಅವರನ್ನು ಭದ್ರಗಾವಲಿನಲ್ಲಿ ಬೈಲಹೊಂಗಲದ ಅಭೇದ್ಯವಾದ ಕೋಟೆಗೆ ಕಳಿಸಲಾಯಿತು. ಅಲ್ಲಿ ಅವರು ರಾಜಕೀಯ ಕೈದಿಗಳಾಗಿ ಉಳಿದರು. ಕಿತ್ತೂರ ದೇಸಗತಿಯ ಕುಟುಂಬದ ಮೂವರು ಮಹಿಳೆಯರಿಗೆ ವರ್ಷಕ್ಕೆ ಒಟ್ಟು 40,000 ರೂ.ಗಳ ನಿವೃತ್ತಿವೇತನವನ್ನು ಗೊತ್ತುಪಡಿಸಲಾಯಿತು.

ಕಿತ್ತೂರ ಪ್ರದೇಶದಲ್ಲಿ ಕೆಲವು ಕಾಲ ಭೀಕರ ಶಾಂತಿ ನೆಲೆಸಿತ್ತು. ಹೀಗಿದ್ದಾಗಲೂ ಕೂಡ ಕಿತ್ತೂರಿನ ಹಲವು ಜನರು ಕಿತ್ತೂರ ದೇಶಗತಿಯನ್ನು ಮರಳಿ ಪಡೆಯುವ ಕನಸು ಕಾಣುತ್ತಿದ್ದರು. ಪ್ರಭಾವಿಯಾದ ಕಿತ್ತೂರಿನ ಕೋಟೆ ಮತ್ತು ಅದರ ಅರಮನೆಯ ಗೋಪುರ ಇವು ಅದರ ಗತವೈಭವದ ದೃಗ್ಗೋಚರ ಮೂರ್ತಿಸ್ವರೂಪವಾಗಿದ್ದು, ಜನತೆಯ ಮನಸ್ಸಿನಲ್ಲಿ ಅವರ ಆಕಾಂಕ್ಷೆಗಳನ್ನು ಹಸಿರಾಗಿ ಉಳಿಸಿದ್ದವು. ಪ್ರಜೆಗಳ ಮನಸ್ಸಿನಲ್ಲಿ ರಾಣಿ ಚೆನ್ನಮ್ಮನ

ಸ್ಮರಣೆಯನ್ನು ಜೀವಂತವಾಗಿರಿಸುವ ಈ ಎಲ್ಲ ಕಟ್ಟಡಗಳನ್ನು ಹಾಳುಗೆಡವಿ ನೆಲಸಮಮಾಡಬೇಕೆಂದು ಚಾಪ್ಲಿನ್‌ನು ಯೋಚಿಸಿದನು. ಹೀಗೆ ನೆಲಸಮಮಾಡಿದರೆ ಅವರು ಗತವೈಭವದ ನಿರಂತರವಾದ ಸ್ಮರಣೆಯಿಂದ ಪಡೆಯುವ ದೇಶಾಭಿಮಾನ ಕಮರಿ ಹೋಗುವುದೆಂದೂ ಭಾವಿಸಿದನು. ಅದಕ್ಕಾಗಿ ಅರಮನೆಯ ಮುಖ್ಯ ಭಾಗವನ್ನು ಕೆಡವಿಹಾಕುವಂತೆ ಆಜ್ಞೆ ಮಾಡಿದನು. ಭವ್ಯವಾದ ದ್ವಾರಮಂಟಪದ ದೊಡ್ಡ ದೊಡ್ಡ ತೇಗಿನ ಕಂಬಗಳು ಹರಾಜಿನಲ್ಲಿ ನಿಕೃಷ್ಟ ಬೆಲೆಗೆ ಮಾರಲ್ಪಟ್ಟವು. ಇತರ ಬೆಲೆಯುಳ್ಳ ಕಟ್ಟಿಗೆಯ ಚೌಕಟ್ಟುಗಳು, ಅಲಂಕಾರಯುಕ್ತವಾದ ಕಿಡಿಕೆಯ ಚೌಕಟ್ಟುಗಳು, ಮತ್ತು ಬಾಗಿಲುಗಳನ್ನು ಮಾರಾಟಮಾಡಲಾಯಿತು. ಇಲ್ಲವೆ ಹಾಗೆಯೇ ತೆಗೆದುಕೊಂಡು ಹೋಗಲು ಒಪ್ಪಿಗೆ ನೀಡಲಾಯಿತು. ಅರಮನೆಯ ಆಸ್ತಿಯನ್ನು ಕೊಳ್ಳೆಯೊಡೆಯಲು ಮುಕ್ತ ಅನುಮತಿಯಿದ್ದಂತಿತ್ತು.

ಬೈಲಹೊಂಗಲ ಸೆರೆಮನೆಯಲ್ಲಿ ಶಕ್ತಿಗುಂದುತ್ತಿರುವ ರಾಣಿ ಚೆನ್ನಮ್ಮ ಮತ್ತು ವೀರವ್ವ ಇವರು ತಮ್ಮ ಸ್ವಾಮಿನಿಷ್ಠ ಸರದಾರರಿಂದ ಮತ್ತೊಂದು ಬಂಡು ಏಳುವುದೆಂದೂ ಕಿತ್ತೂರ ದೇಸಗತಿಯು ಪುನಃ ಸ್ಥಾಪಿತವಾಗುವುದೆಂದೂ ಕನಸು ಕಾಣುತ್ತಿದ್ದರು. ಸಂಗೊಳ್ಳಿ ರಾಯಣ್ಣನಂಥ ಕೆಲವು ಬಂಡಾಯಗಾರರು ವೇಷಬದಲಿಸಿಕೊಂಡು ಅವರನ್ನು ಆಗೊಮ್ಮೆ ಈಗೊಮ್ಮೆ ಭೆಟ್ಟಿಯಾಗಿ ಕಿತ್ತೂರಿನ ಸಮಾಚಾರವನ್ನು ತಿಳಿಸುತ್ತಿದ್ದರು. ರಾಣಿ ಚೆನ್ನಮ್ಮನು ಇನ್ನೊಂದು ಬಂಡಾಯವನ್ನು ಸಂಘಟಿಸಲು ಪ್ರೋತ್ಸಾಹಿಸುತ್ತಿದ್ದಳು. ಆದರೆ ಈ ಬಂಡಾಯ ನೀತಿ ಭ್ರಷ್ಟತೆಯಿಂದಾಗಿ ಹಿಂದಿನ ಕಿತ್ತೂರ ಯುದ್ಧದಲ್ಲಿ ಸಾವಿರಾರು ಜನರ ಭಯಂಕರ ಸಂಹಾರವಾದಂತಹ ಮತ್ತು ಅವಮಾನಕರವಾದ ಸೋಲನ್ನು ಅನುಭವಿಸಿದಂತೆ ಆಗಬಾರದೆಂಬುದು ಆಕೆಯ ಬಯಕೆಯಾಗಿತ್ತು.

ರಾಣಿ ಚೆನ್ನಮ್ಮನು ತನ್ನ ಬಹುಪಾಲು ವೇಳೆಯನ್ನು ಪೂಜೆ ಹಾಗೂ ಆಧ್ಯಾತ್ಮಿಕ ಸಾಧನೆಯಲ್ಲಿ ಕಳೆದಳು. ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಹಗಲಿರುಳೂ ಹಂಬಲಿಸುತ್ತಿದ್ದ ಅವಳಿಗೆ ಅದೇ ಒಂದು ನಿರಂತರವಾದ ಕನಸಾಗಿತ್ತು. ಆಕೆ ಆಶಿಸಿಯೇ ಆಶಿಸಿದಳು. ಆದರೆ ಏನೂ ಫಲಿಸಲಿಲ್ಲ. ಬೈಲಹೊಂಗಲ ಕೋಟೆಯ ಕತ್ತಲೆಯ ಕೋಣೆಯಲ್ಲಿ ಚಿಂತಾಕ್ರಾಂತಳಾದ ರಾಣಿ ಚೆನ್ನಮ್ಮನು – "ಎಂದು ಬ್ರಿಟಿಷರೊಡನೆ ಇನ್ನೊಂದು ಹೋರಾಟ ಮಾಡುವ ಅವಕಾಶ ಯಾವಾಗ ದೊರಕೀತೋ, ಎಂದು ನನ್ನ ಪ್ರೀತಿಯ ಪ್ರಜೆಗಳು ಮುಕ್ತರಾಗುತ್ತಾರೆಯೋ, ಎಂದು ನನ್ನ ರಾಜ್ಯ ಪುನಃ ಸ್ವಾತಂತ್ರ್ಯವನ್ನು ಪಡೆಯುತ್ತದೆಯೋ" ಎಂಬ ಕನಸುಗಳನ್ನೇ ಕಾಣುತ್ತ ದಿನದಿನಕ್ಕೆ ಸೊರಗಿ ಸಣ್ಣಾದಳು. ಬೈಲಹೊಂಗಲ ಕೋಟೆಯಲ್ಲಿಯ ಸುಮಾರು ಐದು ವರುಷಗಳ ಸೆರೆಮನೆವಾಸದ ನಂತರ, 1829 ಫೆಬ್ರುವರಿ 2 ರಂದು ಅವಳು ಅಸುನೀಗಿದಳು.

ಸಕಲ ಸೈನಿಕ ಗೌರವದೊಂದಿಗೆ ಆಕೆಯ ಅಂತ್ಯಕ್ರಿಯ ಬೈಲಹೊಂಗಲದಲ್ಲಿ ನೆರವೇರಿತು. ಅವಳ ಆ ಸಮಾಧಿಯ ಮೇಲೆ ಸ್ಮಾರಕಮಂಟಪ ನಿರ್ಮಾಣವಾಗಿದೆ. ಅನಂತರ ಕೆಲವು ತಿಂಗಳುಗಳಲ್ಲಿ ಅಂದರೆ 1829 ರ ಜುಲೈ 20 ರಂದು ಇನ್ನೂ ಬಂಧನದಲ್ಲಿರುವಾಗಲೇ ಆಕೆಯ

ಸೊಸೆ ಜಾನಕಿಬಾಯಿಯೂ ತೀರಿಕೊಂಡಳು. ಭಾರತದಲ್ಲಿ ಬ್ರಿಟಿಷ್ ಆಧಿಪತ್ಯದ ವಿರುದ್ಧ ಸಂಪೂರ್ಣ ಬಂಡಾಯದ ಅರುಣೋದಯಕ್ಕೆ ಹಿನ್ನೆಲೆಯಾಗಿ, ಗುಲಾಮಗಿರಿಯ ವಿಷಣ್ಣವಾದ ಕತ್ತಲೆಯ ಕಾಲದಲ್ಲಿ ಬಂಡಾಯದ ದಿವ್ಯಜ್ಯೋತಿಯನ್ನು ಹೊತ್ತಿಸಿದ ಮಹಾರಾಜ್ಞಿ ರಾಣಿ ಚೆನ್ನಮ್ಮನ ಜೀವನವು ಹೀಗೆ ದುರಂತಮಯವಾದ ರೀತಿಯಲ್ಲಿ ಕೊನೆಗೊಂಡಿತು.

# 9. ಸುಪ್ತಜ್ವಾಲೆ

ರಾಣಿ ಚೆನ್ನಮ್ಮ ಸೋತಳು. ಕಿತ್ತೂರ ಸೈನ್ಯ ಅಪಜಯ ಅನುಭವಿಸಿತು. ಕಿತ್ತೂರ ದೇಸಗತಿಯು ಆಕ್ರಮಕ್ಕೊಳಗಾಯಿತು. ಅಷ್ಟಾದರೂ ಕಿತ್ತೂರಿನ ಪ್ರಜೆಗಳು ಕಿತ್ತೂರ ಅರಸರ ಬಗ್ಗೆ ಮತ್ತು ಕಿತ್ತೂರ ನಾಡಿನ ಬಗ್ಗೆ ಮೊದಲಿನ ಆತ್ಮೀಯತೆ, ಅಭಿಮಾನಗಳನ್ನೇ ಮುಂದುವರಿಸಿಕೊಂಡು ನಡೆದರು. ಅವರು ಬಂಡಾಯದ ಬೂದಿಮುಚ್ಚಿದ ಕೆಂಡವಾಗಿ ದುರಹಂಕಾರಿಗಳಾದ ಬ್ರಿಟಿಷರ ವಿರುದ್ಧ ಸಿಡಿದೇಳಲು ಒಂದು ಸಂಧಿಗಾಗಿ ಕಾಯತೊಡಗಿದರು.

ಹಲವಾರು ಸಲ ಆಗೊಮ್ಮೆ ಈಗೊಮ್ಮೆ ಸ್ಫೋಟಗಳಾದವು. ಇವುಗಳಲ್ಲಿ ಅತ್ಯಂತ ಮಹತ್ವದ ಸ್ಫೋಟವೆಂದರೆ ಸಂಗೊಳ್ಳಿ ರಾಯಣ್ಣನ ಮುಖಂಡತ್ವದ 1829-30 ರಲ್ಲಿಯ ಬಂಡಾಯ. ರಾಯಣ್ಣನು ರಾಣಿ ಚೆನ್ನಮ್ಮನ ಅತ್ಯಂತ ನಿಷ್ಠಾವಂತ ದೇಶಭಕ್ತ ಅನುಯಾಯಿಗಳಲ್ಲೊಬ್ಬನು. ಅವನು ರಾಣಿ ಚೆನ್ನಮ್ಮನ ಮರಣಾನಂತರವೂ ಹೋರಾಟ ವನ್ನು ಮುಂದುವರಿಸುವುದಾಗಿ ಆಕೆಗೆ ವಚನಕೊಟ್ಟಿದ್ದನು. ಆತನ ಕಣ್ಣೆದುರಿಗೆ ಯಾವಾಗಲೂ ಆಕೆಯ ಆದರ್ಶವೇ ನಿಂತಿರುತ್ತಿತ್ತು. ಕಿತ್ತೂರಿನ ಉತ್ತರಕ್ಕೆ ಸುಮಾರು ಮೂವತ್ತು ಮೈಲು ಅಂತರದಲ್ಲಿರುವ ಸಂಗೊಳ್ಳಿಯ ಗ್ರಾಮರಕ್ಷಕನು ಸಂಗೊಳ್ಳಿ ರಾಯಣ್ಣ. ಅವನು ಕಿತ್ತೂರ ದೇಸಾಯಿಗಳ ನಂಬಿಗಸ್ಥ ಅನುಚರನು. 1824 ರ ಯುದ್ಧದಲ್ಲಿ ಅವನು ನಿರ್ವಹಿಸಿದ ಕಾರ್ಯಕ್ಕಾಗಿ ಆ ಊರಿನ ಗ್ರಾಮರಕ್ಷಕತ್ವ ಅವನಿಗೆ ದೊರಕಿತ್ತು. ಅವನು ಶಿವಲಿಂಗರುದ್ರ ಸರ್ಜನ ದತ್ತಕ ಪುತ್ರನಾದ, ನ್ಯಾಯಸಮ್ಮತ ಹಕ್ಕುದಾರನಾದ ಶಿವಲಿಂಗಪ್ಪನಿಗೆ ಕಿತ್ತೂರ ದೇಸಗತಿಯನ್ನು ಪುನಃ ದೊರಕಿಸಿಕೊಡಲು ತಾನು ಒಪ್ಪಿಕೊಂಡ ಉದ್ದೇಶಕ್ಕಾಗಿ ರಾಣಿ ಚೆನ್ನಮ್ಮನ ಸ್ವಾಮಿನಿಷ್ಠ ಅನುಯಾಯಿಗಳ ಒಂದು ಗುಂಪು ಕೂಡಿಸಿದನು. ಸುಮಾರು ಎರಡು ವರುಷ ಬ್ರಿಟಿಷರ ವಿರುದ್ಧ ಕಠಿಣತರ ಬಂಡಾಯ ಹೂಡಿದನು. ಈ ವರ್ಷಗಳಲ್ಲಿ ಸಂಗೊಳ್ಳಿ ರಾಯಣ್ಣನು ಬ್ರಿಟಿಷರ ಭದ್ರ ಸ್ಥಳಗಳನ್ನು ಅನೇಕ ದಿಕ್ಕುಗಳಿಂದ ಬಿಡಿ–ಬಿಡಿಯಾಗಿ ಕಾಳಗ ಮಾಡುತ್ತ ಮುತ್ತಿಗೆ ಹಾಕಿದನು. ತನ್ನ ಮೂಲ ಸ್ಥಳಗಳಾದ ಬಳಗುಂದ ಮತ್ತು ಹಂದಿ ಬಡಗನಾಥ ಗುಡ್ಡಗಳ ಕಡೆಯಿಂದ ಅವನು ದಾಳಿಮಾಡುತ್ತಿದ್ದನು. 1830 ರಲ್ಲಿ ನಾಲ್ಕು ತಿಂಗಳುಗಳವರೆಗೆ ಸತತವಾಗಿ ಕಿತ್ತೂರ ಪ್ರದೇಶದ ಕೋಶಾಗಾರ ಮತ್ತು ಕಾರ್ಯಾಲಯ ಗಳನ್ನು ಆಕ್ರಮಿಸಿ ಕೊಳ್ಳೆಹೊಡೆದನು. ಆತನ ನಂದಗಡ, ಬೀಡಿ, ಸಂಪಗಾವ ಮತ್ತು ಖಾನಾಪುರಗಳ ಮುತ್ತಿಗೆಗಳು ಅತ್ಯಂತ ಯಶಸ್ವಿಯಾದವು. ಅವನು ಬ್ರಿಟಿಷರಿಗೆ ಅತ್ಯಂತ ಭಯಾನಕ ವ್ಯಕ್ತಿಯಾಗಿ ಕಂಡನು. ಇದು ಅವರನ್ನು ವಿಪರೀತವಾಗಿ ರೇಗಿಸಿತು.

ಕಿತ್ತೂರ ದೇಸಗತಿಯ ಜನತೆ ಸ್ವಾಭಾವಿಕವಾಗಿಯೇ ರಾಯಣ್ಣನಿಗೆ ಮತ್ತು ಆತನ ಬಂಡಾಯದ ಚಟುವಟಿಕೆಗಳಿಗೆ ಸಹಾನುಭೂತಿಯನ್ನು ತೋರಿತು. ಅವನನ್ನು ಹಿಡಿಯುವಲ್ಲಿ ಬ್ರಿಟಿಷ್ ಅಧಿಕಾರಿಗಳು, ಸೈನಿಕರು ಪರಾಜಯಗೊಂಡರು. ಅವರು ಅವನನ್ನು ಹಿಡಿದು ತಮ್ಮ ಸ್ವಾಧೀನಕ್ಕೆ ತಂದು ಕೊಟ್ಟವರಿಗೆ ಬಹುಮಾನ ಕೊಡುವುದಾಗಿ ಘೋಷಿಸಿದರು. ಇದು ಕೂಡ ಯಾವ ಪ್ರತಿಫಲವನ್ನು ತಂದುಕೊಡಲಿಲ್ಲ. ಆಮೇಲೆ ಅವರು ಕೆಲವು ಅತೃಪ್ತ ದ್ರೋಹಿಗಳನ್ನು ಹಿಡಿದುಕೊಂಡು, ರಾಯಣ್ಣನಿಗೆ ಬಲಿಹಾಕುವ ಸಂಚುಮಾಡಿದರು. ಕಿತ್ತೂರು ಅರಸುಮನೆತನಕ್ಕೆ ದೂರದ ಸಂಬಂಧಿಕನಾದ ಖೋದಾನ ಪುರದ ಲಿಂಗನಗೌಡನು ಕಿತ್ತೂರ ದೇಸಗತಿಗೆ ತನ್ನ ಮಗನನ್ನು ದತ್ತಕ ಕೊಡಲು ಅಪೇಕ್ಷಿಸಿ, ನಿರಾಶೆಪಟ್ಟಿದ್ದನು. ರಾಣಿ ಚೆನ್ನಮ್ಮ ಮತ್ತು ಕಿತ್ತೂರಿನ ಆಡಳಿತಗಾರರ ವಿರುದ್ಧ ತನ್ನ ಅಸಮಾಧಾನವನ್ನು ಬೆಳೆಯಿಸಿಕೊಂಡಿದ್ದನು. ಅವನು ಯಾವಾಗಿನಿಂದಲೂ ಬ್ರಿಟಿಷರೊಂದಿಗೆ ಬಿಟ್ಟೂಬಿಡದೆ ಸಂಬಂಧವಿರಿಸಿಕೊಂಡಿದ್ದನು. ಮತ್ತು ಅವರ ವಿರುದ್ಧ ಚಾಡಿ ಹೇಳುತ್ತಲೇ ಇದ್ದನು. ಬ್ರಿಟಿಷರು ಅವನನ್ನು ಒಲಿಸಿಕೊಂಡರು. ರಾಯಣ್ಣನನ್ನು ಬಂಧಿಸುವಂಥ ಉಪಾಯವನ್ನು ಸಂಚುಗೊಳಿಸಲು ಅವನಿಗೆ ಪ್ರೇರೇಪಿಸಿದರು. ದೇಹದಿಂದ ದುರ್ಬಲನಾದ ಸ್ವಭಾವದಿಂದ ಕ್ರೂರನಾದ ಲಿಂಗನಗೌಡನು ಅದಕ್ಕೆ ಒಪ್ಪಿಕೊಂಡನು. ಅವನು ದೈಹಿಕವಾಗಿ ಸಬಲನಾದ ಹಾಗೂ ಗಟ್ಟಿ ಮುಟ್ಟಾದ ನೇಗಿನಹಾಳದ ವೆಂಕನಗೌಡ ಎಂಬ ಇನ್ನೊಬ್ಬ ಮನುಷ್ಯನ ನೆರವು ಪಡೆದನು. ಮತ್ತೊಮ್ಮೆ ನಮ್ಮವರಿಂದಲೇ ಮೋಸವಾಯಿತು. ಇದು ಬ್ರಿಟಿಷರಿಗೆ ತಮ್ಮ ಸಾಮ್ರಾಜ್ಯವನ್ನು ಬಲಪಡಿಸಲು ಸಹಾಯಕವಾಯಿತು. ಅವರಿಬ್ಬರು ಜೊತೆಯಾಗಿ ದ್ರೋಹಿಗಳ ಪಾತ್ರ ವಹಿಸಿದರು. ಅವರು ಬ್ರಿಟಿಷರ ವಿರುದ್ಧ ರಾಯಣ್ಣನ ಬಂಡಾಯದಲ್ಲಿ ಸೇರುವುದಾಗಿ ಮೊದಲು ನಟನೆಮಾಡಿ ಕೆಲವು ತಿಂಗಳು ಆತನನ್ನು ಹಿಂಬಾಲಿಸಿದರು. ಒಂದು ದಿವಸ ರಾಯಣ್ಣನು ಸ್ನಾನಕ್ಕಿಳಿದಾಗ ಆತನನ್ನು ಬಂಧಿಸಲು ಆಯುಧಧಾರಿ ಪೋಲೀಸರ ಒಂದು ಗುಂಪು ಅಲ್ಲಿಗೆ ಬರುವಂತೆ ಅವರು ವ್ಯವಸ್ಥೆಮಾಡಿದರು. ಅನಿರೀಕ್ಷಿತವಾಗಿ ಅವನು ಪೂರ್ಣವಾಗಿ ನಿರಾಯುಧನಾಗಿದ್ದಾಗ ಅವರ ಕೈಗೆ ಸಿಕ್ಕಿಕೊಂಡನು. ಪೋಲೀಸರು ಅವನನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಬಂಧಿಸಿಬಿಟ್ಟರು. ಅವನು ಅಪರಾಧಿಯೆಂದು ನಿರ್ಣಯಿಸಲ್ಪಟ್ಟು, ಮರಣದಂಡನೆಗೆ ಗುರಿಯಾದನು. ಬ್ರಿಟಿಷರಿಗೆ ಜನರನ್ನು ಭಯಭೀತರನ್ನಾಗಿ ಮಾಡಬೇಕಾಗಿದ್ದರಿಂದ, ಆತನನನ್ನು ಆತನ ಪ್ರೀತಿಯ ಸ್ಥಳವಾದ ನಂದಗಡದಲ್ಲಿ ಸಾರ್ವಜನಿಕ ಸ್ಥಳವೊಂದರಲ್ಲಿ ಗಲ್ಲಿಗೇರಿಸಲು ನಿರ್ಧರಿಸಿದರು. ಕೇವಲ ಕೆಲವೇ ದಿನಗಳ ಹಿಂದೆ ಇದೇ ಸ್ಥಳದಲ್ಲಿ ಆತನು ಯಶಸ್ವಿಯಾಗಿ ಖಜಾನೆಯನ್ನು ಲೂಟಿಮಾಡಿದ್ದನು. 1830ರ ಡಿಸೆಂಬರ್ 28ರಂದು ಅವನು ಗಲ್ಲಿಗೇರಿಸಲ್ಪಟ್ಟನು. ಸಾವನ್ನು ಅವನು ಮುಗುಳ್ನಗೆ ಬೀರುತ್ತ ಸ್ವಾಗತಿಸಿದನು. ಬ್ರಿಟಿಷ್ ಅಧಿಕಾರಿಗಳು ಆಗ ಅವನಿಗೆ – "ನಿನ್ನ ಕೊನೆಯ ಬಯಕೆ ಏನು? ಹೇಳು" ಎಂದು ಕೇಳಲು, ಅವನು – "ಈ ನಾಡಿನಲ್ಲಿ ಇನ್ನೊಮ್ಮೆ ಜನಿಸಿ, ಬ್ರಿಟಿಷರೊಂದಿಗೆ ಹೋರಾಡಬೇಕು ಮತ್ತು ಈ ಪವಿತ್ರ ಭೂಮಿಯಿಂದ ಅವರನ್ನು

ಹೊರಹಾಕಬೇಕು ಎಂಬುದೇ ನನ್ನ ಕೊನೆಯ ಬಯಕೆ'' ಎಂದು ಮಾರ್ನುಡಿದನು. ಅವನು ಹತ್ತಿ ನಿಲ್ಲಲು ಕುರ್ಚಿಯನ್ನೂ, ಕೊರಳಿಗೆ ಹಾಕಲು ನೇಣನ್ನೂ ತರಲಾಯಿತು. ಅವನು ಕುರ್ಚಿಯನ್ನು ಒದ್ದು, ನೇಣನ್ನು ತನ್ನ ಕೈಯಲ್ಲಿ ತೆಗೆದುಕೊಂಡು, ತಾನೇ ತನ್ನ ಕೊರಳಿಗೆ ಹಾಕಿಕೊಂಡು, ಅದನ್ನು ಸೆಳೆಯಲು ಅಧಿಕಾರಿಗಳಿಗೆ ಸನ್ನೆ ಮಾಡಿದನು. ಈ ಅದಮ್ಯ ಚೈತನ್ಯವು ಹೀಗೆ ಶ್ರೇಷ್ಠ ಸ್ವಾತಂತ್ರ್ಯ ಹೋರಾಟಗಾರನ ಮನೋಧೈರ್ಯವನ್ನು ಪ್ರದರ್ಶಿಸಿದ್ದು, ಭಾರತೀಯರಲ್ಲಿ ಧನ್ಯತೆಯ ಭಾವವನ್ನು ಹುಟ್ಟಿಸುತ್ತದೆ.

ರಾಣಿ ಚೆನ್ನಮ್ಮ ಮತ್ತು ಜಾನಕಿಬಾಯಿಯವರ ಮರಣಾನಂತರ ಬದುಕಿ ಉಳಿದ ವೀರವ್ವನನ್ನು ಕೆಲಸಮಯ ಬೈಲಹೊಂಗಲ ಜೈಲಿನಲ್ಲಿ ಇಡಲಾಯಿತು. ಚೆನ್ನಮ್ಮನ ಸತ್ವವನ್ನೇ ತನ್ನಲ್ಲಿರಿಸಿಕೊಂಡ ವೀರವ್ವನೂ ಕೂಡ ಅದಮ್ಯ ಧೈರ್ಯದ ಮಹಿಳೆಯಾಗಿದ್ದಳು. ಅವಳೂ ಕೂಡ ಕೊನೆಯವರೆಗೆ ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಹೋರಾಡಲು ನಿರ್ಧರಿಸಿದ್ದಳು. ಕಿತ್ತೂರಿನ ಸ್ವಾತಂತ್ರ್ಯ ಯೋಧರಿಗೆ ಅವಳು ರಹಸ್ಯವಾಗಿ ಸಂದೇಶ ಕಳಿಸಿದ್ದಳು. ಇನ್ನೊಂದು ಬಂಡಾಯವನ್ನು ಸಂಘಟಿಸಲು ಪ್ರಯತ್ನ ನಡೆಸಿದ್ದ ಕಿತ್ತೂರಿನ ಕೆಲವು ಸರದಾರರಿಗೆ ಆಕೆ ಹಣವನ್ನು ಕಳುಹಿಸುತ್ತಿದ್ದಳು. ಈ ವಿಷಯ ಬ್ರಿಟಿಷರಿಗೆ ತಿಳಿಯಿತು. ಅವರು ವೀರವ್ವನನ್ನು ಬೈಲಹೊಂಗಲದಿಂದ ದೂರದ ಸ್ಥಳಕ್ಕೆ ಸ್ಥಳಾಂತರಿಸಲು ನಿರ್ಣಯಿಸಿದರು. ಮೊದಲು ಅವಳನ್ನು ಕುಸುಗಲ್ಲಿಗೂ ಅನಂತರ ಅಲ್ಲಿಂದ ಖಾನದೇಶ ಜಿಲ್ಲೆಯ ಮಾಲೆಗಾಂವಕ್ಕೂ ಕಳಿಸಲು ಉದ್ದೇಶಿಸಲಾಯಿತು. ಇದು ಜನರಿಗೆ ತಿಳಿದೊಡನೆಯೇ ಅವರು ಬಹುಸಂಖ್ಯೆಯಲ್ಲಿ ಆಕೆಯನ್ನು ಅಲ್ಲಿಂದ ಸ್ಥಳಾಂತರಿಸುವುದನ್ನು ಪ್ರತಿಭಟಿಸಲು ಬೈಲಹೊಂಗಲ ಕೋಟೆಯ ಸುತ್ತ ಬಂದು ನೆರೆದರು. ಒಂದು ಸಾವಿರಕ್ಕೂ ಹೆಚ್ಚು ಜನರು ಕೋಟೆಯ ಹೊರಗಡೆಯಲ್ಲಿ ಕೂಡಿದರು. ಆಗ ಯಾವುದೇ ಬಗೆಯ ಪ್ರತಿರೋಧವನ್ನು ಹತ್ತಿಕ್ಕಲು ಬ್ರಿಟಿಷರು ಒಂದು ದೊಡ್ಡ ಸೈನ್ಯವನ್ನು ಅಲ್ಲಿಗೆ ಕರೆತಂದರು. ಇದನ್ನು ಕಂಡು ಜನರು ಅಸಹಾಯಕರಾಗಿ ಅಲ್ಲಿಂದ ಚದುರಿಹೋದರು.

ಭಾರೀ ಬಂದೋಬಸ್ತಿನಲ್ಲಿ ವೀರವ್ವನು ಕುಸುಗಲ್ ಕೋಟೆಗೆ ಕಳಿಸಲ್ಪಟ್ಟಳು. ಅಲ್ಲಿ ಅವಳ ಆರೋಗ್ಯವು ದಿನದಿಂದ ದಿನಕ್ಕೆ ಕ್ಷೀಣಿಸತೊಡಗಿತು. ಅವಳು ತೀವ್ರವಾಗಿ ಶಕ್ತಿ ಗುಂದುತ್ತ ಸಾವಿಗೆ ಸಮೀಪಿಸುತ್ತಿರುವುದು ಬ್ರಿಟಿಷರಿಗೆ ತಿಳಿದಾಗ, ಅವರು ಅವಳನ್ನು ಧಾರವಾಡದಲ್ಲಿರುವ ಅವಳ ಸಂಬಂಧಿಕರ ಕಡೆಗೆ ಕಳಿಸಿಕೊಟ್ಟರು. ಸ್ವಲ್ಪ ಗುಣಹೊಂದಿದ ಮೇಲೆ ಆಕೆಯನ್ನು ಉಳವಿ ಚೆನ್ನಬಸವೇಶ್ವರ ದೇವಾಲಯಕ್ಕೆ ತರಲಾಯಿತು. ಆಮೇಲೆ ಆಗಿನ ಧಾರವಾಡದ ಕಲೆಕ್ಟರನಾಗಿದ್ದ ಮಿ.ಬಾಬರನು ಆಕೆಗೆ ವಿಷಪ್ರಾಶನ ಮಾಡಿಸಿದನೆಂದು ವದಂತಿಯಿದೆ. ಆಕೆಯ ದುರಂತ ಮರಣವು ಜಾನಪದ ಹಾಡುಗಳಲ್ಲಿ ವಿವರವಾಗಿ ಚಿತ್ರಿತವಾಗಿದೆ. ಅಂತಿಮವಾಗಿ ವಿಷಪ್ರಾಶನ ಮಾಡುವ ಮೊದಲು, ಕಿತ್ತೂರಿನ ಕೊನೆಯ ಕೊನೆದರ್ಶನ ಪಡೆಯಲು ಆಕೆ ಮಿ. ಬಾಬರನಿಂದ ಅನುಮತಿಯನ್ನು ಪಡೆದುಕೊಂಡಳು. ದೇವಾಲಯದ ಮಾಳಿಗೆಯ ಮೇಲೆ ಏರಿ, ಕಿತ್ತೂರಿನ ಅರಮನೆಯ ಗೋಪುರವನ್ನು ಹಾಗೂ ಕೋಟೆಯನ್ನೂ ಕಣ್ತುಂಬ ನೋಡಿ,

ನಿಟ್ಟುಸಿರನ್ನು ಎಳೆದಳು. ಗತವೈಭವವನ್ನು ಸ್ಮರಿಸಿಕೊಂಡಳು. ನಂತರ ಕೆಳಗಿಳಿದು, ತನಗೆ ಕೊಟ್ಟ ವಿಷವನ್ನು ಸ್ವೀಕರಿಸಿ ವೀರಮರಣವನ್ನು ಪಡೆದಳು.

ಮತ್ತೆ 1833 ರಲ್ಲಿ ಶಂಕರಣ್ಣ ಎಂಬುವನು ಕಿತ್ತೂರಿನಲ್ಲಿಯ ಬ್ರಿಟಿಷ್ ಆಧಿಪತ್ಯದ ವಿರುದ್ಧ ಬಂಡಾಯವೇಳುವುದರ ವಿಫಲ ಪ್ರಯತ್ನ ಮಾಡಿದನು. 1836ರಲ್ಲಿ ನಾಗಪ್ಪ, ಗಜಪತಿ ಮತ್ತು ಸವಾಯಿ ರುದ್ರಪ್ಪ ಕೊಟಗಿ ಇವರ ನೇತೃತ್ವದಲ್ಲಿ ಒಂದು ಬಂಡಾಯಗಾರರ ಗುಂಪು ಗೋವೆಯ ಪೋರ್ಚುಗೀಸರ ನೆರವಿನಿಂದ ಬ್ರಿಟಿಷರ ವಿರುದ್ಧ ಹೋರಾಡಲು ಯತ್ನಿಸಿತು. ಇದೂ ಕೂಡಾ ವಿಫಲವಾಯಿತು. 1837 ರಲ್ಲಿ ಸವಾಯಿ ಮಲ್ಲಸರ್ಜನೆಂದು ಹೆಸರಾದ ಶಿವಲಿಂಗಪ್ಪನು ಒಂದು ಬಂಡಾಯವನ್ನು ಹೂಡಿದನು. ಆದರೆ ಅವನು ಬ್ರಿಟಿಷರ ಕೈವಶನಾಗಿ, ಬಂಧನಕ್ಕೊಳಗಾಗಿ ದೊಡ್ಡವಾಡ ಕೋಟೆಯಲ್ಲಿ ಕೆಲವುಕಾಲ ಸೆರೆಮನೆಯ ಶಿಕ್ಷೆಯನ್ನು ಅನುಭವಿಸಿದನು. 1845 ರಲ್ಲಿ ಶಿವಲಿಂಗಪ್ಪನು ಸಂಪಗಾವ ಮತ್ತು ಬೀಡಿಗಳಲ್ಲಿ ಬ್ರಿಟಿಷರ ವಿರುದ್ಧ ಬಂಡೇಳಲು ಇನ್ನೊಂದು ಪ್ರಯತ್ನವನ್ನು ಮಾಡಿದನು. ಆತನ ಸೋದರಮಾವನಾದ ವಂಟಮುರಿ ದೇಸಾಯಿಯೇ ಆತನ ಈ ಯೋಜನೆಯನ್ನು ಬ್ರಿಟಿಷರಿಗೆ ತಿಳಿಸಿದನು. ಕೆಲವು ರಹಸ್ಯ ಪತ್ರಗಳು ಇಂಗ್ಲಿಷರಿಗೆ ದೊರೆತವು. ಅವರು ಶಿವಲಿಂಗಪ್ಪನನ್ನು ಬಂಧಿಸಿ ಕೆಲವು ಕಾಲ ಸೆರೆಮನೆಯಲ್ಲಿಟ್ಟರು. ಕೆಲವು ತಿಂಗಳುಗಳ ನಂತರ ವಂಟಮುರಿ ದೇಸಾಯಿಯವರಿಂದ ಮತ್ತು ಶಿವಲಿಂಗಪ್ಪನ ಪ್ರದೇಶವಾದ ಸಾಂಗಲಿ ಅರಸರಿಂದ ಜಾಮೀನುಪಡೆದು ಅವನನ್ನು ಬಿಡುಗಡೆ ಮಾಡಲಾಯಿತು. 1857ರಲ್ಲಿ ಎದೆಗುಂದದ ಶಿವಲಿಂಗಪ್ಪನು ಬ್ರಿಟಿಷರ ವಿರುದ್ಧ ಬಂಡೇಳಲು ಇನ್ನೊಂದು ವಿಫಲಯತ್ನವನ್ನು ಮಾಡಿದನು.

ರಾಣಿ ಚೆನ್ನಮ್ಮನಿಂದ ಹೊತ್ತಿಸಲ್ಪಟ್ಟ ಜ್ವಾಲೆಯು ನಂದಲಿಲ್ಲ. ಕಿತ್ತೂರಿನ ಜನರ ಎಲ್ಲ ಪ್ರಯತ್ನಗಳು ವ್ಯರ್ಥವಾದರೂ, ಆ ನಾಡಿನ ಸ್ವಾತಂತ್ರಪ್ರೇಮಿಗಳ ಹೃದಯದಲ್ಲಿ ಮೂರು ದಶಕಗಳಿಗೆ ಮಿಗಿಲಾಗಿ ಚೆನ್ನಮ್ಮನು ಹೊತ್ತಿಸಿದ ಆ ಜ್ವಾಲೆ ಸುಪ್ತವಾಗಿತ್ತು. ಅವರು ಭವಿಷ್ಯತ್ತಿನಲ್ಲಿ ದೇಶದ ತುಂಬ ನಡೆಯಬಹುದಾದ ಇಂಥ ಕಾರ್ಯಕ್ಕೆ ಅಗ್ರಗಾಮಿಗಳಾಗಿ ನಿಂತರು. ಶಿವಲಿಂಗಪ್ಪನ ಹೋರಾಟದ ವರ್ಷದಲ್ಲಿಯೇ ಅಂದರೆ 1857 ರಲ್ಲಿಯೇ ಪ್ರಥಮ ಸ್ವಾತಂತ್ರ್ಯ ಹೋರಾಟಕ್ಕೆ ನಾಂದಿಯನ್ನು ಹಾಡಿತು. ಆದ್ದರಿಂದ ಅವಳನ್ನು "ಭಾರತ ಸ್ವಾತಂತ್ರ್ಯ ಹೋರಾಟದ ಬೆಳ್ಳಿಯ ಚಿಕ್ಕಿ" ಎಂದು ಕರೆಯುವುದು ಔಚಿತ್ಯ ಪೂರ್ಣವಾದುದು.

# 10. ಅವಿಸ್ಮರಣೀಯ ಇತಿಹಾಸ

ಕಿತ್ತೂರಿನ ಕೊನೆಯ ಯುದ್ಧ ಘಟಿಸಿ 150ಕ್ಕಿಂತ ಹೆಚ್ಚು ವರುಷಗಳು ಕಳೆದುಹೋದರೂ ಕಿತ್ತೂರಿನ ಉಜ್ವಲ ಹಾಗೂ ವೈಭವಪೂರ್ಣ ಇತಿಹಾಸ ಮತ್ತು ಅದಮ್ಯ ಚೈತನ್ಯದ ನೆನಪು, ಅಸಂಖ್ಯ ಕವಿತೆ, ಜನಪದ ಹಾಡು, ನಾಟಕ ಮುಂತಾದವುಗಳ ಮೂಲಕ ಜನತೆಯ ಮನಸ್ಸು ಮತ್ತು ಹೃದಯಗಳಲ್ಲಿ ಹಸಿರಾಗಿಯೇ ಇದೆ. ಇದು ಕರ್ನಾಟಕದ ಉತ್ತರಭಾಗದ ತುಂಬ ಪಸರಿಸಿರುವ ಅನೇಕ ಅವಶೇಷಗಳಲ್ಲಿ ಅವಿಸ್ಮರಣೀಯವಾಗಿ ಉಳಿದಿವೆ. ಇಂಥ ಅವಶೇಷಗಳಲ್ಲಿ ಕಿತ್ತೂರ ಅರಮನೆ ಮತ್ತು ಕೋಟೆಯ ಭಗ್ನಾವಶೇಷಗಳು ಅತ್ಯಂತ ಮಹತ್ವದ್ದು ಎಂಬುದರಲ್ಲಿ ಸಂದೇಹವಿಲ್ಲ.

## ಕಿತ್ತೂರ ಕೋಟೆ

ಒಂದು ಕಾಲದಲ್ಲಿ ಬಲಾಢ್ಯವಾದುದೆಂದು ಹೆಸರಾದ ದೊಡ್ಡ ಕೋಟೆಯ ಭಗ್ನಾವಶೇಷಗಳು, ಹಾಳುಬಿದ್ದ ಗೋಡೆಗಳು ಮಾತ್ರ ಇಂದು ನೋಡಲು ಸಿಗುತ್ತವೆ. ಅವುಗಳಲ್ಲಿ ಅತ್ಯಂತ ಮಹತ್ವದ್ದೆಂದರೆ ಕೋಟೆಯ ಕಡೆಗೆ ಹೊರಟಾಗ ಕಣ್ಣಿಗೆ ಬೀಳುವ ಬಹಾದ್ದೂರಗಡ. ಇದು ಕೋಟೆಯ ನೈಋತ್ಯ ದಿಕ್ಕಿನಲ್ಲಿ, ಅದರ ಹೊರಗೆ, ನೈಸರ್ಗಿಕವಾದ ಒಂದು ಸಣ್ಣ ಗುಡ್ಡದ ಮೇಲೆ, ಸಮಪ್ರದೇಶದಲ್ಲಿ ಅತ್ಯುನ್ನತವಾಗಿ ಇದೆ. ಕಾವಲು ಗೋಪುರವಾಗಿರುವ ಬಹಾದ್ದೂರಗಡದ ಮೇಲಿಂದ ಸುತ್ತಲಿನ ಹಸಿರು ಹುಲ್ಲುಗಾವಲಿನ ವಿರಳವಾದ ಕಾಡುಳ್ಳ ಸುತ್ತಮುತ್ತಲಿನ ಪ್ರದೇಶದ ಅತ್ಯಂತ ಸಮಗ್ರ ಭವ್ಯದೃಶ್ಯವನ್ನು ನೋಡಬಹುದು. ಹಸಿರು ಹುಲ್ಲುಗಾವಲು ಕ್ರಮೇಣ ಪಶ್ಚಿಮದೆಡೆಯಲ್ಲಿಯ ಪರ್ವತಗಳಲ್ಲಿ ಸೇರಿಕೊಳ್ಳುವಂತೆ ದೃಷ್ಟಿ ಪಥದಿಂದ ಮರೆಯಾಗುತ್ತ ಹೋಗುತ್ತದೆ. ಉಳಿದ ಕಡೆಗಳಲ್ಲಿ ದಿಗಂತವ್ಯಾಪಿಯಾಗಿ ಮರೆಯಾಗುತ್ತದೆ. ಗೋಪುರದ ಉತ್ತರಕ್ಕೆ ರಣಗಟ್ಟಿಕೆರೆಯಿದೆ. ಇಲ್ಲಿಯೇ ರಾಣಿ ಚೆನ್ನಮ್ಮನ ಅತ್ಯಂತ ಉಗ್ರವಾದ ನಿರ್ಧಾರದಿಂದ ಬ್ರಿಟಿಷರೊಂದಿಗೆ ತನ್ನ ಕೊನೆಯ ಭೀಕರ ಕಾಳಗವನ್ನು ಮಾಡಿದ್ದು.

ಕೋಟೆ ವರ್ತುಳಾಕಾರದ್ದಾಗಿದ್ದು, ಹೊರಗೆ ಕಂದಕಗಳಿದ್ದ ಜೋಡು ಗೋಡೆಗಳಿಂದ ಕೂಡಿದೆ. ಹೊರಗಡೆಯ ಗೋಡೆಯ ಬಾಹ್ಯಕ್ಕೆ ಅರ್ಧವರ್ತುಳಾಕೃತಿಯ ಬುರುಜುಗಳಿವೆ. ಪೂರ್ವದ ಕಡೆಗೆ ಮೂಲತಃ ಮುಖ್ಯ ಮಹಾದ್ವಾರವಿದ್ದು, ಅದು 'ಆನೆಹೊಂಡ' ಎಂಬ ಹೊರಗಿನ ಕಂದಕಕ್ಕೆ ಅಡ್ಡವಾಗಿರುವ ಎತ್ತರಿಸಿ ಮಾಡಿದ ದಾರಿಗೆ ಹೊಂದಿಕೊಂಡಿದೆ. ಆನೆಹೊಂಡವನ್ನು ಆನೆಗಳ ಸ್ನಾನಕ್ಕಾಗಿ ಉಪಯೋಗಿಸಲಾಗುತ್ತಿತ್ತು.

ಸುರಕ್ಷತತೆಯ ದೃಷ್ಟಿಯಿಂದ ಗೋಡೆಗಳ ಮೂಲಕ ಇರುವ ಪ್ರದೇಶವು ಉದ್ದೇಶಪೂರ್ವಕವಾಗಿ ಒಂದು ಸಾಲಿನಲ್ಲಿ ಇಲ್ಲ. ಸುತ್ತುಸುತ್ತಾಗಿರುವ ದಾರಿಯನ್ನು ದಾಟಿಹೋದಮೇಲೆ, ಅರಮನೆಯ ಮುಖ್ಯ ಪ್ರವೇಶದ ಎದುರುಗಡೆಗೆ ಹೋಗಬೇಕಾ ಗುತ್ತದೆ. ಅರಮನೆಯು ಒಳಗಿನ ಕೋಟೆಯ ಗೋಡೆಯ ಉತ್ತರದ ಕಮಾನಿನ ಹತ್ತಿರವಿದೆ. ಅರಮನೆಯ ದಕ್ಷಿಣಕ್ಕೆ, ಕೋಟೆಯ ಒಳಗಡೆಯಲ್ಲಿ, ಹಾಳಾದ ಕುದುರೆಯ ಲಾಯಗಳಿವೆ. ಅಲ್ಲಿಯೇ ಬಹುಶಃ ಅರಮನೆಯ ಮುಖ್ಯ ಅಧಿಕಾರಿಗಳಿಗಾಗಿರುವವರ ವಾಸದ ಮನೆಗಳ ಅಸ್ತಿಭಾರಗಳಿವೆ. ನೈಋತ್ಯಕ್ಕೆ ನಿಯಮಿತವಾದ ಸ್ಥಳಾವಕಾಶವುಳ್ಳ ಸಮಾಂತರದ ಆಧಾರಗೋಡೆಗಳ ಪಂಕ್ತಿಗಳಿಂದ ಭಾರಬೀಳದಂತೆ ಗಟ್ಟಿಮುಟ್ಟಾಗಿ ಕಟ್ಟಿದ ಕಾವಲು ಗೋಪುರವಿದೆ.

## ಅರಮನೆ

ಅರಮನೆಯ ಮುಖ್ಯ ಮಹಾದ್ವಾರವು ಸದ್ಯ ಹಾಳಾಗಿದ್ದು, ಅದು ಸೈನಿಕ ಮತ್ತು ಅಶ್ವದಳದವರ ರಕ್ಷಕ ಕೋಣೆಗಳ ಶ್ರೇಣಿಯನ್ನೊಳಗೊಂಡಿದೆ. ಅರಮನೆಯ ಅತ್ಯಂತ ಆಕರ್ಷಕವಾದ ರಚನೆಯೆಂದರೆ ಎದುರಿಗಿನ ದ್ವಾರಮಂಟಪ. ಅದು 100 ಅಡಿ ವಿಸ್ತಾರವೂ 300 ಅಡಿ ಉದ್ದವೂ ಆಗಿದೆ. ದ್ವಾರಮಂಟಪದ ಮುಂಭಾಗ ಗಟ್ಟಿಮುಟ್ಟಾದ ಕಲ್ಲಿನ ತಳಹದಿಯಿರುವ ಎತ್ತರ ವಿನ್ಯಾಸದ ಕಲ್ಲಿನ ಕಂಬಗಳ ಶ್ರೇಣಿಯಿಂದ ಶೋಭಿಸುತ್ತದೆ.

ಇಡೀ ಅರಮನೆಯ ರಚನಾಕ್ರಮ ಒಂದು ಶ್ರೇಷ್ಠ ಕಲಾಕೃತಿಯಾಗಿದೆ. ಕೂಡುವ ಹಾಗೂ ಅತಿಥಿಗಳ ಕೋಣೆಗಳು, ಸಭಾಗೃಹ, ಭೋಜನಾಲಯ, ಉಗ್ರಾಣ, ಸ್ನಾನದ ಮನೆ, ಈ ಎಲ್ಲ ಅರಮನೆಗೆ ಸಂಬಂಧಿಸಿದ ಭಾಗಗಳು ಅತ್ಯಂತ ವ್ಯವಯಸ್ಥಿತವಾಗಿ ನಿರ್ಮಿತವಾಗಿವೆ. ಪ್ರತಿಯೊಂದು ಭಾಗವು ಸ್ವತಂತ್ರವಾಗಿದ್ದು, ಉಳಿದ ಭಾಗಗಳಲ್ಲಿ ಹಾಯದೆ ಮೂಲಕ್ಕೆ ಹೊಂದಿಕೊಂಡಿವೆ; ಪ್ರತಿಯೊಂದು ಕೋಣೆಯು ಎರಡು ಪ್ರವೇಶ ದ್ವಾರಗಳನ್ನು ಹೊಂದಿದ್ದು, ಪ್ರತಿಯೊಂದು ಪ್ರವೇಶವು ಬೇರೆ ಬೇರೆ ಕೋಣೆಗಳಿಗೆ ಹೋಗುತ್ತದೆ. ಇವೆಲ್ಲವೂ ಅತ್ಯಂತ ಸೂಕ್ಷ್ಮ ಹಾಗೂ ಕುಶಲ ರಚನಾಕ್ರಮದ ಉದಾಹರಣೆಗಳಾಗಿವೆ. ಅರಮನೆಯ ಹಾಗೂ ಅದರ ಕೋಣೆಗಳ ವಿವರವಾದ ವರ್ಣನೆಯು ಅನಗತ್ಯವೆನಿಸಿದರೂ ಗಮನಾರ್ಹವಾದ ಕೆಲವು ಮಹತ್ವದ ಅಂಶಗಳನ್ನು ಹೇಳುವುದು ಪ್ರಸ್ತುತ. ಅರಮನೆಯ ಅತ್ಯಂತ ಪ್ರಭಾವಿಯಾದ ಒಳಗಿನ ಭಾಗವೇ ಸಭಾಗೃಹ. ಇದು ಬಹಳ ದೊಡ್ಡದಾಗಿಲ್ಲ. ಇದು ಸರದಾರರು ಮತ್ತು ಇತರ ಮೇಲಾಧಿಕಾರಿಗಳೊಂದಿಗೆ ರಹಸ್ಯವಾಗಿ ಆಲೋಚಿಸುವುದಕ್ಕಾಗಿ ರಚಿಸಿರುವ ಸ್ಥಳವಾಗಿದೆ. ಈ ಗೃಹದ ಗೋಡೆಗಳು ಬೆನ್ನಿನಾಸರೆಯ ಸಾಧನಗಳನ್ನು ಹೊಂದಿವೆ. ಸಭಾಗೃಹಕ್ಕೆ ಹೊಂದಿಕೊಂಡು ರಾಜ ಅತಿಥಿಗಳು ಮುಂತಾದವರ ಸತ್ಕಾರಕ್ಕಾಗಿ ಸಾಂದರ್ಭಿಕವಾಗಿ ಏರ್ಪಡಿಸುವ ಭೋಜನ ಕೂಟಕ್ಕಾಗಿ ಬಹಳ ದೊಡ್ಡದಾದ ಒಂದು ಭೋಜನಾಲಯವಿದೆ. ರಾಜ ಕುಟುಂಬದವರಿಗಾಗಿ ಈಜುಗೊಳದಂತೆ ಉಪಯೋಗವಾಗುವ ಒಂದು ಬಯಲು ಕೆರೆ ಅರಮನೆಯ ಎಡಗಡೆಗಿದೆ. ಅರಮನೆಯ ಮುಂಭಾಗದಲ್ಲಿ, ಎಡಗಡೆಗೆ ವಿಶಿಷ್ಟ

ಉದ್ದೇಶಕ್ಕಾಗಿ ಬಳಸುವ ಒಂದು ಕೋಣೆಯಿದೆ; ಈ ಕೋಟೆಯ ಗೋಡೆಗಳ ಮಧ್ಯದಲ್ಲಿ ಸುಮಾರು 1.5 ಅಡಿ ವ್ಯಾಸದ ಓರೆಯಾಗಿ ಕೂಡಿಸಿದ ಕಬ್ಬಿಣದ ಕೊಳವೆಯಿದ್ದು, ಅದು ಆಕಾಶದ ಕಡೆಗೆ ತೆರೆದಿದೆ. ಇದು ಧ್ರುವ ನಕ್ಷತ್ರವನ್ನು ನೋಡಲಿಕ್ಕಾಗಿಯೇ ಮಾಡಿದ್ದಾಗಿದೆ. ಈ ಕೊಳವೆಯ ಕೆಳತುದಿಗೆ ಕುಳಿತುಕೊಳ್ಳಲು ಒಂದು ವೇದಿಕೆಯಿದೆ. ಇವೆಲ್ಲವುಗಳಿಗಿಂತ ಹೆಚ್ಚು ಚಾತುರ್ಯದಿಂದ ಮಾಡಿದ್ದು ಅತ್ಯುತ್ತಮವಾದ ನೀರಿನ ಪೂರೈಕೆಯ ವ್ಯವಸ್ಥೆ. ಒಂದು ಕಡೆಯೆ ಸಂಗ್ರಹಿಸಿದ ನೀರಿನಿಂದ ಇಡೀ ಅರಮನೆಗೆ ನೀರಿನ ಪೂರೈಕೆಯಾಗುತ್ತದೆ. ದೊಡ್ಡದಾದ ಬಯಲಿನಲ್ಲಿಯ ಹಿಂಬದಿಯ ವರಾಂಡದ ಮಧ್ಯದಲ್ಲಿ ಒಂದು ನೀರಿನ ಭಾವಿಯಿದೆ. ನೀರು ತುಂಬಿಕೊಳ್ಳುವ ಪಾತ್ರೆಗಳು ಉತ್ಕೃಷ್ಟವಾದ ಕಲ್ಲಿನಿಂದ ಮಾಡಲ್ಪಟ್ಟಿವೆ. ಅದರ ಮಗ್ಗಲುಗಳಲ್ಲಿ ಮತ್ತು ಅರಮನೆಯ ಒಳಗಿನ ಹಿಂದಿನ ಗೋಡೆಗೆ ಹೊಂದಿಕೊಂಡ ಎರಡು ಮೂಲೆಗಳಲ್ಲಿ ಜಲಾಶಯಗಳಿವೆ. ಈ ಪಾತ್ರೆಗಳಲ್ಲಿ ಭಾವಿಯಿಂದ ನೀರು ಸೇದಿ ಸುರಿಯಲಾಗುತ್ತದೆ. ಇಲ್ಲಿಂದ ನೀರು ಎಲ್ಲ ಜಲಾಶಯಗಳಿಗೆ ಕಣ್ಣಿಗೆ ಕಾಣದಂತೆ ಇಡಲ್ಪಟ್ಟ ತಾಮ್ರದ ಕೊಳವೆಯ ಮೂಲಕ ಅಡಿಗೆಯ ಮನೆಗೂ ಪೂರೈಸಲ್ಪಡುತ್ತದೆ. ಕಲ್ಲಿನ ಬಾನೆಗಳನ್ನು ಭೋಜನಾಲಯ, ಅಡಿಗೆಯ ಮನೆ ಮತ್ತು ಇತರ ಕೋಣೆಗಳ ಬೇರೆ ಬೇರೆ ಭಾಗಗಳಲ್ಲಿ ಸೂಕ್ತವಾದ ಸ್ಥಳಗಳಲ್ಲಿ ಇಡಲಾಗಿದೆ.

ಅರಮನೆಗೆ ಸಂಬಂಧಿಸಿದ, ಆಸಕ್ತಿಯನ್ನು ಕೆರಳಿಸುವ, ಇನ್ನೊಂದು ಸಂಗತಿಯೆಂದರೆ ಅತ್ಯುತ್ತಮವಾದ ಉದ್ಯಾನ. ಇದು ಕೊಳಗಳು, ಕಾರಂಜಿಯ ಧಾರಾನಾಳಿಗಳು ಮೊದಲಾದವುಗಳಿಂದ ಕೂಡಿಕೊಂಡಿದೆ. ಉದ್ಯಾನದಲ್ಲಿ ನೆಲಗಟ್ಟಿಯ ಉಪಯೋಗಿಸಿದ ಇಟ್ಟಿಗೆಗಳು ಅತ್ಯುತ್ತಮ ಗುಣಮಟ್ಟದವು ಮತ್ತು ಬೇರೆ ಬೇರೆ ಆಕಾರ ಹಾಗೂ ಅಳತೆಗಳುಳ್ಳವಾಗಿವೆ. ಗೋಡೆಗಳು – ಅವುಗಳಲ್ಲಿ ಕೆಲವು ಇಂದಿಗೂ ಅಚ್ಚಳಿಯದಂಥವು – ಕೇವಲ ಆರು ಅಂಗುಲ ದಪ್ಪವಾಗಿವೆ. ಆದರೆ ನಾವು ನಂಬಲಾಗದಷ್ಟು ಗಟ್ಟಿಮುಟ್ಟಾಗಿವೆ. ಇಡೀ ಅರಮನೆಯು ಸ್ಫಟಿಕ ಶಿಲೆ, ಸುಣ್ಣದ ಕಲ್ಲು ಮತ್ತು ಅಲಂಕರಿಸಿದ ಕಲ್ಲುಗಳಿಂದೊಡಗೂಡಿ ಚದರ ಕಲ್ಲಿನಿಂದ ಮತ್ತು ಗಟ್ಟಿಮುಟ್ಟಾದ ಹಳದಿ ಗಾರೆಯಿಂದ ಕಟ್ಟಿದ ಕಟ್ಟಡವಾಗಿದೆ. ಒಂದರ ಮೇಲೆ ಒಂದು ಇಟ್ಟ ಹಸಿರಾದ ಪದರು ಗಲ್ಲುಗಳಿಂದ, ವರ್ತುಲಾಕಾರದ ಚಕ್ರಗಳಿಂದ ಕಂಬಗಳು ನಿರ್ಮಿತವಾಗಿವೆ. ಇಲ್ಲಿಯೂ ಜೋಡಿಸುವ ಸಲಕರಣೆಯಾಗಿ ಹಳದಿ ಗಾರೆಯನ್ನೇ ಉಪಯೋಗಿಸಲಾಗಿದೆ. ಗೋಡೆಗಳಲ್ಲಿನ ಮಾಡ, ಸ್ನಾನದ ಹಾಗೂ ಅಡಿಗೆಯ ಮನೆಯ ಗೋಡೆಗಳು, ಕೋಣೆಗಳ ಗೋಡೆಗಳ ಕೆಳಭಾಗಗಳಿಗೆ ಮಾಡಿದಂತೆ ಕಟ್ಟಡದ ಮೇಲ್ಮೈಗೆ ಭಾಗಶಃ ಗಿಲಾಯಿಮಾಡಲಾಗಿದೆ. ನೆಲಗಟ್ಟುಗಳ ಪದರು ಗಲ್ಲುಗಳು ಚೆನ್ನಾಗಿ ಅಲಂಕರಿಸಲ್ಪಟ್ಟ ಆಯತಾಕಾರದ ಹಾಸುಗಲ್ಲುಗಳಿಂದ ಕೂಡಿದ್ದು ಅತ್ಯಂತ ಸೊಗಸಾಗಿ ನಿರ್ಮಿತವಾಗಿವೆ. ಮಗ್ಗಲು ಗೋಡೆಗಳಿಗೆ ಮತ್ತು ಕೋಣೆಗಳಿಗೆ ಬೆಳಕು, ಗಾಳಿಗಳನ್ನು ಪೂರೈಸುವಂತೆ ವ್ಯವಸ್ಥಿತವಾಗಿ ಕಟ್ಟಿದ ಕಿಟಕಿಗಳು ಮತ್ತು ಗೋಡೆಯ ಮಾಡಗಳು ಇವೆ. ಚದರ ಕಲ್ಲಿನಿಂದ ಕಟ್ಟಿದ ಕಟ್ಟಡದ ಕೆಲಸ ಮತ್ತು ಕಮಾನಾಕಾರದ ಮಾಡಗಳು ಮುಸ್ಲಿಮ್ ಮತ್ತು ಮರಾಠಾ ಕಟ್ಟಡಗಳ ಪರಂಪರೆಯನ್ನು ಸ್ಪಷ್ಟವಾಗಿ ಹೋಲುತ್ತವೆ. ಕಿತ್ತೂರಿನ ಅರಮನೆಯು ವಾಸ್ತುಶಿಲ್ಪದ ಈ ಪ್ರಕಾರಕ್ಕೆ ಒಂದು ಅತ್ಯುತ್ತಮ ಮಾದರಿಯಾಗಿದೆ.

## ಕಿತ್ತೂರಿನ ಕಲ್ಲುಮಠದ ಆವರಣದಲ್ಲಿಯ ಸಮಾಧಿಗಳು

ಕಿತ್ತೂರಿನ ಅವಶೇಷಗಳ ಮಹತ್ವದಲ್ಲಿ ಅದ್ವಿತೀಯವಾಗಿರುವವು ಕಿತ್ತೂರಿನ ಕಲ್ಲುಮಠದ ಆವರಣದಲ್ಲಿ ಹೂಳಲ್ಪಟ್ಟ ಕಿತ್ತೂರಿನ ಬೇರೆ ಬೇರೆ ಅಧಿಪತಿಗಳ ಶೋಭಾಯಮಾನವಾದ ಸಮಾದಿಗಳು. ಇಂಥ ಒಟ್ಟು ಆರು ಸಮಾಧಿಗಳು ಇಲ್ಲಿವೆ. ಅವು ಮುದಿಮಲ್ಲಪ್ಪ ಸರದೇಸಾಯಿ, ಮಾಲವ ರುದ್ರಗೌಡ ಉರ್ಫ ಫಕೀರರುದ್ರಸರ್ಜ, ವೀರಪ್ಪಗೌಡ ಸರದೇಸಾಯಿ, ಮಲ್ಲಸರ್ಜ, ರಾಣಿ ಚೆನ್ನಮ್ಮನ ಮಗ ಬಾಳಾಸಾಹೇಬ ಮತ್ತು ಶಿವಲಿಂಗರುದ್ರ ಸರ್ಜರ ಸಮಾಧಿಗಳು. ಶಿವಲಿಂಗ ಮತ್ತು ನಂದಿಯನ್ನು ಹೊಂದಿದ್ದು ಕಟ್ಟಡ ರಚನೆಯಲ್ಲಿ ಬಹಳ ಸಾದಾ ಇರುವ ಒಂದು ಕೋಣೆಯಲ್ಲಿ ಮುದಿಮಲ್ಲಪ್ಪ ಸರದೇಸಾಯಿ, ಮಲ್ಲಸರ್ಜ, ಬಾಳಾಸಾಹೇಬ ಮತ್ತು ಶಿವಲಿಂಗ ಸರ್ಜರ ಸಮಾಧಿಗಳಿವೆ. ಅವುಗಳ ಕೆಳಗಿರುವ ನೆಲಮನೆಗಳು ಪ್ರವೇಶಕ್ಕೆ ಸುಗಮವಾಗಿಲ್ಲ ಹಾಗೂ ಹೊರಗಿನಿಂದ ಕಾಣುವಂತಿಲ್ಲ. ಆದರೂ ವೀರಪ್ಪಗೌಡ ಸರದೇಸಾಯಿಯವರ ಸಮಾಧಿಯು ಎರಡು ಕೋಣೆಗಳಿಂದ ಕೂಡಿದ್ದು, ಒಳಗಿನದು ಶಿವಲಿಂಗವುಳ್ಳದ್ದಾಗಿ, ಹೊರಗಿನದು ನಂದಿಯುಳ್ಳದ್ದಾಗಿದೆ. ಗೋಡೆಗಳ ಮೇಲೆ ಎದ್ದು ಕಾಣುವ ಮೂರ್ತಿಶಿಲ್ಪಿಗಳು, ಸೇವುಣ ನಾಡಿನ 13ನೆಯ ಶತಮಾನದ ಶಿಲ್ಪಕ್ಕೆ ಹೋಲಿಸಬಹುದಾದ ದ್ವಾರಮಂಟಪ ಮತ್ತು ಚೆನ್ನಾಗಿ ಕೆತ್ತಿದ ದ್ವಾರ ಚೌಕಟ್ಟು ಇವುಗಳಿಂದ ಕೂಡಿದ ಈ ಸಮಾಧಿ ಅತ್ಯುತ್ತಮವಾದುದೆಂದು ಪರಿಗಣಿಸಲಾಗಿದೆ. ಇದಲ್ಲದೆ ನೆಲಗಟ್ಟಿಗೆ ಹತ್ತಿರದಲ್ಲಿಯ ಕೆಳಗಿನ ಗೋಡೆಗಳಿಗೆ ಅಡಿಗಲ್ಲಾಧಾರದ ಸ್ಥಳದಲ್ಲಿ ರಂದ್ರಕೊರೆದ ಗ್ರಿಲ್‌ಗಳಿದ್ದು, ಅವುಗಳೊಳಗಿಂದ ಕೆಳಗಿನ ಸಮಾಧಿಯನ್ನು ನೋಡಬಹುದು. ಫಕೀರರುದ್ರ ಸರ್ಜರ ಸಮಾಧಿಯು ಗೋರಿಯುಳ್ಳ ನೆಲಮನೆಯ ಒಳಮಾಳಿಗೆಯಲ್ಲಿ ಸಂಪೂರ್ಣ ಅರಳಿದ ಕಮಲ ಸುಂದರವಾಗಿದೆ. ನೆಲದ ಪಾತಳಿಯಲ್ಲಿಯ ಮೇಲಿನ ಕೋಣೆಯ ಒಳಗಿನ ಗೋಡೆಗಳ ಮೇಲೆ ಗಣೇಶ ಮತ್ತು ದುರ್ಗಾ ಇವರ ಮೂರ್ತಿಶಿಲ್ಪಿಗಳಿವೆ.

## ರಾಣಿ ಚೆನ್ನಮ್ಮನ ಸಮಾಧಿ

ರಾಣಿ ಚೆನ್ನಮ್ಮನ ಬೈಲಹೊಂಗಲದಲ್ಲಿಯ ಸಮಾಧಿಯು ಯಾವ ಆಡಂಬರವೂ ಇಲ್ಲದ್ದು. ಅದರ ಮೇಲೆ ಈಚೆಗೆ ಪೂಜೆಮಾಡುತ್ತ ಕುಳಿತ ರಾಣಿ ಚೆನ್ನಮ್ಮನ ಸಣ್ಣ ಕಪ್ಪು ಶಿಲೆಯ ಪ್ರತಿಮೆಯನ್ನು ಸ್ಥಾಪಿಸಲಾಗಿದೆ.

## ಸ್ಮಾರಕ ಸ್ತಂಭ

ಧಾರವಾಡದಲ್ಲಿ ಕೆಲವು ಮಹತ್ವದ ಅವಶೇಷಗಳಿವೆ. ಅವುಗಳಲ್ಲಿ ಅತ್ಯಂತ ಮಹತ್ವದ ಅವಶೇಷ, ಥ್ಯಾಕರೇನ ನೆನಪಿಗಾಗಿ ಕಟ್ಟಿಸಲ್ಪಟ್ಟ ಸ್ಮಾರಕ ಸ್ತಂಭ. ಈ ಸಮಾಧಿಯ ಸುತ್ತ 'ಕಿತ್ತೂರ ಚೆನ್ನಮ್ಮನ ಪಾರ್ಕ' ಎಂಬ ಹೆಸರಿನ ಒಂದು ಉದ್ಯಾನವನ್ನು ಬೆಳೆಸಲಾಗಿದೆ. ನಗರದ ಪಶ್ಚಿಮ ಭಾಗದಲ್ಲಿ 1824 ಅಕ್ಟೋಬರ 23ರ ಕಿತ್ತೂರ ಯುದ್ಧದಲ್ಲಿ ಮಡಿದ ಯುರೋಪಿಯನ್ ಅಧಿಕಾರಿಗಳ ಸಮಾಧಿಗಳುಳ್ಳ ಒಂದು ಸ್ಮಶಾನವಿರುವುದನ್ನು ಕಾಣಬಹುದು. ಆ

ಸಮಾಧಿಗಳಲ್ಲಿ ಅತ್ಯಂತ ಮಹತ್ವದ್ದು ಥ್ಯಾಕರೇನ ಸಮಾಧಿ. ಈ ಸಮಾಧಿಯಲ್ಲಿ ಕಂದುಬಣ್ಣದ ಅಮೃತಶಿಲೆಯ ಫಲಕವೊಂದನ್ನು ಕೂಡಿಸಲಾಗಿದ್ದು, ಅದರಮೇಲೆ ಈ ಕೆಳಗಿನ ಮಾತುಗಳನ್ನು ಕೆತ್ತಲಾಗಿದೆ.

ಸೇಂಟ ಜಾನ್ ಥ್ಯಾಕರೆ
ಮುಖ್ಯ ಕಲೆಕ್ಟರ ಮತ್ತು ಪೊಲಿಟಿಕಲ್ ಏಜಂಟ
ದಕ್ಷಿಣ ಮರಾಠಾ ದೋಅಬ
ಕಿತ್ತೂರಿನ ಬಂಡಾಯದಲ್ಲಿ ಕೊಲ್ಲಲ್ಪಟ್ಟನು.
ಅಕ್ಟೋಬರ 23, 1824.
ಅವನ ಪಾರ್ಥಿವ ಶರೀರವು ಇಲ್ಲಿ
ಹೂಳಲ್ಪಟ್ಟಿದೆ.

ಈ ಸಮಾಧಿಯಿಂದ ಸ್ವಲ್ಪ ದೂರದಲ್ಲಿ ಕ್ಯಾಪ್ಟನ್ ಬ್ಲ್ಯಾಕ್, ಲೆಫ್ಟನಂಟ ಸಿವೆಲ್ ಮತ್ತು ಲೆಫ್ಟನಂಟ ಡೆಯಟನ್ ಇವರ ದೇಹಗಳನ್ನು ಹೂಳಿದ ಇನ್ನೊಂದು ಸಮಾಧಿಯಿದೆ. ಈ ಸಮಾಧಿಯ ಮೇಲೂ ಒಂದು ಸುಂದರವಾದ ಕಂದುಬಣ್ಣದ ಅಮೃತಶಿಲೆಯ ಫಲಕ ಕೂಡಿಸಲಾಗಿದ್ದು, ಅದರಮೇಲೆ ಕೆಳಗಿನ ವಿಷಯವನ್ನು ಬರೆಯಲಾಗಿದೆ;

1824 ಅಕ್ಟೋಬರ 23 ರಂದು
ಕಿತ್ತೂರಿನ ಬಂಡಾಯವನ್ನು
ಅಡಗಿಸಲು ಸಾಹಸಪೂರ್ಣ ಪ್ರಯತ್ನಮಾಡುವಾಗ
ತಮ್ಮ ಪ್ರಾಣಗಳನ್ನು ಕಳೆದುಕೊಂಡ
ಮದ್ರಾಸ ಅಶ್ವದಳದ
ಕ್ಯಾಪ್ಟನ್ ಬ್ಲ್ಯಾಕ್, ಲೆಫ್ಟನೆಂಟ ಸಿವೆಲ್ ಮತ್ತು ಡೆಯಟನ್
ಇವರ ಸ್ಮರಣಾರ್ಥ

***

ಆ ದುರದೃಷ್ಟಕರ ಘಟನೆಯಲ್ಲಿ
ಅವರ ದೃಢನಿಷ್ಠೆಯ ವರ್ತನೆಯನ್ನು ಪ್ರತ್ಯಕ್ಷವಾಗಿ ಕಂಡ
ಅವರ ಸ್ನೇಹಿತರಿಂದ ಇದು ಕಟ್ಟಿಸಲ್ಪಟ್ಟಿರುವುದು.

ಈ ಎಲ್ಲ ಅವಶೇಷಗಳು ಭಾರತ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ರಾಣಿ ಚೆನ್ನಮ್ಮನು ನಿರ್ವಹಿಸಿದ ಅಸಾಧಾರಣವಾದ ಪಾತ್ರದ ಅಚ್ಚಳಿಯದ ದಾಖಲೆಗಳಾಗಿವೆ. ಅವು ದೇಶದ ಈ ಭಾಗದ ಸ್ವಾತಂತ್ರ್ಯ ಪ್ರೇಮಿಗಳಾದ ತರುಣ ಜನಾಂಗಕ್ಕೆ ಬತ್ತದ ಸ್ಫೂರ್ತಿಯ ನೆಲೆಗಳಾಗಿ ನಿಂತಿವೆ.

# 11. ಅಮರ ಕಿತ್ತೂರು

ಭಾರತ ಸ್ವಾತಂತ್ರ್ಯ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ಉಳಿದೆಲ್ಲ ಸಂಸ್ಥಾನಗಳಿಗೆ ಹೋಲಿಸಿದರೆ ಕಿತ್ತೂರು ಬಹಳ ಚಿಕ್ಕ ಸಂಸ್ಥಾನವೆನಿಸುವುದು. ಭಾರತದ ಅನೇಕ ಸಂಸ್ಥಾನಗಳು ಮತ್ತು ಜಹಗೀರುಗಳು ಯಥಾಪ್ರಕಾರ ಮುಂದುವರಿದವು ಅಥವಾ ತಮ್ಮ ಅಸ್ತಿತ್ವದ ಅವಧಿಯನ್ನು ಬೆಳೆಸಿಕೊಂಡವು. ಇದಕ್ಕೆ ಮುಖ್ಯ ಕಾರಣವೆಂದರೆ ಈ ಸಂಸ್ಥಾನಿಕರು ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯ ಕಟ್ಟಲು ನೆರವು ನೀಡಿದುದು ಇಲ್ಲವೆ ಬ್ರಿಟಿಷರೊಂದಿಗೆ ರಾಜಿ ಮಾಡಿಕೊಂಡು ತಮ್ಮ ಸ್ವಾತಂತ್ರ್ಯವನ್ನು ಮಾರಿಕೊಂಡುದುದು. ಭಾರತ ಸ್ವಾತಂತ್ರ್ಯದ ಉದಯ ಕಾಲದಲ್ಲಿ ಈ ಎಲ್ಲ ಸಂಸ್ಥಾನಗಳ ಅಸ್ತಿತ್ವ ಅಳಿದುಹೋಯಿತು. ಇಂದು ಅವುಗಳಲ್ಲಿ ಬಹಳಷ್ಟು ಮರೆತುಹೋಗಿವೆ. ಆದರೆ ಆರು ನೂರಕ್ಕೂ ಹೆಚ್ಚಾಗಿರುವ ಇಂಥ ಸಂಸ್ಥಾನಗಳಲ್ಲಿ ಕಿತ್ತೂರಿನ ಹೆಸರು ಬರೀ ಇತಿಹಾಸಪುಸ್ತಕಗಳಲ್ಲಷ್ಟೇ ಅಲ್ಲ, ಲಾವಣಿ, ಜನಪದ ಹಾಡು, ನಾಟಕ, ಕವಿತೆ ಮತ್ತು ಇತರ ಲೇಖನಗಳಲ್ಲಿ, ಜನರ ಹೃದಯ – ಮನಸ್ಸುಗಳಲ್ಲಿ ಇಂದಿಗೂ ಜೀವಂತವಾಗಿದೆ. ರಾಣಿ ಚೆನ್ನಮ್ಮನ ಕೆಚ್ಚೆದೆಯ ಹೋರಾಟದ ಕಥೆಯು ಆಕೆಯ ವೈಭವವನ್ನು ಚಿತ್ರಿಸುವ ಹಾಡುಗಳನ್ನು ಹಾಡುವ ಸಾವಿರಾರು ಹಳ್ಳಿಗರ ನಾಲಿಗೆಯ ಮೇಲೆ ನಲಿದಾಡುತ್ತಿದೆ. ಅನೇಕ ಸಂದರ್ಭಗಳಲ್ಲಿ ಆಕೆಯ ಶೌರ್ಯ ಸಾಹಸಗಳ ವಿವರವಾದ ಚರಿತ್ರೆಯು ನಾಟಕ ಹಾಗೂ ಚಲನಚಿತ್ರಗಳ ಮೂಲಕ ಜೀವಂತವಾಗಿ ಕಣ್ಣುಮುಂದೆ ಬಂದು ನಿಲ್ಲುತ್ತದೆ. ಇಂಥ ನಾಟಕ, ಚಲನಚಿತ್ರಗಳು ಕರ್ನಾಟಕದುದ್ದಕ್ಕೂ ಜನತೆಗೆ ಸ್ಫೂರ್ತಿಯನ್ನು ನೀಡುತ್ತವೆ.

ಕಿತ್ತೂರು ಇಂದು ಅಮರವಾಗಿ ಉಳಿದಿದೆ. ಯಾಕಂದರೆ ರಾಣಿ ಚೆನ್ನಮ್ಮನದು ಭಾರತದ ಸ್ವಾತಂತ್ರ್ಯ ಹೋರಾಟದ ವೈಭವಪೂರ್ಣ ಪರಂಪರೆಗೆ ಶಾಶ್ವತವಾದ ಕೊಡುಗೆಯಾಗಿದೆ. ಬ್ರಿಟಿಷರೊಂದಿಗೆ ಹೋರಾಡುವಾಗ ನುಚ್ಚುನುಗ್ಗಾದ ಸೈನಿಕ ಸೋಲನ್ನು ಕಿತ್ತೂರು ಅನುಭವಿಸಿತು. ಭಾರತದ ಅನೇಕ ಸಂಸ್ಥಾನಗಳೂ ಇಂಥ ಅನುಭವ ಪಡೆದಿವೆ. ಆದರೆ ಯಾವುದೇ ಸಂಸ್ಥಾನದ ಘನತೆ, ಗೌರವಗಳು ಯುದ್ಧಭೂಮಿಯಲ್ಲಿ ಅದು ಪಡೆದ ಗೆಲವು ಇಲ್ಲವೆ ಸೋಲಿನಮೇಲೆ ನಿಂತಿರುವುದಿಲ್ಲ. ಕಿತ್ತೂರಿನ ಶೂರ ಸೈನಿಕರ ಆತ್ಮಚೈತನ್ಯ, ಅವರಿಗೆ ಸ್ಫೂರ್ತಿಕೊಟ್ಟ ಘನವಾದ ಆದರ್ಶಗಳು ಇವು ಅವರ ಹಿರಿಮೆಯನ್ನು ಎತ್ತಿಹಿಡಿದಿವೆ; ಸ್ವಾತಂತ್ರ್ಯ ಜ್ಯೋತಿಯನ್ನು ಜಾಜ್ವಲ್ಯಮಾನವಾಗಿ ಸದಾ ಉರಿಯುವಂತೆ ಮಾಡುವ, ಸ್ವಾತಂತ್ರ್ಯಕ್ಕಾಗಿ ತಮ್ಮ ಸರ್ವಸ್ವವನ್ನು ಪಣಕ್ಕಿಟ್ಟು ಧೈರ್ಯ, ಸ್ಥೈರ್ಯಗಳ ಭವ್ಯ

ಮಾದರಿಯನ್ನು ಹಾಕಿಕೊಡುವ ಕಿತ್ತೂರಿನ ಸಾಹಸಗಳು ಅದನ್ನು ಅಮರಗೊಳಿಸಿವೆ. ಕಿತ್ತೂರಿನ ಜನತೆಯಲ್ಲಿಯ ದೇಶಭಕ್ತಿಯ ಹುಮ್ಮಸ್ಸು, ಸ್ವಾತಂತ್ರ್ಯ ಪ್ರೇಮ ಇವು ಗೌರವಾದರಗಳಿಂದ ಸ್ಮರಿಸಲ್ಪಡುವ ರಾಣಿ ಚೆನ್ನಮ್ಮನಿಂದ ಸ್ಫೂರ್ತಿಯನ್ನು ಪಡೆದಿವೆ.

ರಾಣಿ ಚೆನ್ನಮ್ಮನು ಸಣ್ಣ ಸಂಸ್ಥಾನದ ರಾಣಿಯಾಗಿದ್ದರೂ ಅವಳಲ್ಲಿ ರಾಜ ತಂತ್ರಜ್ಞತೆ, ಅದಮ್ಯ ಧೈರ್ಯ, ರಾಜಕೀಯದ ತೀವ್ರ ವಿಮರ್ಶನಾಶಕ್ತಿ, ಮನುಷ್ಯರನ್ನು ಹಾಗೂ ವಿಷಯಗಳನ್ನು ನಿರ್ಣಯಾತ್ಮಕವಾಗಿ ಗುರುತಿಸುವ ಅಸಾಧಾರಣ ಬುದ್ಧಿಶಕ್ತಿ, ಆಪತ್ಕಾಲ ದಂಥ ಪರಿಸ್ಥಿತಿಯಲ್ಲಿಯೂ ಒಂದೇ ರೀತಿಯಾಗಿ ಜಾಗೃತವಾಗಿರುವ ಮನಸ್ಸು ಮತ್ತು ಯುದ್ಧತಂತ್ರದ ಆಳವಾದ ಪರಿಜ್ಞಾನ ಈ ಮುಂತಾದ ಮುಖಂಡತ್ವದ ಸದ್ಗುಣಗಳಿದ್ದವು. ಅವಳು ಚತುರ ಆಡಳಿತಗಾರಳೂ ಕುಶಲ ರಾಜತಂತ್ರಜ್ಞಳೂ ಆಗಿದ್ದಳು. ಕುಶಲಳಾದ ಚೆನ್ನಮ್ಮ ಆಗಿಂದಾಗ್ಗೆ ಯಾವುದೇ ವಿಷಯದ ಬಗ್ಗೆ ನಿರ್ಣಯ ತೆಗೆದುಕೊಳ್ಳುತ್ತಿದ್ದಳು ಮತ್ತು ಒಮ್ಮೆ ತೆಗೆದುಕೊಂಡ ನಿರ್ಣಯವನ್ನು ಕಾರ್ಯರೂಪಕ್ಕೆ ತರಲು ಬದ್ಧಳಾಗಿರುತ್ತಿದ್ದಳು. ಇವೆಲ್ಲಕ್ಕಿಂತ ಹೆಚ್ಚಾಗಿ ಅವಳು ಕಿತ್ತೂರ ನಾಡನ್ನು, ಅಲ್ಲಿಯ ಜನತೆಯನ್ನು ಅನನ್ಯವಾಗಿ ಪ್ರೀತಿಸುತ್ತಿದ್ದಳು. ಅವಳ ಜೀವಿತದ ಕಾಲದಲ್ಲಿಯೇ ಈ ಎಲ್ಲ ಗುಣಗಳಿಂದ, ಆಕೆ ಒಂದು ಆಖ್ಯಾನವಾಗಿದ್ದಳು. ಆಕೆಯ ಕಾರ್ಯಗಳು ಯಾವಾಗಲೂ ಈ ಗುಣಗಳನ್ನು ಪಡಿನುಡಿಯುತ್ತಿದ್ದವು. ದರ್ಬಾರ ಕೂಡಿಸಿ ಬ್ರಿಟಿಷರೊಂದಿಗೆ ಎದುರುವಾದಿಸುವ ಮತ್ತು ತನ್ನ ರಾಜ್ಯವನ್ನು ಮುಂದುವರಿಸಿಕೊಂಡು ಹೋಗುವುದನ್ನು ಘೋಷಿಸುವ ಧೈರ್ಯ ಅವಳಿಗಿತ್ತು. ಯದ್ಧವನ್ನು ತಪ್ಪಿಸಲು ಅವಳು ಬಹಳವಾಗಿ ಯತ್ನಿಸಿದಳು. ಈ ಯತ್ನವನ್ನು ತನ್ನ ರಾಜ್ಯದ ಸ್ವಾತಂತ್ರ್ಯಕ್ಕೆ ಭಂಗತರದ ರೀತಿಯಲ್ಲಿ ಮಾಡಿದಳು. ಅತ್ಯಂತ ಘನತೆಯಿಂದ, ದೃಢನಿರ್ಧಾರದಿಂದ, ಸಮಚಿತ್ತದಿಂದ ಅವಳು ಬ್ರಿಟಿಷರೊಂದಿಗೆ ಸಂಧಾನ ನಡೆಸಿದಳು. ಹೀಗೆ ಸಂಧಾನ ನಡೆಸಿದಾಗ ಅವಳು ತನ್ನ ರಾಜತಂತ್ರಜ್ಞತೆಯ ಅಸಾಧಾರಣ ಗುಣಗಳನ್ನು ಪ್ರದರ್ಶಿಸಿದಳು. ಸಂಸ್ಥಾನದ ಸ್ವಾಯತ್ತತೆಯ ಬೇಡಿಕೆಯಲ್ಲಿ ಅವಳ ನಿಲುಮೆ ಅಚಲವಾಗಿತ್ತು. ಆದರೆ ಅವಳು ಏನನ್ನು ಒಪ್ಪಿಕೊಳ್ಳಬೇಕು ಮತ್ತು ಯಾವಾಗ ಒಪ್ಪಿಕೊಳ್ಳಬೇಕೆಂಬುದನ್ನು ಬಲ್ಲವಳಾಗಿದ್ದಳು. ಸಂಧಾನವು ಮುರಿದುಬಿದ್ದು, ಯುದ್ಧವು ಅನಿವಾರ್ಯವಾದಾಗ ಆಕೆಯು ತನ್ನ ಜನರ ಅಂತಃಪ್ರಜ್ಞೆಯನ್ನು ಎಚ್ಚರಿಸಿದಳು. ಕಿತ್ತೂರ ಜನತೆ ಆಕೆಯ ಯುದ್ಧ ಧ್ವನಿಗೆ ಪ್ರತಿಸ್ಪಂದಿಸುವಂತೆ ಎದ್ದು ನಿಂತಿತು. ತನ್ನ ವಿಜಯದ ಸಮಯದಲ್ಲಿ ಅವಳು ಗಾಢವಾದ ಮನುಷ್ಯತ್ವ ಹಾಗೂ ಉದಾರ ಹೃದಯ ಉಳ್ಳವಳಾಗಿದ್ದಳು. ಅವಳು ಕೈದಿಗಳನ್ನು ಕ್ಷಮಿಸಿದಳು. ಬಂಧನದಿಂದ ಬಿಡುಗಡೆ ಮಾಡಿದಳು. ಭಾರತೀಯ ಅರಸರು ತಮ್ಮ ಕೈದಿಗಳೊಂದಿಗೆ ನಡೆದುಕೊಂಡು ಬಂದ ಸತ್ಪರಂಪರೆಯಂತೆ, ಬಂಧಿಸಲ್ಪಟ್ಟ ಬ್ರಿಟಿಷ್ ಸೈನಾಧಿಕಾರಿಗಳ ಹೆಂಡಿರುಮಕ್ಕಳನ್ನು ಅವಳು ರಕ್ಷಿಸಿದಳು ಮತ್ತು ಮರಳಿ ಕಳಿಸಿದಳು. ಆದರೆ ಕಿತ್ತೂರಿನ ಸ್ವಾತಂತ್ರ್ಯದ ಪ್ರಶ್ನೆಬಂದಾಗ ರಾಜಿಯಾಗುವುದು ಸಾಧ್ಯವಿರಲಿಲ್ಲ. ಅವಳು ಅದಕ್ಕಾಗಿ ಹೋರಾಡುತ್ತ ಸಾಯಲೂ ಸಿದ್ಧಳಾಗಿದ್ದಳು. ಈ ಎಲ್ಲ ಸದ್ಗುಣಗಳಿಂದಾಗಿ ಆಕೆ ತನ್ನ

ಪ್ರಜೆಗಳಲ್ಲಿ ಸ್ವಾಮಿನಿಷ್ಠೆ ಮತ್ತು ದೇಶಭಕ್ತಿಯಂಥ ಗುಣಗಳನ್ನು ತುಂಬಲು ಸಮರ್ಥಳಾದಳು. ಅವರು ಆಕೆಗೆ ವಿಧೇಯರಾಗಿ ತಮ್ಮ ಪ್ರಾಣಗಳನ್ನು ಸಮರ್ಪಿಸಲು ಸಿದ್ಧರಾಗಿದ್ದರು.

ಆಯುಧಗಳು ಮತ್ತು ಯುದ್ಧಸಲಕರಣೆಗಳು ಕಡಿಮೆ ಇದ್ದಗ್ಯೂ ಕಿತ್ತೂರ ಸೈನಿಕರು – ಒಂದು ಸಣ್ಣ ಸೈನ್ಯ – ಕೇವಲ ಧೈರ್ಯ ಹಾಗೂ ದೃಢ ಸಂಕಲ್ಪದ ಬಲದಿಂದ ಬಹುಬಲಾಢ್ಯವಾದ ಸೈನ್ಯವೊಂದನ್ನು ಎದುರಿಸಿ ನಿಂತು ಹೋರಾಡಿದುದು ಒಂದು ಅಪರೂಪದ ಉದಾಹರಣೆಯಾಗಿದೆ. ಯುದ್ಧವನ್ನು ಪ್ರತ್ಯಕ್ಷವಾಗಿ ಕಂಡ ಬ್ರಿಟಿಷ್ ಅಧಿಕಾರಿಗಳೂ ಕೂಡ ಅವರ ಸಾಮರ್ಥ್ಯವನ್ನು ಬೆಳಕಿನ ಪುಂಜಯುಕ್ತ ಪದಗಳಲ್ಲಿ ವರ್ಣಿಸಿದ್ದಾರೆ. ದಕ್ಷಿಣದ ಕಮಿಶನರನಾದ ಚಾಪ್ಲಿನ್‌ನು ಕಿತ್ತೂರ ಸೈನಿಕರ ಧೈರ್ಯ, ಸಾಹಸ, ದೃಢನಿರ್ಧಾರಗಳನ್ನು ಕುರಿತು ಬರೆಯುತ್ತ – "ಕಿತ್ತೂರ ಬಂಡಾಯಗಾರರು ನಿರಂಕುಶವಾದ ಆತ್ಮಶಕ್ತಿ ಮತ್ತು ಪ್ರಚಂಡವಾದ ಧೈರ್ಯ ಉಳ್ಳವರಾಗಿದ್ದರು" ಎಂದು ಹೇಳಿದ್ದಾನೆ. ಕ್ಕಿತ್ತೂರಿನ ಮೇಲೆ ಅಂತಿಮ ವಿಜಯವನ್ನು ಸಾಧಿಸಿದ ಮೇಲೆ ವರದಿ ಮಾಡುತ್ತ ಚಾಪ್ಲಿನ್‌ನು ಕಿತ್ತೂರಿನ ಸೈನಿಕರಿಗೆ ಶ್ರೇಷ್ಠವಾದ ಗೌರವವನ್ನು ಸಲ್ಲಿಸಿದ್ದಾನೆ. ಅವನು ಬರೆದದ್ದು ಇಷ್ಟು: "ಚೈತನ್ಯ ಹಾಗೂ ಸಾಮರ್ಥ್ಯಗಳುಳ್ಳ ಅಸಾಧಾರಣವಾದ ದೃಢಸಂಕಲ್ಪದಿಂದ ಕಾವಲು ಪಡೆಯು ಭದ್ರವಾದ ಕಿತ್ತೂರಿನ ಕೋಟೆಯನ್ನು ರಕ್ಷಿಸಿತು."

ಕಿತ್ತೂರು ಸೋತನಂತರ ಅನೇಕ ವರುಷಗಳವರೆಗೆ ಪರಕೀಯ ಆಳಿಕೆಯ ವಿರುದ್ಧ ಆಗೊಮ್ಮೆ ಈಗೊಮ್ಮೆ ಪ್ರತಿಭಟಿಸುವ ಮತ್ತು ನಿಜವಾದ ಹಕ್ಕುಳ್ಳ ವಾರಸುದಾರರನ್ನು ಸಿಂಹಾಸನದ ಮೇಲೆ ಕೂಡಿಸುವ ಪ್ರಯತ್ನಗಳು ನಡೆದ ಸಂದರ್ಭಗಳಿವೆ. ಇದು ಕಿತ್ತೂರಿನ ರಾಜವಂಶದ ಬಗ್ಗೆ ಅಲ್ಲಿಯ ಜನರು ಇಟ್ಟುಕೊಂಡ ಅನನ್ಯ ನಿಷ್ಠೆಯನ್ನು ಎತ್ತಿತೋರಿಸುತ್ತದೆ. 1831 ರಷ್ಟು ತಡವಾಗಿ ಕೂಡ ಲಂಡನ್ನಿಗೆ ಕಳುಹಿಸಿದ ರಾಜಕೀಯ ಪತ್ರ (ಪೊಲಿಟಿಕಲ್ ಡಿಸ್‌ಪ್ಯಾಚಸ್ ಟು ಲಂಡನ್) ದಲ್ಲಿ ಧಾರವಾಡದ ಕಲೆಕ್ಟರ್ ಮಿ.ನಿಸ್ಬೆಟ್‌ನ ಈ ವರದಿಯ ಅವತರಣಿಕೆ ಕಂಡುಬರುತ್ತದೆ:

ನಮ್ಮ ನಂಬಿಕೆಯನ್ನು ದೃಢಪಡಿಸುವ ಏನಾದರೂ ಹೊಸ ಸಮಾಚಾರಗಳು ಪ್ರತಿನಿತ್ಯ ಬೆಳಕಿಗೆ ಬರುತ್ತವೆ. ಅವೆಂದರೆ – ಇಡೀ ರಾಜ್ಯವು ಒಂದು ಸಾಮಾನ್ಯವಾದ ಉದ್ದೇಶಕ್ಕಾಗಿ ಒಂದಾಗಿದೆ ಮತ್ತು ತಮ್ಮ ಸ್ವಾತಂತ್ರ್ಯವು ಮರಳಿ ದೊರೆಯುವುದು ಸಾಧ್ಯವಿದೆಯೆಂಬ ವಿಚಾರಕ್ಕೆ ಅಲ್ಲಿಯ ಜನರು ಯಾರಿಂದಲೋ ಸ್ಫೂರ್ತಿಪಡೆದವರಾಗಿದ್ದಾರೆ.

ಇನ್ನೊಂದು ಕಾಗದದಲ್ಲಿ ಈ ಕೆಳಗಿನಂತೆ ಅವನು ವರದಿಮಾಡಿರುವುದಾಗಿ ತಿಳಿದುಬಂದಿದೆ:

ಅಧಿಕ ಚಿಂತೆಯಿಂದ ನಾನು ಈ ವಿಷಯ ತಿಳಿಸಲೇಬೇಕಾಗಿದೆ. ಈ ನಾಡಿನ ಜನರು ತಮ್ಮ ಹಿಂದಿನ ಸರಕಾರದ ಗಾಢ ಸಂಬಂಧದಿಂದ, ಅವರಿಂದ ಬರುವ ಆದೇಶಗಳನ್ನು ಸ್ವೀಕರಿಸಿ ಅದರಂತೆ ಪಡೆಯಲು ಮನಸಾ ಸಿದ್ಧರಿರುವುದಾಗಿ ನನಗೆ ಸ್ಪಷ್ಟವಾಗಿ ಅನಿಸಿದೆ.

ಈ ಪ್ರದೇಶದ ಜನರು ಕಿತ್ತೂರಿನ ಸ್ವಾತಂತ್ರ್ಯದಲ್ಲಿ ಅಚಲ ನಂಬಿಕೆಯುಳ್ಳವರಾಗಿದ್ದಾರೆಂದು ಹೇಳಿ ಮುಂದುವರಿದು ಈ ರೀತಿ ವರದಿಮಾಡುತ್ತಾನೆ; "ದೇಸಾಯಿಯವರನ್ನು ಮರಳಿ

ಗದ್ದುಗೆಗೆ ತರುವ ಸಮಯ ಸನ್ನಿಹಿತವಾಗಿದೆ, ಅದಕ್ಕಾಗಿ ತಾವು ಹೋರಾಡಬೇಕು ಎಂದು ಕಿತ್ತೂರಿನ ಜನ ನಂಬಿದ್ದಾರೆ."

ತನ್ನ ಹೆದರಿಕೆಗೆ ಪೋಷಕವಾಗಿ ನಿಸ್ಬೆಟ್ ಒಂದು ವರದಿಮಾಡಿದ್ದಾನೆ. ಅದು ಹೀಗಿದೆ: "ಧಾರವಾಡದ ಕಲೆಕ್ಟರನು 3474 ಜನ ಶೇತಸನದಿಗಳಿಗೆ – ಅವರು ಬ್ರಿಟಿಷರಿಗೆ ನಿಷ್ಠರಾಗಿರುವುದನ್ನು ಘೋಷಿಸಲು ಆಜ್ಞೆ ಮಾಡಿದ್ದನು. ಆದರೆ ಅವರಲ್ಲಿ ಕೇವಲ 499 ಜನರು ಮಾತ್ರ ಹಾಗೆ ಮಾಡಲು ಒಪ್ಪಿಕೊಂಡರು. ಇದಕ್ಕೆ ಒಪ್ಪಿಗೆ ನೀಡದ ಉಳಿದವರು ಇನ್ನೂ ಕಿತ್ತೂರ ದೇಸಾಯಿಯವರಲ್ಲಿಯೇ ತಮ್ಮ ನಿಷ್ಠೆಯಿಟ್ಟುಕೊಂಡಂತೆ ತೋರುತ್ತದೆ. ಕಿತ್ತೂರು ಹಾಗೂ ಕಿತ್ತೂರಿನ ಒಡೆಯರ ಬಗ್ಗೆ ಅವರಿಗಿರುವ ಅಚಲವಾದ ನಿಷ್ಠೆ ಬಹಳ ದೊಡ್ಡದು ಮತ್ತು ಗಾಢವಾದದ್ದು. ಹೀಗೆ ಅವರ ಸ್ವಾತಂತ್ರ್ಯ ಪ್ರೇಮವು ಆಳವಾಗಿ ಬೇರುಬಿಟ್ಟಿತು. ಮತ್ತು ಅದು ಅಜೇಯವಾಗಿತ್ತು."

ಕಿತ್ತೂರಿನ ಯುದ್ಧವು ಬ್ರಿಟಿಷರೊಂದಿಗೆ ಮಾಡಿದ ಪ್ರಪ್ರಥಮ ಸ್ವಾತಂತ್ರ್ಯ ಯುದ್ಧವಾಗಿದೆ. 1824 ರ ಅಕ್ಟೋಬರ 23ನೆಯ ತಾರೀಖು ಬ್ರಿಟಿಷ್ ಸಾಮ್ರಾಜ್ಯ ಶಕ್ತಿಯೊಂದಿಗೆ ಒಂದು ಚಿಕ್ಕ ಸಂಸ್ಥಾನವು ಹೋರಾಡಿ ಪಡೆದ ವಿಜಯದ ಮಹಾದಿನವಾಗಿ ಇತಿಹಾಸದಲ್ಲಿ ಉಳಿಯುವುದು. ಆದ್ದರಿಂದ ಇದು 1857 ರ ಸ್ವಾತಂತ್ರ್ಯದ ಮಹಾಸಮರದ ಮತ್ತು 1942ರಲ್ಲಿ ಮಹಾತ್ಮಾ ಗಾಂಧೀಜಿಯವರ ನೇತೃತ್ವದಲ್ಲಿಯ ಸ್ವಾತಂತ್ರ್ಯ ಚಳುವಳಿಯ ಶಿಖರ ಪ್ರಾಯವಾದ 'ಭಾರತದಿಂದ ತೊಲಗಿರಿ' ಎಂಬ ಹೋರಾಟದ ಮುನ್ಸೂಚನೆಯೆನ್ನಬಹುದಾದ ಅತ್ಯಂತ ಮಹತ್ವದ ದಿನವಾಗಿದೆ. ರಾಣಿ ಚೆನ್ನಮ್ಮನ ಉದಾತ್ತವಾದ ಆದರ್ಶ, ಅದಮ್ಯ ಚೈತನ್ಯ, ಧೈರ್ಯ, ಸಾಹಸಗಳು ಮತ್ತು ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತ ನಗುನಗುತ್ತಲೇ ಪ್ರಾಣಾರ್ಪಣೆ ಮಾಡಿದ ಆಕೆಯ ದೇಶಭಕ್ತ ಅನುಯಾಯಿಗಳ ಕಾರ್ಯಗಳು ಇತಿಹಾಸದಲ್ಲಿ ಯಾವಾಗಲೂ ಬೆಳಕು ಬೀರುತ್ತ ನಿಂತಿರುತ್ತವೆ. ವೀರಯುಗದ ವ್ಯಕ್ತಿಗಳು ಕಣ್ಮರೆಯಾದರು ನಿಜ; ಆದರೆ ಅವರು ನಮ್ಮ ಸ್ಮರಣೆಯಲ್ಲಿ ಯಾವಾಗಲೂ ಜೀವಂತವಾಗಿಯೇ ಉಳಿಯುವವರು.

# ಕಿತ್ತೂರು ರಾಜ್ಯದ ದೇಸಾಯಿ ವಂಶ

## I.ಕಿತ್ತೂರು ರಾಜ್ಯದ ಅರಸರ ವಂಶಾವಳಿ (ಕ್ರಿ.ಶ.1585 - 1824)

1. ಹಿರೆ ಮಲ್ಲಶೆಟ್ಟಿ ಮತ್ತು ಚಿಕ್ಕಮಲ್ಲಶೆಟ್ಟಿ (1585 - 1591)
(ಸ್ಥಾಪಕರು, ಸರ್ದೇಶ್‌ಮುಖಿ ಹುಬ್ಬಳ್ಳಿಯಲ್ಲಿ ಆಳ್ವಿಕೆ.
ಬಿಜಾಪುರದ ಆದಿಲ್‌ಷಾಹಿ ರಾಜರಿಂದ "ಶಮ್‌ಷೇರ್
ಜಂಗ್ ಬಹದ್ದೂರ್" ಪಟ್ಟದ ನೀಡಿಕೆ.)

↓

2. ಹಿರೆ ನಾಗನಗೌಡ ಸರ್‌ದೇಸಾಯಿ ಪಟ್ಟಣಶೆಟ್ಟಿ (1591 - 1634)

↓

3. ಬಾಲನಾಗನಗೌಡ ದೇಸಾಯಿ ಉರ್ಫ ಚಿಕ್ಕನಗೌಡ (1634 - 1656)
(ಇಬ್ಬರು ಗಂಡು ಮಕ್ಕಳು)

↓

4. ಚೆನ್ನಪ್ಪ ದೇಸಾಯಿ (ಬಿಚಗತ್ತಿ) (1656 - 1660)
(ಹಿರೆ ಮಲ್ಲಶೆಟ್ಟಿಯ ಮೊಮ್ಮಗ)

↓

5. ಅಲ್ಲಪ್ಪಗೌಡ ಸರ್‌ದೇಸಾಯಿ (1660-1691)
(1682 ರಲ್ಲಿ ಕಿತ್ತೂರಿಗೆ ರಾಜಧಾನಿಯ ವರ್ಗಾವಣೆ.
ಕಿತ್ತೂರು ಕೋಟೆಯ ನಿರ್ಮಾಣ)

↓

6. ಮುದಿಮಲ್ಲಪ್ಪಗೌಡ ಸರ್‌ದೇಸಾಯಿ (1691-1696)
(ಮೂರು ಜನ ಗಂಡು ಮಕ್ಕಳು)

↓

7. ಚಿಕ್ಕಮಲ್ಲಪ್ಪ ದೇಸಾಯಿ (1696–1717)
(ಅಲ್ಲಪ್ಪಗೌಡ ದೇಸಾಯಿಯ ಮಗನಾದ ಮಲ್ಲಪ್ಪಗೌಡ ದೇಸಾಯಿಯ ಮಗ)

↓

8. ಶಿವನಗೌಡ ಸರ್‌ದೇಸಾಯಿ (1717-1734)
(ಮುದಿಮಲ್ಲಪ್ಪಗೌಡ ದೇಸಾಯಿಯ ಮಗ)



9. ಮಾಳವ ರುದ್ರಗೌಡ ಉರ್ಫ ಫಕೀರ್ ರುದ್ರಸರ್ಜ (1734-1749)



10. ವೀರಪ್ಪಗೌಡ ಸರ್‌ದೇಸಾಯಿ (1749-1782)
(ದತ್ತಕ ಮುದಿಮಲ್ಲಪ್ಪಗೌಡ ಸರ್‌ದೇಸಾಯಿಯ ಮೊಮ್ಮಗ)



11. ಮಲ್ಲಸರ್ಜ (1782-1816)
(ದತ್ತಕ ಮುದಿಮಲ್ಲಪ್ಪಗೌಡ ಸರ್‌ದೇಸಾಯಿಯ ಮರಿಮಗ;
ಇವನ ಎರಡನೆ ಪತ್ನಿ ರಾಣಿ ಚೆನ್ನಮ್ಮ)



12. ಶಿವಲಿಂಗ ರುದ್ರಸರ್ಜ ಉರ್ಫ ಬಾಪು ಸಾಹೇಬ (1816-1824)
(ಮಲ್ಲಸರ್ಜನ ಮಗ, ಮೊದಲ ಹೆಂಡತಿ ರುದ್ರಮ್ಮನಿಂದ)



13. ರಾಣಿ ಚೆನ್ನಮ್ಮ (1824)
(1824 ರ ಯುದ್ಧದಲ್ಲಿ ರಾಜ್ಯದ ಪತನದ ನಂತರ 1829 ರಲ್ಲಿ ನಿಧನ)



14. ಶಿವಲಿಂಗಪ್ಪ ಉರ್ಫ ಸವಾಯಿ ಮಲ್ಲಸರ್ಜ
(ದತ್ತಕ ಮುದಿಮಲ್ಲಪ್ಪ ಗೌಡ ಸರ್‌ದೇಸಾಯಿಯ ಮೊಮ್ಮಗನಾದ ಚಿಕ್ಕಮಲ್ಲಗೌಡ ಮಸ್ತಮರಡಿಯ ಮರಿಮಗ. 1858 ರಲ್ಲಿ ಸಂಪಗಾವ ಮತ್ತು ಬೀಡಿಗಳಲ್ಲಿ ನಡೆದ ಸಿಪಾಯಿ ದಂಗೆಯಲ್ಲಿ ಸೇರ್ಪಡೆ)

# II. ಕಿತ್ತೂರು ಅರಸರ ವಂಶಜರು

ಅಪ್ಪಾಸಾಹೇಬ (ಉರ್ಫ ಶಿವಲಿಂಗ ರುದ್ರ ಸರ್ಜ. ಕೊನೆಯ ಅರಸ ಶಿವಲಿಂಗಪ್ಪ ಉರ್ಫ ಸವಾಯಿ ಮಲ್ಲಸರ್ಜನ ಮಗ)




ಸೂ: ದಿ=ದಿವಂಗತ. ಜೀ=ಜೀವಂತ

ಐದನೇ ಅರಸನಾದ ಅಲ್ಲಪ್ಪಗೌಡ ಸರ್‌ದೇಸಾಯಿಯ ಮಗ ಚೆನ್ನಪ್ಪಗೌಡನ ವಂಶಜರು ತಿಗಡಿ ಮತ್ತು ಮರಿಕಟ್ಟಿಯಲ್ಲಿದ್ದಾರೆ.

Laser typeset at Saravu Graphic Impressions, New Delhi and
and printed at Taj Press, New Delhi